ಅಧ್ಯಾತ್ಮ ಗ್ರಂಥಾವಳಿ

# ಮಹಾಭಾರತ

## ಮೋಕ್ಷಧರ್ಮದ ಉಪದೇಶಗಳು

(ನಾರಾಯಣೀಯ - ಶುಕಾನುಶಾಸನ - ಶುಕಾನುಪ್ರಶ್ನ - ಶುಕವೃತ್ತಾಂತ)

ಅನುವಾದಕರು :

ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು

**ಕ್ರಮಾಂಕ : 268**

**ಅಧ್ಯಾತ್ಮಪ್ರಕಾಶಕಾರ್ಯಾಲಯ**

**ಹೊಳೆನರಸೀಪುರ - 573 211**

**ದೂರವಾಣಿ: 08175-273820**

www.adhyatmaprakasha.org.

email: secretary@adhyatmaprakasha.org

**ಬೆಂಗಳೂರುಶಾಖೆ :**

**ನಂ. 68, (ಹೊಸ ನಂ. 6), ಎ.ಪಿ.ಕೆ. ರಸ್ತೆ, 2ನೇ ಬ್ಲಾಕ್,**

**ತ್ಯಾಗರಾಜನಗರ, ಬೆಂಗಳೂರು - 28. ದೂ : 2676 5548**

email: shankara.bhaskara@gmail.com

**2016**

**Mahabharatha-Moksha-Dharmada Upadeshagalu:-** Translation of Sanskrit slokas to Kannada by **Sri Sri Satchidanandendra Saraswathi Swamiji:** Published by Adhyatma Prakasha Karyalaya, Holenarasipur-573211, India.

ಮೊದಲನೆಯ ಮುದ್ರಣ : **2016 - 1000 ಪ್ರತಿಗಳು**



ಮುದ್ರಣ ಕಾಗದ : **70 GSM NS Maplitho**

ಪುಟಗಳು : **18+234=252**

**ಬೆಲೆ : ರೂ. 130/-**

*ಪ್ರತಿಗಳು ದೊರೆಯುವ ಸ್ಥಳ :*

**ಅಧ್ಯಾತ್ಮಪ್ರಕಾಶಕಾರ್ಯಾಲಯ**

**ಹೊಳೆನರಸೀಪುರ - 573 211, ದೂರವಾಣಿ: 08175-273820**

www.adhyatmaprakasha.org.

email: secretary@adhyatmaprakasha.org

**ಬೆಂಗಳೂರು ಶಾಖೆ :**

ತ್ಯಾಗರಾಜನಗರ, ಬೆಂಗಳೂರು - 560 028.

ದೂ : 080-26765548

email: shankara.bhaskara@gmail.com

**ಅಕ್ಷರ ಜೋಡಣೆ ಮತ್ತು ಮುದ್ರಣ ಸ್ಥಾನ:**

**ಶ್ರೀರಾಮ ಪ್ರಿಂಟರ್ಸ್**

**ನಂ.25, 15ನೇ ಕ್ರಾಸ್, ಶ್ರೀನಿಧಿಲೇಔಟ್,**

**ಬೆಂಗಳೂರು - 560 062.**

**ಮೊಬೈಲ್: 98453 46197**

# ಮೊದಲ ಮಾತು

ಪರಮಪೂಜನೀಯ ಶ್ರೀಶ್ರೀಗಳವರ ಗ್ರಂಥಕ್ಕಾಗಲೀ ಲೇಖನಕ್ಕಾಗಲೀ ಹಿನ್ನುಡಿಯನ್ನು ಬರೆಯುವದೆಂದರೆ ಅದೊಂದು ಸಾಹಸದ ಕೆಲಸವೇ ಆದೀತು! ಏಕೆಂದರೆ ಅವರ ಬರವಣಿಗೆಯ ಪ್ರಾಮಾಣಿಕತೆ, ವೈಚಾರಿಕತೆಯ ಅಗಾಧತೆ ಮತ್ತು ತತ್ತ್ವನಿಷ್ಠೆಯು ಅನಿತರ ಸಾಧಾರಣವಾಗಿರುವಂಥದ್ದಾಗಿರುತ್ತದೆ. ಅವರ ಯಾವುದೇ ಗ್ರಂಥವು ಮತ್ತು ಲೇಖನವು ತಿರುಳಿಲ್ಲದ್ದು, ಹುರುಳಿಲ್ಲದ್ದು ಎಂಬುವ ಪ್ರಶ್ನೆಯೇ ಇಲ್ಲ. ಅವರ ಜೀವಿತ ಕಾಲದಲ್ಲಿ ನಡೆಸಿಕೊಂಡು ಬಂದಿದ್ದ **''ಅಧ್ಯಾತ್ಮಪ್ರಕಾಶ''** ಮಾಸಪತ್ರಿಕೆಯ ಲೇಖನಗಳು ಒಂದಕ್ಕಿಂತ ಒಂದು ಚೇತೋಹಾರಿಯೂ ಹೃದಯಂಗಮವಾಗಿಯೂ ಇರುವಂಥದ್ದೂ ಆಗಿದೆ. ಈಗಾಗಲೇ ಅದೇ ಮಾಸ ಪತ್ರಿಕೆಯಿಂದ ತೆಗೆದ ಲೇಖನಗಳು ಹತ್ತಾರು ಪುಸ್ತಕಗಳಾಗಿ ಹೊರಹೊಮ್ಮಿವೆ. ಇನ್ನೂ ಹೊರಬರಬೇಕಾದ ''ಶಂಕರಸಪ್ತಾಹ''ದ ವೃತ್ತಾಂತಗಳು, ''ಪುಸ್ತಕ ವಿಮರ್ಶೆ''ಯ ಲೇಖನಗಳನ್ನು ತೆಗೆದರೆ ಇನ್ನೂ ನಾಲ್ಕಾರು ಪುಸ್ತಕಗಳಾಗಿ ಹೊರಬರಬೇಕಾಗುತ್ತವೆ. ಅವುಗಳಲ್ಲಿರತಕ್ಕ ವಿಚಾರಗಳೂ ಸಹ ಮುಮುಕ್ಷುಜನ ಪ್ರಪಂಚಕ್ಕೆ ದಿವ್ಯಕೊಡುಗೆ ಯಾಗಿದೆ. ಇವಲ್ಲದೆ (1) ಮಹಾತ್ಮರುಗಳೂ – ಸಾಧುಸಂತರೂ, (2) ಮತಗಳೂ – ತತ್ತ್ವಸಿದ್ಧಾಂತಗಳೂ (3) ಶಂಕರಜಯಂತಿ ಸಪ್ತಾಹಗಳ ಉಪನ್ಯಾಸಗಳು, (4) ಅಧ್ಯಾತ್ಮ ಭೋಧಾಮೃತವೇ ಮುಂತಾದ ಲೇಖನಗಳಧಾರೆಗಳು ಅಗಾಧ ವಿಚಾರಗಳಿಂದ ತುಂಬಿತುಳುಕಾಡುತ್ತಿವೆ. ಅವು ವಾಚಕ ಪ್ರಪಂಚದ ಕೈಗೆ ಎಂದು ಸೇರುವುದೋ, ತಿಳಿಯದು.

## ಪ್ರಕೃತ ಗ್ರಂಥ

ಈ ಪ್ರಕೃತ ಗ್ರಂಥವು ಮಹಾಭಾರತದ ಶಾಂತಿಪರ್ವದ ಮೋಕ್ಷಧರ್ಮ ಪರ್ವದಲ್ಲಿರುವ ಭಾಗಗಳಿಂದ ಆರಿಸಿದ ವಿಚಾರಧಾರೆ ಯಾಗಿದೆ. ರಾಮಾಯಣವು ಹೇಗೆ ಆದಿಕಾವ್ಯವಾಗಿದೆಯೋ ಅದರಂತೆ ಮಹಾ ಭಾರತವೂ ಆದಿ ಇತಿಹಾಸ ವಾಗಿರುವ ಅತಿಶ್ರೇಷ್ಠ ಗ್ರಂಥವಾಗಿದೆ. ಇದರ ವಿಷಯಕ್ಕೆ ಹಿಂದಿನವರು– ''ಯದೇವೇಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್''– ಎಂದಿರುತ್ತಾರೆ. (ಈ

ಭಾರತದಲ್ಲಿ ಏನಿದೆಯೋ ಅದೇ ಬೇರೆ ಗ್ರಂಥಗಳಲ್ಲಿ ಇರುವುದು, ಇದರಲ್ಲಿ ಯಾವುದಿಲ್ಲವೋ ಅದು ಮತ್ತೆಲ್ಲಿಯೂ ಇಲ್ಲ.) ''ಬಾಣೋಚ್ಛಿಷ್ಟಂ ಜಗತ್ಸರ್ವಂ'' ಎಂದು ಕಾವ್ಯಪ್ರಪಂಚದಲ್ಲಿ ಹೇಳುವ ಹಾಗೆ ''ವ್ಯಾಸೋಚ್ಛಿಷ್ಟಂ ಜಗತ್ಸರ್ವಂ'' ಎಂಬ ಉಕ್ತಿಯು ಇನ್ನೂ ಚೆನ್ನಾಗಿ ಹೊಂದುವ ಮಾತಾಗಿದೆ. ಜಗತ್ಪ್ರಸಿದ್ಧವಾದ ಭಗವದ್ಗೀತೆ, ಯಕ್ಷಪ್ರಶ್ನೆ, ನಹುಷಪ್ರಶ್ನೆ, ವಿದುರನೀತಿ, ಅಷ್ಟಾವಕ್ರರ ಸಂವಾದ ಮುಂತಾದ ಅತ್ಯುತ್ತಮವಾದ ವಿಚಾರಗಳು ಈ ಭಾರತದಲ್ಲೇ ಇರುವುದು. ಇದಲ್ಲದೆ ಅತಿಶ್ರೇಷ್ಠವಾದ ಶಾಂತಿಪರ್ವದ ಮೋಕ್ಷಧರ್ಮದ ವಿಚಾರಧಾರೆಗಳು ಜಗತ್ತಿನ ಜನಮನವನ್ನು ಸೂರೆಗೊಳ್ಳುವದಾಗಿವೆ. ಅನ್ವರ್ಥ ಜಗದ್ಗುರುಗಳಾದ ಶ್ರೀಶಂಕರಭಗವತ್ಪಾದರವರೂ ಸಹ ತಮ್ಮ ಪ್ರಸ್ಥಾನತ್ರಯ ಭಾಷ್ಯದಲ್ಲೆಲ್ಲಾ ತಾವು ಪ್ರತಿಪಾದಿಸಿದ ವಿಚಾರಕ್ಕೆ ಈ ಮೋಕ್ಷಧರ್ಮದ ಅನೇಕ ಶ್ಲೋಕಗಳನ್ನು ಪ್ರಮಾಣವಾಗಿ ಕೊಟ್ಟಿರುತ್ತಾರೆ. ಭಾಷ್ಯದಲ್ಲಿ–ತಥಾ ಚ ಸ್ಮೃತಿಃ ಎಂದು ಉಲ್ಲೇಖಮಾಡಿದ ಸ್ಥಳದಲ್ಲೆಲ್ಲಾ ಮೋಕ್ಷಧರ್ಮವನ್ನೆ ಹೆಚ್ಚಾಗಿ ಉದಾಹರಿಸಿರುವುದನ್ನು ನಾವು ಕಾಣಬಹುದಾಗಿದೆ. ಕೆಲವು ಕಡೆಗಳಲ್ಲಿ ಮನುಸ್ಮೃತಿ ಆಪಸ್ತಂಬಾದಿಸ್ಮೃತಿಗಳೂ ಇವೆ. ಆದರೆ ಹೆಚ್ಚಾಗಿ ಮಹಾಭಾರತವನ್ನೇ ಪರಾಮರ್ಶಿಸುತ್ತಾರೆ. ಈ ಮಹಾಭಾರತವು ''ಭಾರತಂ ಪಂಚಮೋ ವೇದಃ'' ಎಂಬ ಪ್ರಾಚೀನೋಕ್ತಿಗೆ ಅನ್ವರ್ಥಗ್ರಂಥವಾಗಿದೆ. ಬ್ರಹ್ಮಸೂತ್ರದಲ್ಲಿ ''ಸ್ಮೃತೇಶ್ಚ'' ಎಂಬ ಸೂತ್ರಗಳಿಗೆ ಮಹಾಭಾರತವಾಕ್ಯಗಳನ್ನೇ ಬಲುಮಟ್ಟಿಗೆ ಆಚಾರ್ಯರು ಪರಾಮರ್ಶೆ ಮಾಡಿರುತ್ತಾರೆ. ''ಇತಿಹಾಸ ಪುರಾಣಭ್ಯಾಂ ವೇದಾರ್ಥಂ ಸಮುಪಬೃಂಹಯೇತ್'' ಎಂಬ ವಾಕ್ಯಕ್ಕೂ ''ಇತಿಹಾಸ ಪುರಾಣಾಭ್ಯಾಂ ತತ್ತ್ವಾಧಿಗಮಃ ಅನಧಿಕಾರಿಣಾಮ್'' ಎಂಬ ವಾಕ್ಯಕ್ಕೂ ''ಇತಿಹಾಸ''ವೆಂದರೆ ಮಹಾಭಾರತವೇ ಎಂಬುದು ನಿರ್ವಿವಾದ. ಏಕೆಂದರೆ ಇದರಲ್ಲಿ ತತ್ತ್ವಪ್ರತಿಪಾದನೆಯನ್ನು ಮಾಡಿರುವ ಹಾಗೆ ಇನ್ಯಾವ ಗ್ರಂಥಗಳಲ್ಲೂ ಕಂಡುಬರುವುದಿಲ್ಲ. ಈ ಶಾಂತಿಪರ್ವದ ಮೋಕ್ಷಧರ್ಮದಲ್ಲಿರುವ ಸಾಧನವಿಚಾರಗಳು ಎಂದರೆ ಶಮ, ದಮ, ಶೌಚ, ಬ್ರಹ್ಮಚರ್ಯ, ತಪಸ್ಸು, ಸತ್ಯ, ಅಹಿಂಸಾದಿ ವಿಚಾರಗಳು ಅನಿತರಸಾಧಾರಣವಾಗಿ ಕಂಗೊಳಿಸುತ್ತಿರುವ ವಿಚಾರವಾಗಿದೆ. ಶ್ರೀಶ್ರೀಗಳವರೂ ಸಹ ಈ ವಿಚಾರಧಾರೆಗೆ ಮನಸೋತು ಇವನ್ನು ಅನುವಾದಮಾಡಬೇಕೆಂದು ಸಂಕಲ್ಪಿಸಿರುವದು. ಅನುವಾದವು ಸಹ ಅಷ್ಟೇ ಚೇತೋಹಾರಿಯಾಗಿದೆ.

## ಶ್ರೀಶ್ರೀಗಳವರ ಅನುವಾದ

ಪೂಜ್ಯ ಶ್ರೀಶ್ರೀಗಳವರು ಬೇರೆ ಸಾಮಾನ್ಯ ವಿದ್ವಾಂಸರು ಅನುವಾದ ಮಾಡುವ ಹಾಗೆ ಮಕ್ಕಿಕಾ ಮಕ್ಕಿಯ ರೀತಿಯಿಂದ ಇದನ್ನು ಅನುವಾದ ಮಾಡಲಿಲ್ಲ. ಪ್ರತಿಶ್ಲೋಕದ ಭಾವಾರ್ಥವನ್ನು ಹಿಡಿದು ಅನ್ತರಾರ್ಥದೊಂದಿಗೆ ತತ್ತ್ವಾರ್ಥವನ್ನೂ ತೋರಿಸಿರುತ್ತಾರೆ, ಎಂದಮಾತ್ರಕ್ಕೆ ಕಥಾಭಾಗದ ಅರ್ಥವನ್ನು ಬಿಟ್ಟು ಬಿಟ್ಟಿರುತ್ತಾರೆಂದರ್ಥವಲ್ಲ. ಕಥಾ ಭಾಗವನ್ನೂ ಸಹ ನೆಪವಾಗಿಟ್ಟುಕೊಂಡು ಮುಮುಕ್ಷು ಜನರಿಗೆ ಉಪಯೋಗವಾಗುವ ರೀತಿಯಿಂದ ವ್ಯಾಖ್ಯಾನಿಸಿರುತ್ತಾರೆ. ಇದರಲ್ಲಿ ಒಟ್ಟು ನಲವತ್ತೇಳು ಶಿರೋನಾಮೆಗಳನ್ನು ಕೊಟ್ಟು (Heading) ವಿಚಾರವನ್ನು ಬೆಳೆಸಿರುತ್ತಾರೆ. ಇದರಲ್ಲಿ ''ಶುಕವೃತ್ತಾಂತ''ವೆಂಬ (43-1 ರಿಂದ 46-7ರವರೆಗೆ) ವಿಷಯವನ್ನೇ ಸುಮಾರು ನಲವತ್ತಮೂರು ಪುಟಗಳಿಂದ ವಿವರಿಸಿರುತ್ತಾರೆ. ಹಾಗಾಗಿ ಮೂಲಗ್ರಂಥದ ಅಧ್ಯಾಯದ ಸಂಖ್ಯೆಗೂ ಇಲ್ಲಿರುವ ವಿಷಯ ವಿಭಾಗಕ್ಕೂ ಸಂಖ್ಯಾರೂಪದಿಂದ ಹೊಂದುಗಡೆ ಬರುವುದಿಲ್ಲ. ಕೆಲವೊಮ್ಮೆ ಎರಡುಮೂರು ಅಧ್ಯಾಯಗಳು ಸೇರಿ ಒಂದೇ ತಲೆಬರಹವಿರುತ್ತದೆ. ಕೆಲವೊಮ್ಮೆ ಒಂದೇ ಅಧ್ಯಾಯಕ್ಕೆ ಎರಡು ಮೂರು ತಲೆಬರಹವಿರುತ್ತದೆ. ಆದ್ದರಿಂದ ವಾಚಕರು ಓದುವಾಗ ಎಲ್ಲಿಂದ ಆರಂಭವಾಗುವ ಅಧ್ಯಾಯದ ವಿಷಯವೆಂದು ಚಿಂತೆಯನ್ನು ಹತ್ತಿಸಿಕೊಳ್ಳಬೇಕಾಗಿಲ್ಲ. ವಿಷಯ ಪ್ರಧಾನವಾಗಿ ಓದಿದರೆ ಇದರ ವಿಚಾರವೆಲ್ಲ ಮನವರಿಕೆಯಾಗುವುದಾಗಿದೆ. ಆರಂಭದಲ್ಲಿ ಶ್ರೀನಾರದ ಮಹರ್ಷಿಗಳಿಗೆ ಶ್ರೀಮನ್ನಾರಾಯಣನು ಪರತತ್ತ್ವವನ್ನು ಉಪದೇಶಮಾಡಿರುವ ಭಾಗವಿದೆ. ಅದಕ್ಕಿಂತಲೂ ಮುಂಚಿತವಾಗಿ ಉಪರಿಚರವಸು ವಿನ ವಿಸ್ತಾರವಾದ ಆಖ್ಯಾನವಿರುತ್ತದೆ. ಹಾಗೆಯೇ ಸರ್ವಾಶ್ರಮಿ ಗಳಿಗೂ ಪೂಜ್ಯನಾದ ನಾರಾಯಣನ ಸ್ವರೂಪವಿಚಾರ, ಪಾಂಚರಾತ್ರಶಾಸ್ತ್ರದ ಉತ್ಪತ್ತಿವಿಚಾರವೂ ವಿಸ್ತಾರವಾಗಿ ಬಂದಿದೆ. ಪ್ರವೃತ್ತಿ ನಿವೃತ್ತಿ ಧರ್ಮಗಳ ರಹಸ್ಯವನ್ನು ವಿವರಿಸಿದನಂತರ ನಾರದರು ನಾರಾಯಣನನ್ನು ಕಂಡದ್ದು ಮತ್ತು ಅವನೊಡನೆ ಸಂವಾದವೂ ಬಲುವಿಸ್ತಾರವಾಗಿದೆ. ಸಾಕ್ಷಾತ್ ಪರಮಾತ್ಮನೇ ತನ್ನ ನಾಮದ ಹಿರಿಮೆ ಮಹಿಮೆ, ವ್ಯುತ್ಪತ್ತಿಯನ್ನು (ಲೇಖನ 10-6, 7) ಹೇಳಿದ್ದನ್ನು ತಿಳಿಸಿಕೊಟ್ಟಿರುತ್ತಾರೆ. ಇದಕ್ಕೂ ವಿಶೇಷವೆಂದರೆ ನಾರದರು ಸುಮಾರು 200 ನಾಮಗಳಿಂದ ಭಗವಂತನನ್ನು ಸ್ತುತಿಸಿದ್ದು, ಆ ನಾಮಗಳು ಬಲುಮಟ್ಟಿಗೆ ವೈದಿಕನಾಮಗಳಾಗಿರುತ್ತವೆ. ಬಹುಷಃ ಇದನ್ನೇ **'ಜಿತಂ ತೇ**

ಸ್ತೋತ್ರ'ವೆಂದು ಕರೆಯುತ್ತಾರೋ ಏನೋ? ಈ ಸ್ತೋತ್ರದಿಂದ ತುಷ್ಟನಾದ ಮೇಲೆಯೇ ಶ್ರೀಮನ್ನಾರಾಯಣನು ಶ್ರೀನಾರದ ಮಹರ್ಷಿಗೆ ಪರಮರಹಸ್ಯವಾದ ಭಗವತ್ತತ್ತ್ವವನ್ನು ಉಪದೇಶ ಮಾಡಿರುತ್ತಾನೆ. ಈ ನಾರಾಯಣೀಯದಲ್ಲಿ ವೇದದ ಅರುಣ ಪ್ರಶ್ನದಲ್ಲಿ ಬರುವ ಅಹಲ್ಯಾಶಾಪದ ಕಥೆಯನ್ನೂ, ಇಂದ್ರನಿಗೆ ಬಂದ ಬ್ರಹ್ಮಹತ್ಯಾ ವಿಚಾರ, ಇಂದ್ರ ತ್ವಷ್ಟ್ರುವಿಚಾರ (ಲೇಖನ 10-2)ಗಳೆಲ್ಲಾ ಉಲ್ಲೇಖವಾಗಿದೆ. ದಕ್ಷಕನ್ಯೆಯರ ವಿಚಾರಗಳೂ ಇವೆ. ಹಾಗೆಯೇ ಪರಮಾತ್ಮನು ವೇದೋದ್ಧಾರವನ್ನು ಮಾಡುವ ಸಲುವಾಗಿ ಸಮುದ್ರದಲ್ಲಿ ಮುಳುಗಿಹೋದ ಭೂಮಿಯನ್ನೂ ವೇದಗಳನ್ನೂ ಹಯಗ್ರೀವರೂಪಧರನಾಗಿ ಎತ್ತಿದ ಕಥಾ ವಿಚಾರವಿದೆ. ಸಾತ್ತ್ವತಧರ್ಮದ ವಿಚಾರವೂ ಸಹ ಬಲು ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ಬ್ರಹ್ಮಸೂತ್ರದ ಭಾಷ್ಯದಲ್ಲಿ ಶ್ರೀಶಂಕರಾಚಾರ್ಯರವರು ವೇದವ್ಯಾಸರನ್ನು ಪರಾಮರ್ಶೆಮಾಡುವಾಗ ''ಅಪಾಂತರತಮಾ ನಾಮ ವೇದಾಚಾರ್ಯಃ ಕಲಿದ್ವಾಪರಸಂಧೌ ಕೃಷ್ಣದ್ವೈಪಾಯನೇತಿ ಸಂಬಭೂವ'' ಎಂದು ಬರೆದಿದ್ದಾರೆ. ಅದರ ವಿಚಾರವೂ ಈ ನಾರಾಯಣೀಯದಲ್ಲಿ (ಲೇಖನ14-2,3) ವಿಸ್ತಾರವಾಗಿ ತಿಳಿಸಿಕೊಟ್ಟಿದೆ. ಹಾಗೆಯೇ ಬ್ರಾಹ್ಮಣನು ಯಾರು? ಎಂಬ ವಿಚಾರ ಬಂದಾಗ ''ತಂ ದೇವ ಬ್ರಾಹ್ಮಣಂ ವಿದುಃ'' ಎಂದು ಪ್ರತಿಶ್ಲೋಕದಲ್ಲೂ ಪಲ್ಲವಿಯ ಹಾಗೆ ಅನೇಕ ಶ್ಲೋಕಗಳಲ್ಲಿ ಪ್ರತೀತವಾಗಿದೆ. (ಪುಟ 36) ನಿಜವಾಗಿಯೂ ಆಂತರಿಕ ಧರ್ಮಗುಣಗಣೋಪೇತನಾದವನೇ (ತತ್ತ್ವಜ್ಞಾನಿಯೇ) ಮುಖ್ಯಾರ್ಥದಲ್ಲಿ ಬ್ರಾಹ್ಮಣನಾಗಿರುತ್ತಾನೆಯೇ ಹೊರತು ಕೇವಲ ಬಾಹ್ಯವೇಷಭೂಷಣಗಳಿಂದ ಆಗಲಾರನೆಂಬ ವಿಚಾರವನ್ನು ಬಲುಹೃದಯಂಗಮವಾಗಿ ತಿಳಿಸಿಕೊಟ್ಟಿದೆ. ಇವನ್ನು ಅವಶ್ಯವಾಗಿ ಮನಮುಟ್ಟಿ ಓದಿ ವಿಚಾರವನ್ನು ಮಾಡಬೇಕು.

ಇದೆಲ್ಲಕ್ಕಿಂತಲೂ ಬಲು ಮುಖ್ಯವಾಗಿ ವರ್ಣಾಶ್ರಮಧರ್ಮವನ್ನು ತುಂಬಾ ಕಟ್ಟುನಿಟ್ಟಾಗಿ ತಿಳಿಸಿಕೊಟ್ಟಿದೆ. ಆಯಾ ವರ್ಣಾಶ್ರಮದವರು ಅಚ್ಚುಕಟ್ಟಾಗಿ ಆಯಾ ಧರ್ಮವನ್ನು ಪಾಲನೆಮಾಡಿದಪಕ್ಷದಲ್ಲಿ ಅವಶ್ಯವಾಗಿ ಅವರು ಶ್ರೇಯೋಭಾಗಿಗಳಾಗುತ್ತಾರೆಂಬುದನ್ನೂ ಅದನ್ನು ಸರಿಸದೇ ಹೋದರೆ ಆಗುವ ದುರ್ಗತಿಯನ್ನೂ ಸಹ ತುಂಬಾ ವಿಸ್ತಾರವಾಗಿ ಹೇಳಿದೆ (ಲೇಖನ 27-28-29-30-1, 2ರಲ್ಲಿ). ಸಂನ್ಯಾಸಿಯಧರ್ಮವೇನು? ಅವನು ಹೇಗಿರಬೇಕು? ಬ್ರಹ್ಮಚಾರಿಯ ಧರ್ಮವಾದ

ಗುರುಶುಶ್ರೂಷಾ, ವೇದಾಧ್ಯಯನ, ಅವನ ಇಂದ್ರಿಯ ಸಂಯಮವನ್ನೂ, ಗೃಹಸ್ಥನ ನಿತ್ಯಕರ್ಮವನ್ನೂ ಅದನ್ನು ನಡೆಸುವುದರಿಂದ ಆಗುವ ಉತ್ತಮಗತಿಯನ್ನೂ, ಬಿಡುವುದರಿಂದಾಗುವ ಅಧೋಗತಿಯನ್ನೂ ಬಹಳ ಸ್ಪಷ್ಟವಾಗಿ ತಿಳಿಸಿಕೊಟ್ಟಿದೆ. ವಾನಪ್ರಸ್ಥನ ಕಠೋರಧರ್ಮವನ್ನೂ ಅದರ ಪ್ರಕಾರವನ್ನೂ ಅವನಿಗೆ ಆಗುವ ಸದ್ಗತಿ ವಿಚಾರವನ್ನು ಬಹಳ ಹೃದಯಂಗಮವಾಗಿ ಉಪದೇಶಿಸಿದೆ. ಒಟ್ಟಿನ ಮೇಲೆ ಈ ಗ್ರಂಥವನ್ನು ಹತ್ತಾರು ಸಲವಾದರೂ ಓದಿ ಇದರ ಅರ್ಥವನ್ನು ತಿಳಿದುಕೊಂಡು ಇದರಲ್ಲಿ ಹೇಳಿರುವಂತೆ ತಮ್ಮ ಜೀವನರೂಪರೇಖೆಯನ್ನು ಬದಲಾಯಿಸಿಕೊಂಡು ನಡೆದ ಪಕ್ಷದಲ್ಲಿ ಶ್ರೇಯಃಪ್ರಾಪ್ತಿಯಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಗ್ರಂಥವನ್ನು ಮುದ್ರಣಮಾಡಿ ವಾಚಕವೃಂದಕ್ಕೆ ಕೈಸೇರುವಂತೆ ಮಾಡುತ್ತಿರುವ ಅಧ್ಯಾತ್ಮಪ್ರಕಾಶಕಾರ್ಯಾಲಯದ ಸಮಿತಿವೃಂದಕ್ಕೆ ಧನ್ಯವಾದಗಳು. ಇಂಥ ಗ್ರಂಥಗಳು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಮುದ್ರಿತವಾಗುತ್ತಿರಲೆಂದು ಹರಸುತ್ತಾ–

ಗುರುಪಾದರೇಣುಜೀವೀ

**ಶ್ರೀಶ್ರೀ ಅದ್ವಯಾನಂದೇಂದ್ರಸರಸ್ವತೀಸ್ವಾಮಿ**

# ಪ್ರಕಾಶಕರ ಬಿನ್ನಹ

ಮಹಾಭಾರತವು ಭಾರತೀಯ ಸನಾತನಧರ್ಮದ ಒಂದು ಅಮೂಲ್ಯವಾದ ರತ್ನ. ಇದರಲ್ಲಿ ವೇದೋಪನಿಷತ್ತುಗಳ ರಹಸ್ಯ, ಸರ್ವಶಾಸ್ತ್ರಗಳ ಸಾರವೂ ಅಡಗಿದೆ. ಇದು ಮಹಾಕಾವ್ಯವೂ ಗೂಢಾರ್ಥಮಯವಾದ ಜ್ಞಾನವಿಜ್ಞಾನಗಳ ಶಾಸ್ತ್ರವೂ ಆಗಿದೆ. ಆದ್ದರಿಂದಲೇ ಇದನ್ನು ಐದನೆಯ ವೇದ ಎಂದು ವೃದ್ಧರು ವ್ಯವಹರಿಸಿರುವದು. ಮಹಾಭಾರತದ ಮೂಲ ವೇದದಲ್ಲಿಯೇ ಇದೆ. ಇದರ ಮುಖ್ಯಗುರಿ ಧರ್ಮಾರ್ಥ ಕಾಮಮೋಕ್ಷಗಳ ಸ್ವರೂಪವನ್ನು ತಿಳಿಸಿಕೊಡುವದು. ಮಹಾಭಾರತದಲ್ಲಿ ಬರು ಕಥೆ, ಉಪಕಥೆ, ಉಪಗ್ರಂಥಗಳು ತತ್ತ್ವಶಾಸ್ತ್ರದ ವಿವಿಧ ಶಾಖೆಗಳನ್ನು ತಿಳಿಯಿಸುವ ಉದ್ದೇಶದಿಂದಲೇ ಹೊರಟಿರುವವು. ಇದು ವೇದಾಂತ, ಸಾಂಖ್ಯ, ಯೋಗ, ಭಾಗವತ ಧರ್ಮವೇ ಮೊದಲಾದ ತಾತ್ತ್ವಿಕ ಸಂಪ್ರದಾಯಗಳನ್ನು ಒಳಗೊಂಡ ಭಾರತೀಯ ತತ್ತ್ವಶಾಸ್ತ್ರದ ಮುಖ್ಯ ಆಕರಗ್ರಂಥವಾಗಿದೆ. ಆದರೆ ಇವೆಲ್ಲವೂ **ವಾಸುದೇವ ಭಗವಂತನೊಬ್ಬನೇ ಪರಮಾರ್ಥತತ್ತ್ವವೆಂದು** ತಿಳಿಸುವದರಲ್ಲಿಯೇ ಉಪಸಂಹಾರ ಗೊಂಡಿವೆ.

ಮಹಾಭಾರತದ ಹದಿನೆಂಟು ಪರ್ವಗಳಲ್ಲಿ ಶಾಂತಿಪರ್ವದ ಮೋಕ್ಷಧರ್ಮ ಪರ್ವವು ಮುಖ್ಯವಾಗಿ ಆಧ್ಯಾತ್ಮಿಕ ವಿಷಯಗಳನ್ನು ಚರ್ಚಿಸುವ ಭಾಗವಾಗಿದೆ. ಮೋಕ್ಷಧರ್ಮಪರ್ವವು ಶಾಂತಿಪರ್ವದ 174ನೇ ಅಧ್ಯಾಯದಿಂದ ಆರಂಭವಾಗಿದೆ. ಎಲ್ಲವೂ ಅಧ್ಯಾತ್ಮದ ವಿಷಯವನ್ನು ಚರ್ಚಿಸುವವೇ ಆಗಿದ್ದರೂ ಭಗವದ್ಗೀತೆಗೆ ಸಂವಾದಿಯಾದ ಭಾಗಗಳಾದ 1) **ನಾರಾಯಣೀಯ** (334ನೇ ಅಧ್ಯಾಯದಿಂದ 351ನೇ ಅಧ್ಯಾಯದವರೆಗೆ), 2) **ಶುಕಾನುಶಾಸನ** (231ನೇ ಅಧ್ಯಾಯದಿಂದ 240ನೇ ಅಧ್ಯಾಯದವರೆಗೆ), 3) **ಶುಕಾನುಪ್ರಶ್ನ** (241ನೇ ಅಧ್ಯಾಯದಿಂದ 255ನೇ ಮತ್ತೂ 321ನೇ ಅಧ್ಯಾಯ), 4) **ಶುಕವೃತ್ತಾಂತ** (323ನೇ ಅಧ್ಯಾಯದಿಂದ 333ನೇ ಅಧ್ಯಾಯದವರೆಗೆ)- ಇವುಗಳನ್ನು ಶ್ರೀಶ್ರೀಗಳವರು ಭಾವಾನುವಾದದೊಡನೆ **ಅಧ್ಯಾತ್ಮಪ್ರಕಾಶ** ಮಾಸಪತ್ರಿಕೆಯಲ್ಲಿ 1966ರ ಸೆಪ್ಟೆಂಬರ್‌ನಿಂದ 1973ರ ಜೂನ್ (ಸಂಪುಟ 36-42)ರವರೆಗೆ ಬರೆದು ಪ್ರಕಟಿಸಿದ್ದರು. ಅವುಗಳನ್ನು ಸಂಕಲಿಸಿ **ಮಹಾಭಾರತ-ಮೋಕ್ಷಧರ್ಮದ ಉಪದೇಶಗಳು (ನಾರಾಯಣೀಯ, ಶುಕಾನು ಶಾಸನ, ಶುಕಾನುಪ್ರಶ್ನ, ಶುಕವೃತ್ತಾಂತ)**-ಎಂಬ ಶಿರೋನಾಮೆಯಿಂದ ಪ್ರಕಟಿಸುತ್ತಿದ್ದೇವೆ.

ಯುಧಿಷ್ಠಿರನು ಸಿದ್ಧಿಯನ್ನು ಪಡೆಯಲು ಚತುರಾಶ್ರಮಿಗಳೂ ಯಾವ ದೇವನನ್ನು ಪೂಜಿಸಬೇಕು? ಎಂದು ಪ್ರಶ್ನಿಸಲು ಭೀಷ್ಮರು ಉಪದೇಶಿಸಿದ ನಾರದ-ನಾರಾಯಣರ ಸಂವಾದವೇ **ನಾರಾಯಣೀಯ.** ಇದರಲ್ಲಿ ಭಾಗವತಮತ, ಪಾಂಚರಾತ್ರಸಿದ್ಧಾಂತ, ಸಾತ್ವತಧರ್ಮ, ಐಕಾಂತಿಕಧರ್ಮಗಳನ್ನು ಕುರಿತು ಸಂವಾದ ಗಳು ಕಂಡುಬರುತ್ತವೆ. ಶ್ರೀಶಂಕರಾಚಾರ್ಯರು ಭಾಗವತಮತದ ಸಿದ್ಧಾಂತವನ್ನು ನಾರಾಯಣೀಯದ ಆಧಾರದಿಂದಲೇ ಸ್ಥಾಪಿಸಿರುತ್ತಾರೆ. ಭಾಗವತಸಂಪ್ರದಾಯ ದವರಿಗೆ ಹೇಗೋ ಹಾಗೆಯೇ ಆಚಾರ್ಯರಿಗೂ ನಾರಾಯಣೀಯವು ಆಧಾರಗ್ರಂಥವಾಗಿತ್ತು, ಆದ್ದರಿಂದಲೇ ತಮ್ಮ ಸೂತ್ರಭಾಷ್ಯದಲ್ಲಿ ಮತ್ತೆಮತ್ತೆ ಇಲ್ಲಿಯ ಶ್ಲೋಕಗಳನ್ನು ಉದಾಹರಿಸಿಕೊಂಡಿರುತ್ತಾರೆ. ಸಾಂಖ್ಯಮತವನ್ನು ತಿರಸ್ಕರಿಸುವಾಗ (ಸೂ.ಭಾ. 2-1-1) ನಾರಾಯಣೀಯದ 334-29,30 ಶ್ಲೋಕಗಳನ್ನು ತಮ್ಮ ಸಿದ್ಧಾಂತಕ್ಕೆ ಪ್ರಮಾಣವಾಗಿಸಿಕೊಂಡಿದ್ದಾರೆ. **ಮಾಯಾ ಹ್ಯೇಷಾ ಮಯಾ ಸೃಷ್ಟಾ (339-45)**- ಎಂಬ ಶ್ಲೋಕವನ್ನು ತಮ್ಮ ಸೂತ್ರಭಾಷ್ಯದಲ್ಲಿ ಮತ್ತೆಮತ್ತೆ ಉದಾಹರಿಸುತ್ತಾರೆ. ಉದಾ- 1-1-20, 3-2-17ರಲ್ಲಿ ನೋಡಬಹುದು. 2-3-14 ರಲ್ಲಿ ಪ್ರಳಯಕ್ರಮವನ್ನು ಹೇಳುವ 338-28 ಶ್ಲೋಕವನ್ನು ಉದಾಹರಿಸಿರುತ್ತಾರೆ.

**ಭಾಗವತಮತವು** ಯಾವುದೆಂದರೆ ಜ್ಞಾನೈಶ್ವರ್ಯಾದಿಗುಣಗಳೂ ಭಗವತ್ಸ್ವರೂಪವೇ, ಎಲ್ಲವೂ ನಿರ್ವಿಶೇಷತತ್ತ್ವವೇ. ಅಲ್ಲಿ ಗುಣಗುಣೀಭಾವದಿಂದಾದ ಯಾವಭೇದವೂ ಇರುವದಿಲ್ಲ, ಎಂಬುದೇ ಆಗಿದೆ. ಅಂದರೆ ನಿರಂಜನಜ್ಞಾನ ಸ್ವರೂಪನಾದ ವಾಸುದೇವಭಗವಂತನೊಬ್ಬನೇ ಪರಮಾರ್ಥತತ್ತ್ವವು, ಅವನನ್ನು ಭಜಿಸುವವರ ಮತವೇ ಭಾಗವತಮತವು. ಈ ಮತವು ಬಾದರಾಯಣರಿಗಿಂತ ಹಿಂದೆಯೇ ಇದ್ದಿತು. ಇದು ಆಶ್ಮರಥ್ಯ, ಕಾಶಕೃತ್ಸ್ನ, ಔಡುಲೋಮ್ಯಾಚಾರ್ಯರ ಮತವನ್ನು ವಿಮರ್ಶೆಮಾಡಿದರೆ ತಿಳಿದುಬರುತ್ತದೆ. ಹಾಗಾದರೆ **ಉತ್ಪತ್ಯಸಂಭವಾಧಿ ಕರಣದಲ್ಲಿ** ಖಂಡನೆಮಾಡಿರುವದೋ- ಎಂದರೆ ಜೀವಾದಿಗಳಿಗಾಗಲೀ ಸಂಕರ್ಷಣಾದಿ ಗಳಿಗಾಗಲಿ ನಿಜವಾದ ಉತ್ಪತ್ತಿಯಿದೆ ಎಂದೂ ಗುಣಗುಣೀಭಾವವು ವಾಸ್ತವವೆಂದೇ ಹೇಳುತ್ತಿದ್ದ ಪಕ್ಷವನ್ನು ಖಂಡಿಸಿರುತ್ತಾರೆ- ಎಂದು ತಿಳಿಯಬೇಕು.

ಇನ್ನು **ಪಾಂಚರಾತ್ರವೆಂದರೆ** ನಾಲ್ಕು ವೇದಗಳು, ಸಾಂಖ್ಯಯೋಗಗಳ ಸಂಯೋಗದಿಂದಾದ ದರ್ಶನ - ಇವುಗಳಷ್ಟೂ ಇರುವದೇ ಪಂಚರಾತ್ರ, ಇದನ್ನು

ಅನುಸರಿಸುವವರೇ ಪಾಂಚರಾತ್ರರು (339-111,112). **ಸಾತ್ತ್ವತಧರ್ಮವೆಂದರೆ-** ಸತ್ತ್ವವು ಭಗವಂತನಿಂದಲೇ ಆದದ್ದು, ಸತ್ತ್ವದ ನಿಮಿತ್ತದಿಂದ ಭಗವಂತನು ನಿಷ್ಕಲ್ಮಷವಾಗಿ ನಿಷ್ಕಾಮಕರ್ಮಯುಕ್ತನಾಗಿರುತ್ತಾನೆ, ಸಾತ್ತ್ವತತಂತ್ರದ ಜ್ಞಾನದಿಂದ ಭಗವತ್ಸ್ವರೂಪವು ನಿಶ್ಚಿತವಾಗುವದು - ಆದ್ದರಿಂದ ಸಾತ್ತ್ವತಧರ್ಮವು. ಈ ಸಾತ್ತ್ವತಮತಕ್ಕೆ **ಏಕಾಂತಿಗಳ ಧರ್ಮ**ವೆಂದೂ ಹೆಸರಿದೆ. ನಿಷ್ಕಾಮರಾಗಿ ಸರ್ವಾತ್ಮನಾದ ಭಗವಂತನನ್ನೇ ನಿಯಮದಿಂದ ಭಜಿಸುವವರೇ ಏಕಾಂತಿಗಳು, ''ಏಕಭಕ್ತಿರ್ವಿಶಿಷ್ಯತೇ'' (ಗೀ. 7-17) ಎಂದು ಗೀತೆಯಲ್ಲಿ ವರ್ಣಿಸಿರುವ ಜ್ಞಾನಿಭಕ್ತನೇ, ಹನ್ನೆರಡನೆ ಅಧ್ಯಾಯದಲ್ಲಿ ವರ್ಣಿಸಿರುವ ಅಕ್ಷರೋಪಾಸಕನೇ ಏಕಾಂತಿ ಎಂಬುದು ಸ್ಪಷ್ಟವಾಗುತ್ತದೆ. ನಾರಾಯಣೀಯದ 350 - 25 ರಿಂದ 27ರವರೆಗಿನ ಶ್ಲೋಕಗಳನ್ನು ವಿವೇಚನೆಮಾಡಿದರೆ ಅವು ಉಪನಿಷತ್ಪ್ರತಿಪಾದ್ಯನಾದ ಪುರುಷಸಂಜ್ಞಕನಾದ ಪರಮಾತ್ಮನ ವರ್ಣನೆಯೆ ಆಗಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ಶ್ಲೋಕಗಳನ್ನು ಆಚಾರ್ಯರು ಸೂ.ಭಾ. 2-1-1ರಲ್ಲಿ ಉದಾಹರಿಸಿರುತ್ತಾರೆ. ಮುಂದಿನ ಅಧ್ಯಾಯದಲ್ಲಿ ನಾರಾಯಣೀಯವು ಸಮಾಪ್ತಿಯಾಗಿದೆ. ಅಲ್ಲಿ ಹೇಳಿರುವದನ್ನು ನೋಡಿದರೆ ಶಂಕರಾಚಾರ್ಯರ ವೇದಾಂತಸಿದ್ಧಾಂತಕ್ಕೂ ಇದಕ್ಕೂ ಸ್ವಲ್ಪವೂ ಭೇದವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಶ್ರೀಶ್ರೀಗಳವರು ರಚಿಸಿರುವ, ಕಾರ್ಯಾಲಯದಿಂದ ಪ್ರಕಟವಾಗಿರುವ **ಭಾಗವತಸಂಪ್ರದಾಯ** ಗ್ರಂಥವನ್ನು ಅವಲೋಕಿಸಿದರೆ ನಾರಾಯಣೀಯವನ್ನು ಕುರಿತು ಇನ್ನೂ ಹೆಚ್ಚಿನ ವಿಚಾರವನ್ನು ತಿಳಿಯಲು ಸಹಕಾರಿಯಾಗುವದು.

ಇನ್ನು ಶ್ರೀಶ್ರೀಗಳವರು **ಭಗವದ್ಗೀತಾರ್ಥಸರ್ವಸ್ವ** ಗ್ರಂಥದಲ್ಲಿಯೂ ''ಭಾರತದ ಮಿಕ್ಕ ಭಾಗಗಳಿಗೂ ಗೀತೆಗೂ ಹೋಲಿಕೆ'' ಎಂಬ **ಎರಡನೆಪ್ರಕರಣ**ದಲ್ಲಿ ನಾರಾಯಣೀಯವನ್ನು ವಿಮರ್ಶೆಗೆ ತೆಗೆದುಕೊಂಡಿರುತ್ತಾರೆ. ಅಲ್ಲಿ ಪ್ರವೃತ್ತಿಧರ್ಮದಿಂದ ನಿವೃತ್ತಿಧರ್ಮವನ್ನು ಪಡೆದು ನಿವೃತ್ತಿಧರ್ಮದಿಂದ ಪುನರಾವೃತ್ತಿರಹಿತವಾದ ಮೋಕ್ಷವನ್ನು ಪಡೆಯುತ್ತಾರೆ- ಎಂಬುದು ನಾರಾಯಣೀಯೋಪಾಖ್ಯಾನಾದಿಗಳ ಹೋಲಿಕೆಯಿಂದ ಸ್ಪಷ್ಟವಾಗಿ ಮೂಡುವದು ಎಂದು ತೀರ್ಮಾನಿಸಿದ್ದಾರೆ. ಮತ್ತೆ **ಭಕ್ತಿಯೋಗ**ವೆಂಬ ಐದನೆ ಪ್ರಕರಣದಲ್ಲಿ **ಕಥಿತೋ ಹರಿಗೀತಾಸು (348-53)** ಮುಂತಾದ ನಾರಾಯಣೀಯದ ಶ್ಲೋಕಗಳ ಆಧಾರದಿಂದ ಭಗವದ್ಗಿತೆಯೇ ಭಾಗವತ ಧರ್ಮದ ಮೂಲಗ್ರಂಥವು. ಏಕಾಂತಭಕ್ತಿಯಿಂದ ಆತನನ್ನು ನಂಬಿರುವವರಲ್ಲಿ

ವಿಶೇಷವೇನೆಂದರೆ ಅವರು ಪರಮಾತ್ಮನನ್ನೇ ಸೇರಿಬಿಡುತ್ತಾರೆ (334-43,44). ಇದನ್ನೇ ಭಗವದ್ಗೀತೆಯಲ್ಲಿಯೂ ಹೇಳಿದೆ. ಒಟ್ಟಿನಲ್ಲಿ ಭಾಗವತಧರ್ಮದ ಮುಖ್ಯ ಸಿದ್ಧಾಂತವು ಗೀತೆಯಲ್ಲಿಯೂ ನಾರಾಯಣೀಯದಲ್ಲಿಯೂ ಇದೆ. ಆದ್ದರಿಂದ ನಾರಾಯಣೀಯವನ್ನು ಶಾಂಕರಸಿದ್ಧಾಂತದೊಂದಿಗೆ ಅಧ್ಯಯನಮಾಡುವದು ಅವಶ್ಯವಾಗಿದೆ.

ಪ್ರಾಣಿಗಳ ಗತ್ಯಾಗತಿಗಳೂ ಸೃಷ್ಟಿಪಲಯಗಳೂ ಹೇಗೆ ಆಗುವವು?- ಎಂದು ಸಾಂಗವೇದಾಧ್ಯಯನವನ್ನು ಉಪನಿಷತ್ತುಗಳೊಡನೆ ಅಧ್ಯಯನಮಾಡಿದ ಶುಕನು ಧರ್ಮಾರ್ಥಗಳನ್ನು ಕುರಿತು ಮಾಡಿದ ಪ್ರಶ್ನೆಗೆ ವ್ಯಾಸರು ನೀಡಿದ ಉತ್ತರವೇ **ಶುಕಾನುಶಾಸನ.** ಇಲ್ಲಿ ವ್ಯಾಸರು ಮಗನಿಗೆ ಕಾಲಸ್ವರೂಪ, ಸೃಷ್ಟಿಪ್ರಲಯಗಳ ವರ್ಣನೆ, ಯುಗಧರ್ಮ, ಬ್ರಾಹ್ಮರಕರ್ತವ್ಯ, ಕಾಲನದಿಯನ್ನು ದಾಟುವ ಉಪಾಯ, ಧ್ಯಾನಯೊಗವನ್ನು ತಿಳಿಸಿ, ವಾಕ್ಕಾಯಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡಿರುವ, ಲೋಷ್ಟಾಶ್ಮಕಾಂಚನಗಳಲ್ಲಿ ಸಮಬುದ್ಧಿಯನ್ನಿಟ್ಟುಕೊಂಡಿರುವ ಬೇರೆವರ್ಣದವರಾಗಿರಲೀ, ಹೆಂಗಸಾಗಲಿ, ಧರ್ಮದಲ್ಲಿ ಕಾಂಕ್ಷೆ ಇದ್ದರೆ ಅವರು ಪರಮಗತಿಯನ್ನು ಪಡೆಯುವರು. ಲೋಕದ ಎಲ್ಲವನ್ನೂ ಆ ತತ್ತ್ವವೆಂದೇ ಕಾಣುವರು. ಮಹರ್ಷಿಯ ಈ ವಚನಗಳನ್ನು ಮನಸ್ಸಿನಲ್ಲಿ ಮಾಡಿದ ವಿವೇಕಿಗಳು ಆಭೂತಸಂಪ್ಲವವನ್ನೇ ಪಡೆದುಕೊಳ್ಳುವರು ಎಂದು ಉಪದೇಶಿಸಿದೆ.

ವಿರಕ್ತ ಶಿಖಾಮಣಿಯಾದ ಶುಕದೇವನ ಪರಾಮರ್ಶವಿರುವ ಭಾಗವನ್ನು ಮೋಕ್ಷಧರ್ಮದಲ್ಲಿ **ಶುಕಾನುಪ್ರಶ್ನ** ಎಂದು ಕರೆದಿದೆ. ಇಲ್ಲಿ ಶುಕರು ವೇದದಲ್ಲಿ ಕರ್ಮವನ್ನು ಮಾಡಬೇಕೆಂದು ವಚನಗಳಿವೆಯಲ್ಲವೆ; ಮಾಡಿದರೇನುಫಲ? ಬಿಟ್ಟು ಜ್ಞಾನಿಯಾದರೇನು ಫಲ? ಎಂದು ಕೇಳಿದಾಗ ವ್ಯಾಸರು, ವೇದಗಳ ಆಧಾರವುಳ್ಳ ಮಾರ್ಗಗಳು ಪ್ರವೃತ್ತಿಧರ್ಮವು, ಉತ್ತಮವಾದ ನಿವೃತ್ತಿಧರ್ಮವು ಎಂದು ಎರಡು ಬಗೆ. ಕರ್ಮದಿಂದ ಜೀವನು ಬದ್ಧನಾಗುವನು. ಜ್ಞಾನದಿಂದ ಮುಕ್ತನಾಗುವನು. ಆದ್ದರಿಂದ ಪಾರದರ್ಶಿಗಳಾದ ಯತಿಗಳು ಕರ್ಮವನ್ನು ಮಾಡುವದಿಲ್ಲ. ಕರ್ಮವನ್ನು ಮಾಡಿ ಸತ್ತಮೇಲೆ ಹದಿನಾರು ಅಂಶಗಳಿಂದ ಕೂಡಿದ ಮತ್ತೊಂದು ದೇಹವನ್ನು ಧರಿಸಿ ಹುಟ್ಟುವನು. ಆದರೆ ಜ್ಞಾನದಿಂದ ನಿತ್ಯವೂ ಅತೀಂದ್ರಿಯವೂ ಆದ ಬ್ರಹ್ಮಸ್ವರೂಪನಾಗುವನು (241-6,7,8). ಹಾಗಾದರೆ ಕರ್ಮದಿಂದ ಏನು ಪ್ರಯೋಜನವೆಂದು

ಶುಕನು ಕೇಳಿದಾಗ, ಮಹಡಿಯ ಮೆಟ್ಟಿಲುಗಳಂತೆ ಇರುವ ಮೊದಲನೆಯ ಮೂರು ಆಶ್ರಮಗಳ ಕರ್ಮದಿಂದ 'ಕಷಾಯವು ಪಕ್ವವಾಗುವದು' ಎಂದರೆ ರಾಗದ್ವೇಷಗಳ ವಾಸನೆಯು ದೂರವಾಗುವದು. ಈ ಬುದ್ಧಿಸಂಸ್ಕಾರವೇ ಕರ್ಮದ ಫಲವು (245-3) ಹಾಗೂ ''ಸರ್ವವೂ ಬ್ರಹ್ಮವೇ, ಎಲ್ಲವೂ ಪರಮಾತ್ಮನೇ, ಪರಮ್ಮಾನಿಗಿಂತ ವ್ಯತಿರಿಕ್ತ ನಾಗಿ ಏನೊಂದೂ ಇರುವದೇ ಇಲ್ಲ''- ಎಂಬ ಜ್ಞಾನದಿಂದಲೇ ಬ್ರಾಹ್ಮಣನಾಗುವನು- ಎಂಬುದನ್ನು ''**ತಂ ದೇವಾ ಬ್ರಾಹ್ಮಣಂ ವಿದುಃ**'' (245-11 ರಿಂದ 17) ಎಂಬ ಉಪದೇಶದಿಂದ ತಿಳಿಸಿದರು. ಹೀಗೆ ವ್ಯಾಸರು ಮಾಡಿದ ಧರ್ಮವೈರಾಗ್ಯಪೂರ್ಣವಾದ ಉಪದೇಶವನ್ನು ಕೇಳಿದ ಶುಕನು ಮೋಕ್ಷಗಾಮಿಯಾದನು- ಎಂಬುದು ಇಲ್ಲಿಯ ಉಪದೇಶ.

ಯುಧಿಷ್ಠಿರನು ಭೀಷ್ಮನಲ್ಲಿ ಶುಕನ ಜನನ ಮತ್ತು ಆತನು ಪರಮ ಸಿದ್ಧಾಂತವನ್ನು ಪಡೆದುಕೊಂಡದ್ದನ್ನು ಕುರಿತು ಮಾಡಿದ ಸಂವಾದವಾದವೇ **ಶುಕವೃತ್ತಾಂತ.** ಇಲ್ಲಿ ಶುಕನಜನನ, ಶುಕನಿಗೆ ವ್ಯಾಸರ ಉಪದೇಶ ಮುಂತಾದ ವಿಷಯಗಳು ಬಂದಿವೆ. ಮೋಕ್ಷವನ್ನೂ ವಿವಿಧಧರ್ಮಗಳ ವಿಷಯವನ್ನು ಅಧ್ಯಯನ ಮಾಡಲು ಮಿಥಿಲೆಗೆ ಹೋಗಿ ಜನಕನೊಡನೆ ಸಂವಾದ, ಅಲ್ಲಿ ಶುಕನು ಜ್ಞಾನವಿಜ್ಞಾನಗಳು ಹೃದಯದಲ್ಲಿ ಉತ್ಪನ್ನವಾಗಿ ಶಾಶ್ವತವಾಗಿ ಇರಲು ಮೂರು ಆಶ್ರಮಗಳು ಅವಶ್ಯವೇ? ಎಂದು ಪ್ರಶ್ನಿಸಲು, ಜನಕನು ಜ್ಞಾನವಿಜ್ಞಾನಗಳಿಲ್ಲದೇ ಮೋಕ್ಷಪ್ರಾಪ್ತಿಯಿಲ್ಲ, ಗುರುಸಂಬಂಧವಿಲ್ಲದೇ ಜ್ಞಾನಪ್ರಾಪ್ತಿಯಾಗಲಾರದು ಎನ್ನುತ್ತಾ ಅನೇಕ ಜನ್ಮಗಳಲ್ಲಿ ಕರ್ಮಯೋಗವನ್ನು ಮಾಡಿದ್ದರಿಂದ ಶುದ್ಧಾತ್ಮನಾಗಿ ಮೊದಲನೆ ಆಶ್ರಮದಲ್ಲಿಯೇ ಮೋಕ್ಷವನ್ನು ಪಡೆದುಕೊಳ್ಳುತ್ತಾನೆ. ಮೂರು ಆಶ್ರಮಗಳಲ್ಲಿ ಯಾವ ಪ್ರಯೋಜನವೂ ಇಲ್ಲ. ಸಾತ್ತ್ವಿಕಮಾರ್ಗವನ್ನು ಅನುಸರಿಸಿ ಆತ್ಮನನ್ನು ತನ್ನಲ್ಲಿಯೇ ಕಂಡುಕೊಳ್ಳಬೇಕು- ಎಂದು ಉಪದೇಶಿಸಿದನು. ಮುಂದೆ ನಾರದರು **ವಿದ್ಯೆಗೆ ಸಮನಾದ ಕಣ್ಣಿಲ್ಲ, ಸತ್ಯಕ್ಕೆ ಸಮನಾದ ತಪಸ್ಸಿಲ್ಲ, ಆಸೆಗೆ ಸಮನಾದ ದುಃಖವಿಲ್ಲ, ತ್ಯಾಗಕ್ಕೆ ಸಮನಾದ ಸುಖವಿಲ್ಲವೆಂದು** ಉಪದೇಶಿಸಿರುತ್ತಾರೆ. ಹಾಗೆಯೇ **ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ। ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತತ್ತ್ಯಜ ॥ (331-44)** (ಧರ್ಮವನ್ನು ಬಿಡು, ಅಧರ್ಮವನ್ನು ಬಿಡು, ಸತ್ಯ , ಅನೃತ- ಇವೆರಡನ್ನೂ ಬಿಡು. ಸತ್ಯಾನೃತಗಳೆರಡನ್ನೂ

ಬಿಟ್ಟಬಳಿಕ ಯಾವ ಅಭಿಮಾನದಿಂದ ಇವನ್ನು ಬಿಡುವೆಯೋ ಅದನ್ನೂ ಬಿಟ್ಟುಬಿಡು) ಎಂದು ನಾರದರು ಮಾಡಿದ ಪರಮರಹಸ್ಯೋಪದೇಶದಿಂದ ಮಹಾಯೋಗೇಶ್ವರನಾಗಿ ಜ್ಞಾನಕ್ಕಾಗಿ ಮೋಕ್ಷಮಾರ್ಗವನ್ನು ಅನುಸರಿಸಿದನು. ಅವನು ಪಂಚಭೂತಗಳ ಗುಣಗಳನ್ನು ಆಶ್ರಯಿಸಿ ತಿರುಗುತ್ತಿದ್ದನು. ಶುಕ! ಎಂದು ಕರೆದರೆ ಸ್ಥಾವರಜಂಗಮಗಳೆಲ್ಲವೂ ಭೋಃ! ಎಂದು ಉತ್ತರಿಸಿದವಂತೆ. ಅನಂತರ ಶುಕನು ಭೂತಗುಣಗಳನ್ನೂ ಬಿಟ್ಟು ಅಂತರ್ಹಿತನಾಗಿ ಪರಮಪದವನ್ನು ಹೊಂದಿದನು– ಎಂಬುದು ಸಾರವು.

ಮಹಾಭಾರತದ ಕೊನೆಯಲ್ಲಿರುವ **ಭಾರತಸಾವಿತ್ರೀ** ಎಂಬ ನಾಲ್ಕು ಶ್ಲೋಕಗಳನ್ನೂ ಸೇರಿಸಿದೆ. ಇಲ್ಲಿ ವ್ಯಾಸರು ಅತ್ಯಂತ ಕರುಣೆಯಿಂದ– ಕೈಗಳನ್ನು ಮೇಲೆತ್ತಿ ಸಾರಿ ಹೇಳುತ್ತಿದ್ದೇನೆ. ನನ್ನ ಮಾತನ್ನು ಯಾರೂ ಕೇಳುತ್ತಿಲ್ಲ. ಧರ್ಮದಿಂದ ಅರ್ಥಕಾಮಗಳ ಸಿದ್ಧಿಯಾಗುತ್ತವೆ. ಆದರೂ ಧರ್ಮವನ್ನು ಅನುಸರಿಸುತ್ತಿಲ್ಲ, ಧರ್ಮವು ನಿತ್ಯವಾದದ್ದು, ಜೀವನು ನಿತ್ಯನು; ಸುಖದುಃಖಗಳು ಅನಿತ್ಯ, ಈ ಭಾರತಸಾವಿತ್ರಿಯನ್ನು ನಿತ್ಯ ಅಧ್ಯಯನಮಾಡಿದರೆ ಪರಬ್ರಹ್ಮವನ್ನು ಪಡೆಯುತ್ತಾನೆ. ಹಾಗೆಯೇ ಈ ಪುಣ್ಯದಾಯಕವೂ ಪಾಪಹಾರಿಯೂ ಆದ ಕಾರ್ಷ್ಣವೇದ (ಮಹಾಭಾರತ)ವನ್ನು ನಿತ್ಯ ಅಧ್ಯಯನಮಾಡುವವನು, ಆಖ್ಯಾನಗಳನ್ನು ನಿತ್ಯವೂ ಕೇಳುವವನು ಅಪರಿಮಿತವಾದ ಪುಣ್ಯವನ್ನು ಪಡೆಯುತ್ತಾನೆ; ಪರಮಸಿದ್ಧಿಯನ್ನು ಪಡೆಯುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ– ಎಂದು ಉಪದೇಶಿಸಿರುತ್ತಾರೆ.

ಶ್ರೀಶ್ರೀಗಳವರ ಅನುವಾದವು ಮೂಲವಿಲ್ಲದೆ ಓದಿದರೂ ವ್ಯಾಸರ ಪ್ರಾಸಾದಿಕ ವಾಣಿಯನ್ನೇ ಓದಿದಂತೆ ಭಾಸವಾಗುವದರಿಂದ ಗ್ರಂಥದಲ್ಲಿ ಮೂಲ ಸಂಸ್ಕೃತ ಶ್ಲೋಕಗಳನ್ನು ಸೇರಿಸಿಲ್ಲ. ಶ್ರೀಶ್ರೀಗಳವರೇ ''**ಭಗವಂತನ ಅನುಗ್ರಹಕ್ಕೆ ಪಾತ್ರರಾಗಲಿಚ್ಛಿಸುವ ಭಾವುಕರೆಲ್ಲರೂ ಶ್ರದ್ಧಾಭಕ್ತಿಯುತರಾಗಿ ಇದನ್ನು ಪಠಿಸಬೇಕು**'' ಎಂದು ತಿಳಿಸಿದ್ದಾರೆ. ಆದ್ದರಿಂದ ಮುಮುಕ್ಷುಜನರಿಗೆ ಅನುಕೂಲವಾಗಲಿ; ಶ್ರೀಶ್ರೀಗಳವರ ಎಲ್ಲ ಲೇಖನಗಳೂ ಚಿಂತನೆಗೆ ಲಭ್ಯವಾಗಲಿ ಎಂದು ಅವುಗಳನ್ನೆಲ್ಲ ಸಂಕಲಿಸಿ ಈ ಗ್ರಂಥವನ್ನು ಪ್ರಕಟಿಸಲಾಗಿದೆ. ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿ ಶುಕಾನುಶಾಸನ, ಶುಕಾನುಪ್ರಶ್ನ, ಶುಕವೃತ್ತಾಂತಗಳು ಮೊದಲು, ಅನಂತರ ನಾರಾಯಣೀಯವಿದೆ. ಆದರೆ ಲೇಖನಕ್ರಮವನ್ನು ಬದಲಾವಣೆ ಮಾಡದೆ ಪತ್ರಿಕೆಯಲ್ಲಿ ಪ್ರಕಟಿಸಿದ್ದಂತೆ ಸಂಕಲಿಸಿ ಮುದ್ರಣಮಾಡಲಾಗಿದೆ. ಪರಿಶಿಷ್ಟದಲ್ಲಿ ಎಲ್ಲ 81

ಲೇಖನಗಳ ಪತ್ರಿಕೆಯ ಮೂಲವಿವರವನ್ನು ಸೂಚಿಸಿದೆ. ಭಾರತಸಾವಿತ್ರೀ ಲೇಖನವು ಸಂಸ್ಕೃತಪ್ರಥಮಪುಸ್ತಕದ 21ನೇ ಪಾಠದಲ್ಲಿ ಶ್ರೀಶ್ರೀಗಳವರೇ ಬರೆದಿದ್ದಾಗಿದ್ದು ಉಪಸಂಹಾರವಾಗಿ ಸೇರಿಸಿದೆ.

ಗ್ರಂಥಕ್ಕೆ ಅಮೂಲ್ಯವಾದ ಮೊದಲಮಾತನ್ನು ಬರೆದುಕೊಟ್ಟ ಶ್ರೀ ಶ್ರೀಅದ್ವಯಾನಂದೇಂದ್ರಸರಸ್ವತೀಸ್ವಾಮಿಗಳಿಗೆ ಪ್ರಣಾಮಪೂರ್ವಕವಾಗಿ ಕೃತಜ್ಞತೆ ಯನ್ನು ಅರ್ಪಿಸುತ್ತೇವೆ. ಈ ಗ್ರಂಥಕ್ಕೆ ಲೇಖನಗಳನ್ನು ಸಂಕಲಿಸುವದು, ಅಕ್ಷರಜೋಡನೆ, ಕರಡನ್ನು ತಿದ್ದುವದು, ಮುದ್ರಣ – ಮುಂತಾದ ರೀತಿಯಿಂದ ಕಾರ್ಯಾಲಯದ ಬಂಧುಗಳು ಸಹಕರಿಸಿರುತ್ತಾರೆ. ಹಾಗೆಯೇ ಈ ಗ್ರಂಥಮುದ್ರಣಕ್ಕೆ ಶ್ರೀಯುತರುಗಳಾದ 1) ಎಸ್.ಆರ್. ಶಾರದಮ್ಮ, ಬೆಂ.; 2) ಸೀತಮ್ಮಕೃಷ್ಣಮೂರ್ತಿ ಪಬ್ಲಿಕ್ ಛಾರಿಟಬಲ್ ಟ್ರಸ್ಟ್, ಬೆಂ.; 3) ವೈ.ಎ. ರವಿಶಂಕರ್, ಮೈಸೂರು; 4) ವೈ.ಎ. ಸುಬ್ರಹ್ಮಣ್ಯ, ಮೈಸೂರು; 5) ಕೆ.ಪಿ. ಚೆನ್ನವೀರೇಗೌಡ, ಹಾಸನ; 6) ದೊಡ್ಡಮನಿ ಹನುಮಂತಪ್ಪ, ಜಿಗಲಿ; 7) ಡಾ|| ನರಸಿಂಗಪ್ಪ, ಬೆಂ.; 8) ವೈ.ಎ. ಜನಾರ್ಧನ, ಬೆಂ.; 9) ಎಸ್. ವಾಸುದೇವ, ಬೆಂ.; 10) ಶ್ರೀಮತಿ ವಿಜಯಮೂರ್ತಿ, ಬೆಂ.; 11) ವಿಶ್ವನಾಥ ಎ. ವೈದ್ಯ; 12) ಮಂಗಳಗೌರಮ್ಮ, ಬೆಂ.; 13) ನಾಗರತ್ನಮ್ಮ, ತಿಪಟೂರು; 14) ಕೆ. ರಾಮಚಂದ್ರ, ಬೆಂ.; 15) ಕೆ.ಎಸ್. ಮಹೇಶ್‌ಬಾಬು, ಬೆಂ.; 16) ಆರ್. ವಿಜಯಕುಮಾರ್, ಬೆಂ.; 17) ಎನ್.ಆರ್. ವೀರಜ್, ಬೆಂ., 18) ಎಸ್. ನಾಗರಾಜ್, ಬೆಂ. ಧನಸಹಾಯವನ್ನು ನೀಡಿರುತ್ತಾರೆ. ಅವರುಗಳಿಗೂ ಕಾರ್ಯಾಲಯದ ಪರವಾಗಿ ಕೃತಜ್ಞತಾಪೂರ್ವಕ ಧನ್ಯವಾದಗಳು.

ಈ ಗ್ರಂಥವನ್ನು ಪ್ರೇಮಾದರಗಳಿಂದ ಸ್ವೀಕರಿಸಿ ಕಾರ್ಯಾಲಯದಲ್ಲಿ ನಿರಂತರವಾಗಿ ನಡೆಯುತ್ತಿರುವ ಆಧ್ಯಾತ್ಮಿಕ ಚಟುವಟಿಕೆಗಳಿಗೆ ಹಾಗೂ ಗ್ರಂಥಪ್ರಕಟಣೆಗೆ ಹೆಚ್ಚಿನ ಪ್ರೋತ್ಸಾಹನೀಡಬೇಕಾಗಿ ವಿನಂತಿ.

**ದುರ್ಮುಖಿನಾಮಸಂವತ್ಸರ ಆಷಾಢಬಹುಳ**
**ತ್ರಯೋದಶೀ, ಶ್ರೀಶ್ರೀಗಳವರ ಆರಾಧನೆ** **ಪ್ರಕಾಶಕರು**
**31-7-2016.**

# ವಿಷಯಾನುಕ್ರಮಣಿಕೆ

## ಮಹಾಭಾರತ

### ಮೋಕ್ಷಧರ್ಮಪರ್ವದ ಉಪದೇಶಗಳು

(ನಾರಾಯಣೀಯ, ಶುಕಾನುಶಾಸನ, ಶುಕಾನುಪ್ರಶ್ನ, ಶುಕವೃತ್ತಾಂತ)

### ಭಾಗ - I ನಾರಾಯಣೀಯ

(ಮೋಕ್ಷಧರ್ಮಪರ್ವದ 334ನೇ ಅಧ್ಯಾಯದಿಂದ)

**ಭಾಗ - II ಶುಕಾನುಶಾಸನ**

**(ಮೋಕ್ಷಧರ್ಮಪರ್ವದ - 231ನೇ ಅಧ್ಯಾಯದಿಂದ)**

## ಭಾಗ - III ಶುಕಾನುಪ್ರಶ್ನ

### (ಮೋಕ್ಷಧರ್ಮಪರ್ವದ - 241ನೇ ಅಧ್ಯಾಯದಿಂದ)

## ಭಾಗ - IV ಶುಕವೃತ್ತಾಂತ

### (ಮೋಕ್ಷಧರ್ಮಪರ್ವದ 323ನೆಯ ಅಧ್ಯಾಯದಿಂದ)

ಓಂ

ನಮೋ ನಾರಾಯಣಾಯ

ನಾರಾಯಣಂ ನಮಸ್ಕೃತ್ಯ | ನರಂ ಚೈವ ನರೋತ್ತಮಮ್ |
ದೇವೀಂ ಸರಸ್ವತೀಂ ವ್ಯಾಸಮ್ | ತತೋ ಜಯಮುದೀರಯೇತ್ ||

# ಭಾಗ – I

# ನಾರಾಯಣೀಯ

(ಮೋಕ್ಷಧರ್ಮಪರ್ವದ 334 ರಿಂದ 351 ಅಧ್ಯಾಯಗಳು)

## 1. ಸರ್ವಾಶ್ರಮಿಗಳಿಗೂ ಪೂಜ್ಯವಾಗಿರುವ ದೇವತೆ*

ಮಹಾಭಾರತದಲ್ಲಿ **'ನಾರಾಯಣೀಯ'**ವೆಂದು ಪ್ರಸಿದ್ಧವಾಗಿರುವ ಮೋಕ್ಷ ಧರ್ಮದ ಭಾಗವನ್ನು ಕನ್ನಡದಲ್ಲಿ ಸರಳಾನುವಾದವನ್ನು ಮಾಡಿ ಪ್ರಕಟಿಸಬೇಕೆಂದು ಪ್ರಯತ್ನಿಸಿರುತ್ತೇನೆ. ಭಗವಂತನ ಅನುಗ್ರಹಕ್ಕೆ ಪಾತ್ರರಾಗಲಿಚ್ಛಿಸುವ ಭಾವುಕರೆಲ್ಲರೂ ಶ್ರದ್ಧಾಭಕ್ತಿಯುತರಾಗಿ ಇದನ್ನು ಪಠಿಸಬೇಕು; ಸಂಸ್ಕೃತವನ್ನು ತಿಳಿದವರು ಮಹಾಭಾರತದಲ್ಲಿ ಶಾಂತಿಪರ್ವದ (334 ನೆಯ ಅಧ್ಯಾಯದಿಂದ ಮೊದಲಾಗಿರುವ) ಈ ಭಾಗವನ್ನು ಮೂಲದಲ್ಲಿಯೇ ಓದುವದಾದರೆ ಭಗವಾನ್ ವೇದವ್ಯಾಸರ ಪ್ರಾಸಾದಿಕ ವಾಣಿಯನ್ನೇ ಶ್ರವಣಮಾಡಿದ ಫಲವನ್ನು ಪಡೆದುಕೊಳ್ಳಬಹುದು.

ಯುಧಿಷ್ಠಿರನು ಭೀಷ್ಮಾಚಾರ್ಯರನ್ನು ಕುರಿತು ಕೇಳಿದ ಪ್ರಶ್ನೆಯೇನೆಂದರೆ: ಗೃಹಸ್ಥನಾಗಲಿ, ಬ್ರಹ್ಮಚಾರಿಯಾಗಲಿ, ವಾನಪ್ರಸ್ಥನಾಗಲಿ, ಭಿಕ್ಷುವಾಗಲಿ ಸಿದ್ಧಿಯನ್ನು ಪಡೆಯಬೇಕೆಂಬ ಇಚ್ಛೆಯಿದ್ದವನಾದರೆ ಯಾವ ದೇವತೆಯನ್ನು ಪೂಜಿಸಬೇಕು? ಸಾಧಕನಿಗೆ ನಿತ್ಯಸ್ವರ್ಗವು ಏತರಿಂದ ದೊರಕುವದು? ಪರಮಪುರುಷಾರ್ಥವು ಏತರಿಂದ ಲಭಿಸುವುದು? ದೇವತೆಗಳನ್ನೂ ಪಿತೃಗಳನ್ನೂ ಉದ್ದೇಶಿಸಿ ಅವನು ಯಾವ ವಿಧಾನದಿಂದ ಹೋಮವನ್ನು ಮಾಡಬೇಕು? ಮುಕ್ತನಾದವನಿಗೆ ಯಾವ ಗತಿಯು ಪ್ರಾಪ್ತವಾಗುವುದು? ಮೋಕ್ಷವೆಂಬುದರ ಸ್ವರೂಪವೇನು? ಸ್ವರ್ಗಕ್ಕೆ

* ಅ. ಪ್ರ. ಪತ್ರಿಕೆ: ಸಂಪುಟ 1; ಸಂಚಿಕೆ 1; ಸೆಪ್ಟೆಂಬರ್ 1966

ಹೋದವನು ಮತ್ತೆ ಆ ಲೋಕದಿಂದ ಜಗುಳಿಬೀಳದಂತೆ ಏನು ಮಾಡಬೇಕು? ದೇವತೆಗಳಿಗೆಲ್ಲ ದೇವತೆ ಯಾವನು? ಪಿತೃಗಳಿಗೆಲ್ಲ ಪಿತೃ ಯಾವಾತನು? ಅಥವಾ ಅದಕ್ಕಿಂತಲೂ ಪರತರವಾದದ್ದು ಇದ್ದರೆ, ಎಲೈ ಪಿತಾಮಹನೆ, ನನಗೆ ಅದನ್ನು ತಿಳಿಯಹೇಳು!

ಇದಕ್ಕೆ ಭೀಷ್ಮರು ಇಂತೆಂದರು: ನಿಷ್ಪಾಪನೆ, ಪ್ರಶ್ನೆಯನ್ನು ಹಾಕುವ ವಿಧಾನವನ್ನು ಬಲ್ಲವನು ನೀನು! ಗೂಢವಾಗಿರುವ ಪ್ರಶ್ನೆಯನ್ನೇ ಕೇಳಿರುತ್ತೀಯೆ. ಇದನ್ನು ಬರಿಯ ತರ್ಕದಿಂದ ಊಹಿಸಿ ಹೇಳುವದು ನೂರುಗಟ್ಟಲೆಯ ವರ್ಷಗಳಾದರೂ ಆಗಲಾರದು. ಅರಿಘ್ನನೆ, ಭಗವದನುಗ್ರಹವಿಲ್ಲದೆ ಅಥವಾ ಆಗಮಸಂಪ್ರದಾಯವಿಲ್ಲದೆ ತಿಳಿಸುವದು ಕಠಿನವಾಗಿರುತ್ತದೆಯಾದರೂ ನಿನಗೆ ಇದನ್ನು ವಿವರಿಸಿ ಹೇಳಲೇಬೇಕಾಗಿರುತ್ತದೆ.

ಈ ವಿಷಯದಲ್ಲಿ ನಾರದರಿಗೂ ನಾರಾಯಣಋಷಿಗಳಿಗೂ ನಡೆದ ಪುರಾತನವಾದ ಈ ಸಂವಾದವನ್ನು ಬಲ್ಲವರು ಉದಾಹರಿಸುತ್ತಿರುವರು. ಇದನ್ನು ನನ್ನ ತಂದೆಯು ನನಗೆ ಹೇಳಿದ್ದನು; ವಿಶ್ವಾತ್ಮನೂ ಚತುರ್ಮೂರ್ತಿಯೂ ಸನಾತನನೂ ಆದ ಸ್ವಯಂಭು ನಾರಾಯಣನು ಯಮಧರ್ಮನ ಮಗನಾಗಿ ಕೃತಯುಗದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ **ನರ, ನಾರಾಯಣ, ಹರಿ, ಕೃಷ್ಣ** – ಎಂಬ ನಾಲ್ಕು ರೂಪಗಳಿಂದ ಅವತರಿಸಿದನು. ಅವರುಗಳೊಳಗೆ ಅವ್ಯಯರಾದ ನರ, ನಾರಾಯಣ – ಈ ಇಬ್ಬರೂ ಸ್ವರ್ಣಮಯವಾದ ಒಂದು ರಥದಲ್ಲಿ ಬದರಿಕಾಶ್ರಮವನ್ನು ಸೇರಿ ತಪಸ್ಸನ್ನು ಮಾಡುತ್ತಿದ್ದರು. ಮನೋಹರವಾದ ಆ ರಥಕ್ಕೆ ಎಂಟು ಚಕ್ರಗಳಿದ್ದವು. ಅನೇಕ ಪ್ರಾಣಿಗಳು ಅದರಲ್ಲಿರುತ್ತಿದ್ದವು. ಜಗತ್ತಿಗೇ ಆದ್ಯರೂ ಲೋಕಕ್ಕೆಲ್ಲ ಒಡೆಯರೂ ಆಗಿದ್ದ ಅವರಿಬ್ಬರೂ ತಪಸ್ಸಿನಿಂದ ಕೃಶರಾಗಿದ್ದರು; ಅವರ ಶರೀರದಲ್ಲಿದ್ದ ನಾಡಿಗಳೆಲ್ಲ ನುಡಿದುಕೊಂಡಿದ್ದವು. ತಪಸ್ಸಿನಿಂದ ಉಂಟಾದ ತೇಜಸ್ಸಿನಿಂದ ಅವರು ದೇವತೆಗಳಿಗೂ ದುರ್ನಿರೀಕ್ಷರಾಗಿರುತ್ತಿದ್ದರು. ಅವರು ಯಾರಲ್ಲಿ ಪ್ರಸನ್ನರಾಗುವರೋ ಅವರಿಗೆ ಮಾತ್ರ ದರ್ಶನವನ್ನು ಕೊಡುತ್ತಿದ್ದರು.

ನಿಜವಾಗಿ ಅವರ ಅನುಜ್ಞೆಯಿಂದಲೇ ಇರಬೇಕು, ಹೃದಯದಲ್ಲಿರುವ ಅಂತರಾತ್ಮನಿಂದ ಪ್ರೇರಿತನಾಗಿ ನಾರದನು ಮಹಾಮೇರುವಿನಿಂದ ಹಾರಿ ಗಂಧಮಾದನಕ್ಕೆ ಇಳಿದು ಶೀಘ್ರಗಾಮಿಯಾದ್ದರಿಂದ ಆ ಮಹಾಭೂತಗಳಿಗೆ

ಆಶ್ರಯವಾಗಿದ್ದ ಬದರಿಯ ಆಶ್ರಮಕ್ಕೆ ಅವರಿಬ್ಬರೂ ಆಹ್ನಿಕವನ್ನು ಮಾಡುತ್ತಿದ್ದ ವೇಳೆಗೆ ಬಂದು ತಲುಪಿದನು. ಆಗ ಅವನಲ್ಲಿ ಈ ಕುತೂಹಲವುಂಟಾಯಿತು: "ಸರ್ವಲೋಕಗಳಿಗೂ ಆಧಾರವಾಗಿರುವ ಪರಿಪೂರ್ಣಸ್ಥಾನವಿದು. ದೇವತೆಗಳು, ಅಸುರರು, ಗಂಧರ್ವರು, ಕಿನ್ನರರು, ಮಹೋರಗಗಳು– ಈ ಎಲ್ಲರ ಲೋಕಗಳೂ ಇದರಲ್ಲಿರುತ್ತದೆ. ಮೊದಲು ಒಂದೇ ಆಗಿದ್ದ ಈ ಮೂರ್ತಿಯು ಮತ್ತೆ ಧರ್ಮನ ಕುಲಸಂತಾನವು ಅಭಿವೃದ್ಧಿಯಾಗಲೆಂದು ನರನಾರಾಯಣರು, ಕೃಷ್ಣನು, ಹರಿ– ಹೀಗೆ ನಾಲ್ಕು ಬಗೆಯಾಗಿ ವಿಂಗಡಿಸಿಕೊಂಡಿರುತ್ತದೆ. ಇದರೊಳಗೆ ಕೃಷ್ಣನೂ ಹರಿಯೂ ಯಾವದೋ ಕಾರಣಾಂತರದಿಂದ ಬೇರೆಕಡೆಯಲ್ಲಿರುತ್ತಾರೆ; ಈ ಇಬ್ಬರು ಮಾತ್ರ ಧರ್ಮಪ್ರಧಾನರಾಗಿ ಹೀಗೆ ತಪಸ್ಸುಮಾಡುತ್ತಿರುವರು. ಇವರೇ ಪರಮಧರ್ಮವಾಗಿರುವರು; ಹೀಗಿರುವಲ್ಲಿ ಇವರಿಗೆ ಆಹ್ನಿಕಕರ್ಮವೆಲ್ಲಿಂದ ಬಂದಿತೊ? ಯಶಸ್ವಿಗಳಾದ ಈ ಇಬ್ಬರೂ ಸರ್ವಭೂತಗಳಿಗೂ ಪಿತೃಗಳಾಗಿರುತ್ತಾರೆ, ದೇವತೆಯೂ ಆಗಿರುತ್ತಾರೆ. ಮಹಾಮತಿಗಳಾದ ಇವರು ಯಾವ ದೇವತೆಯನ್ನು ಪೂಜಿಸುತ್ತಿರುವರೊ, ಯಾವ ಪಿತೃಗಳನ್ನು ಅರ್ಚಿಸುತ್ತಿರುವರೊ! "ಎಂದು ಯೋಚಿಸುತ್ತಾ ನಾರಾಯಣ ಭಕ್ತಿಯಿಂದ ಅವರ ಮುಂದೆ ತಟ್ಟನೆ ಕಾಣಿಸಿಕೊಂಡನು.

ದೈವಪಿತ್ರ್ಯಕರ್ಮರೂಪವಾದ ಆಹ್ನಿಕವು ಮುಗಿಯಲು ಅವರು ಇವನನ್ನು ಕಂಡು ವಿಧಿವತ್ತಾಗಿ ಶಾಸ್ತ್ರೋಕ್ತವಾದ ಪ್ರಕಾರದಿಂದ ಪೂಜಿಸಿದರು. ಅವರು ಮಾಡುತ್ತಿರುವ ಆಶ್ಚರ್ಯಕರವಾದ ಅಪೂರ್ವವಾದ ಪೂಜೆಯ ವಿಧಿವಿಸ್ತಾರವನ್ನು ಕಂಡು ಪೂಜ್ಯನಾದ ನಾರದಋಷಿಯು ಸುಪ್ರೀತನಾಗಿ ಸಮೀಪದಲ್ಲಿ ಕುಳಿತು ಕೊಂಡನು. ಪ್ರಸನ್ನವಾದ ಅಂತಃಕರಣದಿಂದ ನಾರಾಯಣನನ್ನು ಕಂಡು ನಮಸ್ಕರಿಸಿ ಆ ಮಹಾದೇವನನ್ನು ಕುರಿತು ಇಂತೆಂದನು:

"ಪುರಾಣಗಳು, ಅಂಗೋಪಾಂಗಗಳು– ಇವುಗಳಿಂದೊಡಗೂಡಿದ ವೇದಗಳಲ್ಲಿ ನೀನು ಅಜನು, ಶಾಶ್ವತನು, ಧಾತೃವು, ಮಾತೃಸ್ವರೂಪನು, ನಿರತಿಶಯವಾದ ಅಮೃತಸ್ವರೂಪನು, ನಿನ್ನೊಳಗೆ ಭೂತಭವಿಷ್ಯತ್ಕಾಲದ ಈ ಜಗತ್ತೆಲ್ಲವೂ ಪ್ರತಿಷ್ಠಿತವಾಗಿರುತ್ತದೆ– ಎಂದು ಹೇಳಿರುತ್ತದೆ. ಗಾರ್ಹಸ್ಥ್ಯವನ್ನಾ ಶ್ರಯಿಸಿರುವ ನಾಲ್ಕು ಆಶ್ರಮಗಳಲ್ಲಿರುವವರೆಲ್ಲರೂ ನಾನಾಮೂರ್ತಿಗಳ ಆಕಾರದಿಂದಿರುವ ನಿನ್ನನ್ನೇ ಪೂಜಿಸುತ್ತಿರುವರು. ಸರ್ವಜಗತ್ತಿಗೂ ನೀನೇ ಪಿತೃ,

ಮಾತೃ, ಶಾಶ್ವತನಾದ ಗುರು. ಹೀಗಿರುವಲ್ಲಿ ನೀನು ಯಾವ ದೇವತೆಯನ್ನು, ಯಾವ ಪಿತೃವನ್ನು ಪೂಜಿಸುತ್ತಿರುವೆಯೋ ನಮಗೆ ತಿಳಿಯದೆ ಇದೆ. ದಯವಿಟ್ಟು ಎಲೈ ಮಹಾಭಾಗನೆ, ನೀನು ಯಾರನ್ನು ಅರ್ಚಿಸುತ್ತಿರುವೆಯೋ ಅದನ್ನು ಹೇಳು."

ಶ್ರೀ ಭಗವಂತನಿಂತೆಂದನು: "ಎಲೈ ಬ್ರಾಹ್ಮಣೋತ್ತಮನೆ, ಇದು ಅವಾಚ್ಯವಾಗಿರುವ ನಮ್ಮ ಸನಾತನರಹಸ್ಯವು. ಭಕ್ತಿವಂತನಾದ ನಿನಗೆ ಇದ್ದದ್ದು ಇದ್ದಂತೆ ತಿಳಿಸುವೆನು. ಯಾವದು ಸೂಕ್ಷ್ಮವಾಗಿ, ಅರಿಯಲಸದಳವಾಗಿ ಅವ್ಯಕ್ತವೂ ನಿಶ್ಚಲವೂ ಕೂಟಸ್ಥವೂ ಆಗಿರುವದೋ, ಯಾವದು ಇಂದ್ರಿಯಗಳೂ ಇಂದ್ರಿಯಾರ್ಥಗಳೂ ಇಲ್ಲದ್ದಾಗಿರುವದೋ ಅದೇ ಪ್ರಾಣಿಗಳ **"ಅಂತರಾತ್ಮ"**ನೆಂದೂ **'ಕ್ಷೇತ್ರಜ್ಞ'** ನೆಂದೂ ಕರೆಯಿಸಿಕೊಳ್ಳುತ್ತದೆ, ತ್ರಿಗುಣಪ್ರಕೃತಿಗಿಂತಲೂ ವ್ಯತಿರಿಕ್ತವಾಗಿದ್ದು **ಪುರುಷನು** ಎನ್ನಿಸಿಕೊಂಡಿರುತ್ತದೆ, ಎಲೈ ದ್ವಿಜಶ್ರೇಷ್ಠನೆ, ಅದರಿಂದ ತ್ರಿಗುಣಾತ್ಮಕವಾದ ಅವ್ಯಕ್ತವು ಉಂಟಾಗುತ್ತದೆ. ಯಾವದು ಅವ್ಯಕ್ತವಾಗಿದ್ದುಕೊಂಡು ವ್ಯಕ್ತಭಾವಗಳಲ್ಲೆಲ್ಲ ಇರುತ್ತಿರುವದೋ ಆ ಅವ್ಯಯವಾದ ಪ್ರಕೃತಿಯೇ ನಮಗೆ ಮೂಲವೆಂದು ತಿಳಿ. ಆತನೇ ಸದಸದ್ರೂಪನಾಗಿರುತ್ತಾನೆ; ದೈವಪಿತ್ರ್ಯಕರ್ಮಗಳಲ್ಲಿ ಆತನನ್ನೇ ನಾವು ಪೂಜಿಸುತ್ತಿರುವೆವು. ದ್ವಿಜನೆ, ಆತನಿಗಿಂತ ಪರತರನಾದ ದೇವತೆಯಾಗಲಿ ಪಿತೃವಾಗಲಿ ಇರುವದಿಲ್ಲ; ಆತನು ನಮಗೆ ಆತ್ಮನೇ ಎಂದು ತಿಳಿಯಬೇಕು, ಆದ್ದರಿಂದ ಆತನನ್ನೇ ನಾವು ಪೂಜಿಸುತ್ತಿರುವೆವು. ಎಲೈ ಬ್ರಾಹ್ಮಣನೆ, ಆತನಿಂದಲೇ ಈ ಲೋಕದಲ್ಲಿರಬೇಕಾದ ಅನುಷ್ಠಾನ ಮರ್ಯಾದೆಯು ಪ್ರಸಿದ್ಧಪಡಿಸಲಾಗಿರುವದು. ದೈವಪಿತ್ರ್ಯಕರ್ಮಗಳನ್ನು ಮಾಡಬೇಕೆಂಬುದು ಆತನ ಆಜ್ಞೆ . ಬ್ರಹ್ಮ, ರುದ್ರ, ಮನು, ದಕ್ಷ, ಭೃಗು, ಧರ್ಮ, ತಪಸ್ಸು, ಯಮ, ಮರೀಚಿ, ಅಂಗಿರಸ್ಸು, ಅತ್ರಿ ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ. ಪರಮೇಷ್ಠಿ, ವಿವಸ್ವನ್ತನು, ಸೋಮನು, ಕರ್ದಮ, ಕ್ರೋಧ, ವಿಕ್ರೀತ– ಈ **ಇಪ್ಪತ್ತೊಂದುಮಂದಿ ಪ್ರಜಾಪತಿಗಳೆನಿಸಿಕೊಂಡವರು** ಆತನಿಂದಲೇ ಉತ್ಪನ್ನರಾಗಿರುವರು. ಆ ದೇವತೆಗಳು ಆ ದೇವನು ಆಜ್ಞಾಪಿಸಿರುವ ಸನಾತನವಾದ ದೈವ, ಪಿತ್ರ್ಯ– ಎಂಬ ಅನುಷ್ಠಾನಪದ್ಧತಿಯನ್ನು ಗೌರವಿಸಿದ್ದರಿಂದ ತಮ್ಮ ತಮ್ಮ ಸ್ಥಾನವನ್ನು ಪಡೆದಿರುವರು. ಸ್ವರ್ಗಲೋಕದಲ್ಲಿರುವವರು ಕೂಡ ಎಲ್ಲರೂ ಆತನನ್ನು ನಮಸ್ಕರಿಸುತ್ತಿರುವರು. ಅವರು ಆತನ ಪ್ರಸಾದದಿಂದಲೇ ಅತನು ಕೊಟ್ಟಿರುವ ಗತಿಯನ್ನು ಪಡೆದುಕೊಂಡಿರುತ್ತಾರೆ. ಯಾರು ಹದಿನೇಳು

ಗುಣಗಳೂ ಕರ್ಮಗಳೂ ಇಲ್ಲದವರಾಗಿರುವರೋ ಅವರು ಹದಿನೈದು ಕಲೆಗಳನ್ನೂ ಬಿಟ್ಟು ಮುಕ್ತರಾಗುವರು – ಎಂಬುದು ನಿಶ್ಚಯವು.

"ಎಲೈ ಬ್ರಾಹ್ಮಣನೆ, ಮುಕ್ತರಿಗೆ ಗತಿಯಾದವನು ಆ ಕ್ಷೇತ್ರಜ್ಞನೆಂದು ಕಲ್ಪಿತನಾಗಿರುವಾತನೇ. ಆತನು ಸರ್ವಗುಣಗಳಿಂದಲೂ ಕೂಡಿರುವನೆಂದೂ ನಿರ್ಗುಣನೆಂದೂ ಉಕ್ತನಾಗಿರುತ್ತಾನೆ. ಜ್ಞಾನಯೋಗದಿಂದ ಆತನನ್ನು ಕಾಣ ಬಹುದು. ನಾವಿಬ್ಬರೂ ಆತನಿಂದಲೇ ಹೊರಹೊಮ್ಮಿರುವೆವು. ಹೀಗೆ ಅವನು ಆತ್ಮನೆಂದು ತಿಳಿದಿರುವದರಿಂದಲೇ ನಾವು ಸನಾತನನಾದ ಆತನನ್ನು ಪೂಜಿಸುತ್ತಿರುವೆವು. ವೇದವಿದರೂ ಸರ್ವಾಶ್ರಮಸ್ಥರೂ ನಾನಾಮತಗಳನ್ನು ಆಶ್ರಯಿಸಿದವರಾಗಿ ಭಕ್ತಿಯಿಂದ ಆತನನ್ನೇ ಪೂಜಿಸುತ್ತಿರುವರು; ಅವರಿಗೆ ಆತನೇ ಗತಿಯನ್ನು ಕೊಡುತ್ತಿರುವನು. **ಯಾರು ಆತನ ಭಾವದಿಂದಲೇ ಭಾವಿತರಾಗಿರುವರೋ ಅವರಲ್ಲಿ ಇನ್ನೊಂದು ಹೆಚ್ಚುಗಾರಿಕೆ ಇರುವದು: ಅದೇನೆಂದರೆ ಅವರು ಆತನನ್ನೇ ಪ್ರವೇಶಿಸುತ್ತಾರೆ.**

ಎಲೈ ನಾರದನೆ, ಈ ಗುಹ್ಯವೃತ್ತಾಂತವನ್ನು ನಿನಗೆ ಹೇಳಿದ್ದಾಗಿದೆ. ಭಕ್ತಿಯುಕ್ತನಾಗಿ ಪ್ರೇಮಪೂರಿತನಾಗಿ ನಮ್ಮಲ್ಲಿಯೂ ಭಕ್ತಿಯುಳ್ಳವನಾಗಿರುವದರಿಂದ ಎಲೈ ವಿಪ್ರರ್ಷಿಯೆ, ಇದನ್ನು ನೀನು ಶ್ರವಣಮಾಡಿರುವೆ.

* * * * *

## 2. ಪಾಂಚರಾತ್ರಶಾಸ್ತ್ರದ ಉತ್ಪತ್ತಿ*

ಭೀಷ್ಮರು ನಾರದವೃತ್ತಾಂತವನ್ನು ಮುಂದುವರಿಸಿ ಇಂತೆಂದರು: ಉತ್ತಮ ಪುರುಷನಾದ ನಾರಾಯಣನು ಹೀಗೆನ್ನಲು ಆ ಪುರುಷಶ್ರೇಷ್ಠನಾದ ನಾರದನು ಲೋಕಹಿತಕ್ಕೆಲ್ಲ ಆಶ್ರಯನಾಗಿರುವ ಪುರುಷೋತ್ತಮ ನಾರಾಯಣನನ್ನು ಕುರಿತು ಇಂತೆಂದನು: "ಅರ್ಥಮಾತ್ರದ ಉತ್ಪತ್ತಿಗೆ ಕಾರಣನಾದ ನೀನು ಧರ್ಮನ ಮನೆಯಲ್ಲಿ ನಾಲ್ಕು ರೂಪಗಳಿಂದ ಏತಕ್ಕಾಗಿ ಅವತರಿಸಿರುವೆಯೋ ಅದನ್ನು

---

* ಸಂಪುಟ 36; ಸಂಚಿಕೆ 2; ಅಕ್ಟೋಬರ್ 1966

ಲೋಕಕಲ್ಯಾಣಕ್ಕಾಗಿ ಸಾಧಿಸುವವನಾಗು. ಈಗ ನಿನ್ನ ಆದ್ಯಪ್ರಕೃತಿಯನ್ನು ನೋಡುವದಕ್ಕೆ ಹೋಗುತ್ತಿದ್ದೇನೆ. ಲೋಕನಾಥನೆ, ನಾನು ಗುರುಹಿರಿಯರ ಸೇವೆಯನ್ನು ಸತತವಾಗಿ ಮಾಡುತ್ತಿರುವೆನು; ಮತ್ತೊಬ್ಬರ ಗುಟ್ಟನ್ನು ರಟ್ಟುಮಾಡಿದವನಲ್ಲ. ವೇದಗಳನ್ನು ವಿಧಿವತ್ತಾಗಿ ಅಧ್ಯಯನಮಾಡಿರುತ್ತೇನೆ, ತಪಸ್ಸನ್ನು ಮಾಡಿರುತ್ತೇನೆ, ಅನೃತವನ್ನು ಎಂದಿಗೂ ಆಡಿರುವದಿಲ್ಲ. ಶಾಸ್ತ್ರದಲ್ಲಿ ಹೇಳಿರುವಂತೆ ಪಾಣಿ, ಪಾದ, ಉದರ, ಉಪಸ್ಥ- ಎಂಬ ನಾಲ್ಕನ್ನೂ ರಕ್ಷಣೆಮಾಡಿಕೊಂಡಿರುತ್ತೇನೆ; ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ಸಮನಾಗಿರುತ್ತೇನೆ. ಆ ಆದಿದೇವನಾದ ನಾರಾಯಣನನ್ನು ಸಂತತವಾಗಿ ಶರಣುಹೊಕ್ಕು ಏಕಾಂತಭಾವದಿಂದ ಯಾವಾಗಲೂ ಆತನೇಬೇಕೆಂದು ಹಾತುವರಿಯುತ್ತಿರುವೆನು. ಈ ವಿಶೇಷ ಸಾಧನಗಳಿಂದ ಅಂತಃಕರಣಶುದ್ಧಿಯನ್ನು ಪಡೆದುಕೊಂಡಿರುವ ನನಗೆ ಅನಂತನಾದ ಆ ಈಶ್ವರನು ಏಕೆ ಕಾಣಿಸದೆ ಇದ್ದಾನು?" ಆ ಬ್ರಹ್ಮಪುತ್ರನ ಮಾತನ್ನು ಕೇಳಿ, ಸನಾತನಧರ್ಮವನ್ನು ರಕ್ಷಿಸುವವನಾದ ನಾರಾಯಣನು ಆತನನ್ನು ವಿಧಿವತ್ತಾಗಿ ಪೂಜಿಸಿ 'ಒಳ್ಳೆಯದು, ಹೋಗಿ ಬಾ!' – ಎಂದನು.

ಆತನ ಅಪ್ಪಣೆಯನ್ನು ಪಡೆದುಕೊಂಡು ಬ್ರಹ್ಮಕುಮಾರನಾದ ನಾರದನು ಆ ಪುರಾಣರ್ಷಿಯಾದ ನಾರಾಯಣನನ್ನು ಅರ್ಚಿಸಿ ಉತ್ತಮ ಯೋಗಬಲದಿಂದ ಆಕಾಶಕ್ಕೆ ಹಾರಿ, ತಟ್ಟನೆ ಮೇರುಪರ್ವತವನ್ನು ಸೇರಿ ಅದೃಶ್ಯನಾದನು. ಆ ಮುನಿಯು ಒಂದು ಮಹೂರ್ತದವರೆಗೆ ಆ ಪರ್ವತದ ಕೋಡುಗಲ್ಲಿನಮೇಲೆ ಏಕಾಂತದಲ್ಲಿ ಇದ್ದನು. ವಾಯುವ್ಯದಿಕ್ಕಿನಕಡೆಗೆ ನೋಡಲಾಗಿ ಅಲ್ಲಿ ಹಿಂದೆ ಹೇಳಿದಂಥ ಒಂದು ಆಶ್ಚರ್ಯವನ್ನು ಕಂಡನು. ಕ್ಷೀರಸಾಗರದ ಉತ್ತರಕ್ಕೆ 'ಶ್ವೇತ' ವೆಂಬ ಹೆಸರಿನಿಂದ ಪ್ರಸಿದ್ಧವಾದ ವಿಸ್ತಾರವಾದ ದ್ವೀಪವುಂಟಷ್ಟೆ! ಅದು ಮೇರು ಪರ್ವತಕ್ಕೆ ಮೂವತ್ತುಸಾವಿರ ಯೋಜನದಷ್ಟು ಎತ್ತರದಲ್ಲಿದೆಯೆಂದು ಬಲ್ಲವರು ಹೇಳುತ್ತಾರೆ. ಅಲ್ಲಿ ಇಂದ್ರಿಯಗಳಿಲ್ಲದ, ನಿರಾಹಾರಿಗಳಾದ ನಿಶ್ಚಲರಾದ, ಅತ್ಯಂತ ಪರಿಮಳವಾದ ಸುಗಂಧವನ್ನು ಸುತ್ತಲೂ ಬೀರುತ್ತಿರುವ, ಸರ್ವಪಾಪರಹಿತರಾಗಿರುವ ಶುಭ್ರವರ್ಣದ ಪುರುಷರಿರುವರು. ಅವರು ಪಾಪಿಜನರ ಕಣ್ಣನ್ನು ಕುಕ್ಕುವಂತಿರುವ ತೇಜಸ್ಸಿನವರಾಗಿ, ವಜ್ರದಂತೆ ಗಟ್ಟಿಯಾಗಿರುವ ಮೂಳೆಯ ಶರೀರಗಳುಳ್ಳವರು, ಸಮಾನವಾದ ಅಗಲವೂ ಎತ್ತರವೂ ಉಳ್ಳವರು, ದಿವ್ಯವಾದ ಅವಯವಗಳುಳ್ಳವರು,

ಉತ್ತಮಬಲದಿಂದ ಕೂಡಿದವರು, ಛತ್ರಿಯಂತಿರುವ ತಲೆಗಳುಳ್ಳವರು, ಮೇಘಗಂಭೀರ ಧ್ವನಿಯುಳ್ಳವರು, ಸಮಸಮವಾಗಿರುವ ನಾಲ್ಕು ತೋಳುಗಳುಳ್ಳವರು, ನೂರಾರು ರೇಖೆಗಳಿಂದ ಶೋಭಿತವಾಗಿರುವ ಪಾದಗಳುಳ್ಳವರು. ಶುಕ್ಲವರ್ಣದ ಅರುವತ್ತು ಹಲ್ಲುಗಳೂ ಎಂಟು ಕೋರೆದಾಡೆಗಳೂ[1] ಇರುವವರಾಗಿ ಸೂರ್ಯ ಪ್ರಕಾಶನೂ ವಿಶ್ವವಕ್ತ್ರನೂ ಆದ ಕಾಲಪುರುಷನನ್ನು ಕೂಡ ನಾಲಗೆಗಳಿಂದ ಸೆಳೆದು ಚಪ್ಪರಿಸುವಂತಿರುವರು. ಯಾವನು ವಿಶ್ವೋತ್ಪತ್ತಿಗೆ ಕಾರಣನಾಗಿರುವವನೋ; ಯಾವನಿಂದ ಸರ್ವ ಲೋಕಗಳೂ ಉತ್ಪನ್ನವಾಗಿರುವವೋ; ವೇದಗಳು, ಧರ್ಮಗಳು, ಶಾಂತರಾದ ಮುನಿಗಳು, ಸಕಲದೇವತೆಗಳೂ ಉಂಟಾಗಿರುವರೋ – ಆ ಸರ್ವ ಕಾರಣನಾದ ಭಗವಂತನನ್ನು ಭಕ್ತಿಯಿಂದ ಧ್ಯಾನಮಾಡುತ್ತಿರುವರು.

ಇಂತೆಂದ ಭೀಷ್ಮರನ್ನು ಯುಧಿಷ್ಠಿರನು ಹೀಗೆಂದು ಕೇಳಿದನು: “ಆ ಶ್ವೇತದ್ವೀಪ ನಿವಾಸಿಗಳಾದ ಪುರುಷರು ಇಂದ್ರಿಯರಹಿತರು ಹೇಗಾದರು? ನಿರಾಹಾರಿಗಳಾದದ್ದೂ ನಿಶ್ಚಲರಾದದ್ದೂ ಹೇಗೆ? ಅವರಿಗೆ ಯಾವ ಉತ್ತಮಗತಿಯಾಗುವದು? ಎಲೈ ಭರತಶ್ರೇಷ್ಠನೆ, ಈ ಲೋಕದಲ್ಲಿ ಮುಕ್ತರಾದ ಜನರು ಹೇಗೆ ಇರುವರೋ, ಅವರ ಲಕ್ಷಣವೇ[2] ಈ ಶ್ವೇತದ್ವೀಪನಿವಾಸಿಗಳ ಲಕ್ಷಣವಾಗಿದೆಯಲ್ಲ! ಆದ್ದರಿಂದ ನನ್ನ ಸಂಶಯವನ್ನು ನೀನು ತೊಲಗಿಸಬೇಕು; ಏಕೆಂದರೆ ನನಗೆ ಈ ವಿಷಯದಲ್ಲಿ ಬಹಳ ಕುತೂಹಲವುಂಟಾಗಿರುತ್ತದೆ. ನೀನು ಎಲ್ಲಾ ಆಧ್ಯಾತ್ಮಿಕಕಥೆಗಳಲ್ಲಿಯೂ ಕ್ರೀಡಿಸಿರುವವನಲ್ಲವೆ? ನಿನ್ನನ್ನೇ ನಾವು ಶರಣುಹೊಂದಿರುತ್ತೇವೆ.”

ಆಗ ಭೀಷ್ಮರಿಂತೆಂದರು: “ರಾಜನೆ, ಇದೊಂದು ವಿಸ್ತಾರವಾದ ಕಥೆ; ಇದನ್ನು ನಾನು ನಮ್ಮ ತಂದೆಯ ಬಳಿಯಲ್ಲಿದ್ದು ಕೇಳಿರುತ್ತೇನೆ. ಇದರ ಸಾರವನ್ನು ನಿನಗೆ ಹೇಳುವೆನು. (ಇದನ್ನು ನಾರದಋಷಿಯು ನಮ್ಮ ತಂದೆಯು ಕೇಳಿದ್ದಕ್ಕೆ ಉತ್ತರವಾಗಿ ಹೇಳಿದ್ದನು; ಅದನ್ನು ಅಲ್ಲಿ ಹಿಂದೆ ಕೇಳಿದ್ದೆನು.) **ಉಪರಿಚರನೆಂಬ** ಭೂಪತಿಯು ಇದ್ದನು. ಅವನು ಇಂದ್ರನ ಸ್ನೇಹಿತನೆಂದೂ ನಾರಾಯಣನ ಭಕ್ತನೆಂದೂ ಪ್ರಖ್ಯಾತನಾಗಿದ್ದನು. ಅವನು ಧಾರ್ಮಿಕನು, ತಂದೆಯಲ್ಲಿ ನಿತ್ಯವೂ

---

1 ವ್ಯಾಖ್ಯಾನದಲ್ಲಿ ಈ ವಿಶೇಷಣಗಳಿಗೆ ಗೌಣಾರ್ಥಗಳನ್ನು ಕೊಟ್ಟಿದೆ.

2 ಮುಕ್ತರು, ಅನಿಂದ್ರಿಯರು, ನಿರಾಹಾರಿಗಳು, ನಿಶ್ಚಲರು–ಎಂದಿದ್ದರಿಂದ ಜ್ಞಾನಿಗಳ ದೃಷ್ಟಿಯಿಂದ ಶರೀರೇಂದ್ರಿಯ ಪ್ರಾಣಗಳು ಇಲ್ಲವೇ ಇಲ್ಲವೆಂದಂತೆ ಆಯಿತು.

ಆಲಸ್ಯವಿಲ್ಲದೆ ಭಕ್ತಿಯುಕ್ತನಾಗಿರುತ್ತಿದ್ದನು; ಆತನಿಗೆ ನಾರಾಯಣನು ಕೊಟ್ಟ ವರದಿಂದ ಸಾಮ್ರಾಜ್ಯವು ದೊರಕಿತ್ತು. ಆತನು ಹಿಂದಕ್ಕೆ ಸೂರ್ಯನ ಮುಖದಿಂದ ಬಂದಿದ್ದ ಸಾತ್ವತವಿಧಿಯನ್ನು ಅನುಸರಿಸಿ ದೇವೇಶನಾದ ನಾರಾಯಣನನ್ನು ಪೂಜಿಸುತ್ತಿದ್ದನು. ಅದರ ಶೇಷವಾಗಿ ಪಿತೃಗಳನ್ನೂ, ಪಿತೃಶೇಷವಾಗಿ ವಿಪ್ರರನ್ನೂ ಆಶ್ರಿತರನ್ನೂ ತೃಪ್ತಿಗೊಳಿಸಿ ಶೇಷಾನ್ನವನ್ನು ಭುಂಜಿಸುತ್ತಿದ್ದನು. ಅವನು ಸತ್ಯನಿಷ್ಠನು, ಸರ್ವಭೂತಗಳಲ್ಲಿಯೂ ಅಹಿಂಸೆಯಿಂದ ವರ್ತಿಸುತ್ತಿದ್ದನು. ಅವನು ದೇವದೇವನಾದ ಆದಿಮಧ್ಯಾಂತರಹಿತನೂ ಲೋಕಕರ್ತೃವೂ ಅವ್ಯಯನೂ ಆದ ಜನಾರ್ದನನಲ್ಲಿ ಸರ್ವಭಾವದಿಂದ ಭಕ್ತನಾಗಿರುತ್ತಿದ್ದನು. ನಾರಾಯಣನಲ್ಲಿ ಭಕ್ತಿಯನ್ನಿಟ್ಟುಕೊಂಡಿದ್ದ ಶತ್ರುದಮನನಾದ ಅವನಿಗೆ ದೇವೇಂದ್ರನು ತಾನೇ ಏಕಶಯ್ಯಾಸನವನ್ನಿತ್ತಿದ್ದನು.

ಆ ರಾಜನು ತನ್ನ ರಾಜ್ಯವನ್ನೂ, ಧನವನ್ನೂ, ಆಶ್ರಿತರನ್ನೂ, ವಾಹನವನ್ನೂ– ಎಲ್ಲವನ್ನೂ ಭಗವಂತನದೇ ಎಂಬ ಭಾವನೆಯಿಂದ ನೋಡುತ್ತಾ ಕಾಮ್ಯನೈಮಿತ್ತಿಕ ಯಜ್ಞಕ್ರಿಯೆಗಳೆಲ್ಲವನ್ನೂ ಸಾತ್ವತವಿಧಿಯಿಂದಲೇ ಸಮಾಹಿತಮನಸ್ಕನಾಗಿ ಆಚರಿಸುತ್ತಿದ್ದನು. ಅವನ ಮನೆಯಲ್ಲಿ **ಪಾಂಚರಾತ್ರ**ವನ್ನು ಬಲ್ಲವರಲ್ಲಿ ಮುಖ್ಯರಾದವರು ಉಪಹಾರವನ್ನಾಗಲಿ ಅಗ್ರಭೋಜನವನ್ನಾಗಲಿ ಸ್ವೀಕರಿಸುತ್ತಿದ್ದರು. ಧರ್ಮದಿಂದ ರಾಜ್ಯವನ್ನು ಆಳುತ್ತಿದ್ದ ಶತ್ರುಘ್ನನಾದ ಆ ರಾಜನಲ್ಲಿ ಅನೃತವಾಕ್ಯ ವೆಂಬುದು ಸಂಭವಿಸುತ್ತಿರಲಿಲ್ಲ. ಮನಸ್ಸು ಕಲ್ಮಷಯುಕ್ತವಾಗಿರಲಿಲ್ಲ; ಶರೀರ ಗಳಿಂದಲಂತೂ ಅವನು ಯಾವ ಪಾಪವನ್ನೂ ಮಾಡುತ್ತಿರಲಿಲ್ಲ.

**ಚಿತ್ರಶಿಖಂಡಿ**ಗಳು ಎಂದು ಪ್ರಸಿದ್ಧರಾದ ಋಷಿಗಳಿದಾರಲ್ಲ, ಅವರು ಮೇರುಮಹಾಪರ್ವತದಲ್ಲಿ ಒಗ್ಗಟ್ಟಾಗಿ ಮಾಡಿದ **ಉತ್ತಮಶಾಸ್ತ್ರವು** ನಾಲ್ಕು ವೇದಗಳಿಗೂ ಸಮಾನವಾದದ್ದು. ಆ ಏಳು ಮುಖಗಳಿಂದಲೂ ಹೊರಟದ್ದು ಅನುತ್ತಮವಾದ ಲೋಕಧರ್ಮವು. ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ,ಕ್ರತು, ಮಹಾತೇಜಸ್ವಿಯಾದ ವಸಿಷ್ಠ– ಇವರೇ ಚಿತ್ರಶಿಖಂಡಿಗಳು. ಈ ಏಳುಮಂದಿಯೂ ಪ್ರಕೃತಿಗಳಾದವರು; ಸ್ವಾಯಂಭುವನು ಎಂಟನೆಯವನು. ಇವರೇ ಲೋಕವನ್ನೆಲ್ಲ ಧಾರಣೆಮಾಡಿರುತ್ತಾರೆ. ಇವರಿಂದಲೇ ಶಾಸ್ತ್ರವು ಹೊರಟುಬಂದಿತು. ಇವರು ಏಕಾಗ್ರವಾದ ಮನಸ್ಸುಳ್ಳವರು, ದಾಂತರು, ಸಂಯಮನಿರತರಾದ ಮುನಿಗಳು,

ಭೂತವರ್ತಮಾನಭವಿಷ್ಯತ್ಕಾಲಗಳ ವೃತ್ತವನ್ನು ಬಲ್ಲವರು. ಸತ್ಯಧರ್ಮ ಪರಾಯಣರು. 'ಇದೇ ಶ್ರೇಯಸ್ಸು', 'ಇದೇ ಬ್ರಹ್ಮವು', 'ಇದು ಸರ್ವೋತ್ತಮವಾದ ಹಿತವು' – ಎಂದು ಮನಸ್ಸಿನಲ್ಲಿ ಆಲೋಚನೆಮಾಡಿ ಬಳಿಕ ಶಾಸ್ತ್ರವನ್ನು ಮಾಡಿದರು. ಅದರಲ್ಲಿ ಧರ್ಮಾರ್ಥಕಾಮಗಳೂ ಬಳಿಕ ಮೋಕ್ಷವೂ ಉಕ್ತವಾಗಿರುತ್ತದೆ. ದ್ಯುಲೋಕದಲ್ಲಿಯೂ ಭೂಲೋಕದಲ್ಲಿಯೂ ಇರುವ ವಿವಿಧವಾದ ಧರ್ಮ ಮರ್ಯಾದೆಗಳನ್ನು ಇವರು ಪ್ರತಿಪಾದಿಸಿರುತ್ತಾರೆ. ಋಷಿಗಳಿಂದೊಡಗೂಡಿ ದಿವ್ಯಸಹಸ್ರವರ್ಷಗಳವರೆಗೂ ದೇವನಾದ ಹರಿಯನ್ನು ನಾರಾಯಣಪ್ರಭುವನ್ನು ತಪಸ್ಸಿನಿಂದ ಆರಾಧನೆಮಾಡಿದಬಳಿಕ ನಾರಾಯಣನಿಂದ ಆಜ್ಞಪ್ತಳಾದ ಸರಸ್ವತೀ ದೇವಿಯು ಸರ್ವಲೋಕಗಳಿಗೂ ಹಿತವಾಗಲೆಂಬ ಇಚ್ಛೆಯಿಂದ ಆ ಋಷಿಗಳನ್ನು ಪ್ರವೇಶಿಸಿದಳು. ಬಳಿಕ ತಪಸ್ಸನ್ನು ಬಲ್ಲ ಆ ದ್ವಿಜರು ಶಬ್ದ, ಅರ್ಥ ಮತ್ತು ಹೇತು ಗಳಿಂದ ಯುಕ್ತವಾದ ಈ ವಾಣಿಯ ಪ್ರಯೋಗವನ್ನು ಮೊದಲು ಮಾಡಿದರು. ಮೊಟ್ಟಮೊದಲೇ ಓಂಕಾರಸ್ವರದ ಮಂಗಲದಿಂದ ಯುಕ್ತವಾಗಿರುವ ಆ ಶಾಸ್ತ್ರವನ್ನು ಎಲ್ಲಿ ಋಷಿಗಳು ಹೇಳಿದರೋ ಅಲ್ಲಿ ಕರುಣಾಮಯನಾದ ಭಗವಂತನು ಸಂನಿಹಿತನಾಗಿದ್ದನು.

ಆ ಬಳಿಕ ಪ್ರಸನ್ನನಾದ ಪುರುಷೋತ್ತಮಭಗವಂತನು ಅನಿರ್ದೇಶ್ಯವಾದ ಶರೀರವುಳ್ಳವನಾಗಿ ಆ ಋಷಿಗಳೆಲ್ಲರನ್ನೂ ಕುರಿತು ಇಂತೆಂದನು: "ಶತಸಹಸ್ರ ಶ್ಲೋಕಗಳ ಈ ಶಾಸ್ತ್ರವನ್ನು ಮಾಡಿದ್ದೀರಷ್ಟೆ? ಇದರಿಂದ ಲೋಕತಂತ್ರದ ಧರ್ಮವೆಲ್ಲವೂ ಪ್ರಚಲಿತವಾಗುವದು. ಪ್ರವೃತ್ತಿಗೂ ನಿವೃತ್ತಿಗೂ ಈ ಶಾಸ್ತ್ರವು ಋಗ್ವೇದ, ಯಜುರ್ವೇದ, ಸಾಮವೇದ, ಮತ್ತು ಅಥರ್ವಾಙ್ಗಿರಸಗಳಿಗೂ ಒಪ್ಪಾಗಿರುವದು. ಹೇಗೆ ನನ್ನ ಪ್ರಸಾದದಿಂದ ಹುಟ್ಟಿದ ಬ್ರಹ್ಮನು ಪ್ರಮಾಣವಾಗಿರು ವನೋ ಹೇಗೆ ನನ್ನ ಕ್ರೋಧದಿಂದ ಉತ್ಪನ್ನನಾದ ರುದ್ರನು ಪ್ರಮಾಣವಾಗಿರುವನೋ ಹಾಗೆಯೇ ಎಲೈ ವಿಪ್ರರೆ, ಪ್ರಕೃತಿಗಳಾದ ನೀವೂ ಪ್ರಮಾಣವೇ, ಸೂರ್ಯಚಂದ್ರರು, ವಾಯು, ಭೂಮಿ ಅಪ್ಪು, ತೇಜಸ್ಸು, ಸರ್ವನಕ್ಷತ್ರಗಣಗಳು, 'ಭೂತ' ಎಂಬ ಶಬ್ದದಿಂದಾದ, ವಸ್ತು– ಬ್ರಹ್ಮವಾದಿಗಳು, ತಮ್ಮ ತಮ್ಮ ಕ್ಷೇತ್ರದಲ್ಲಿ ಹೇಗೆ ಪ್ರಮಾಣವಾಗಿರುವರೋ ಹಾಗೆಯೇ ಈ ಉತ್ತಮಶಾಸ್ತ್ರವೂ ಪ್ರಮಾಣವಾಗುವದು. ಇದು ನನ್ನ ಆಜ್ಞೆ, ಸ್ವಾಯಂಭುವಮನುವು ಇದರಿಂದಲೇ ಧರ್ಮಗಳನ್ನು

ಹೇಳುವನು. ಶುಕ್ರನೂ ಬೃಹಸ್ಪತಿಯೂ ಯಾವಾಗ ಜನಿಸುವರೋ ಆಗ ನಿಮ್ಮ ಬುದ್ಧಿಯಿಂದ ಉತ್ಪನ್ನವಾದ ಈ ಶಾಸ್ತ್ರವನ್ನು ಅವರು ಪ್ರವಚನಮಾಡುವರು. ಸ್ವಾಯಂಭುವಮನು, ಶುಕ್ರಾಚಾರ್ಯ ಮತ್ತು ಬೃಹಸ್ಪತಿ- ಇವರ ಮತವು ಲೋಕಗಳಲ್ಲಿ ಪ್ರಚುರವಾಗಲು ನೀವು ಮಾಡಿರುವ ಈ ಶಾಸ್ತ್ರವನ್ನು ವಸುರಾಜನು ಬೃಹಸ್ಪತಿಯಿಂದ ಪಡೆದುಕೊಳ್ಳುವನು. ಆ ರಾಜನು ಗೌರವಿಸಲ್ಪಟ್ಟವನೂ ನನ್ನ ಭಕ್ತನೂ ಆಗಿರುವನು; ಈ ಶಾಸ್ತ್ರದಿಂದಲೇ ಸರ್ವಕ್ರಿಯೆಗಳನ್ನೂ ಮಾಡುವನು. ಈ ನೀವು ಮಾಡಿರುವ ಶಾಸ್ತ್ರವು ಶಾಸ್ತ್ರಗಳಲ್ಲೆಲ್ಲ ಉತ್ತಮವೆನಿಸುವದು. ಇದು ಅರ್ಥಕ್ಕೂ ಧರ್ಮಕ್ಕೂ ಹೊಂದಿಗೆಯಾಗಿರುವದು; ಇದೇ ಉತ್ತಮ ರಹಸ್ಯವೆನಿಸುವದು. ಇದರ ಪ್ರವರ್ತಕರಾದ ನೀವು ಪ್ರಜಾವಂತರಾಗುವಿರಿ. ಆ ವಸುರಾಜನೂ ರಾಜಶ್ರೀಯಿಂದ ಕೂಡಿ ದೊಡ್ಡವನೆನಿಸುವನು. ಆ ರಾಜನು ಮೃತನಾಗಲು ಈ ಸನಾತನಶಾಸ್ತ್ರವು ಅಂತರ್ಧಾನವಾಗುವದು. ಇಗೊ, ಇದೆಲ್ಲವನ್ನೂ ನಿಮಗೆ ತಿಳಿಸಿರುತ್ತೇನೆ."

ಇಷ್ಟನ್ನು ಹೇಳಿ ಅದೃಶ್ಯನಾದ ಪುರುಷೋತ್ತಮನು ಆ ಋಷಿಗಳನ್ನು ಕಳುಹಿಸಿಕೊಟ್ಟು ಯಾವದೋ ದಿಕ್ಕಿಗೆ ಹೊಟುಹೋದನು. ಆ ಬಳಿಕ, ಲೋಕಾರ್ಥ ಚಿಂತಕರಾದ ಆ ಋಷಿಗಳು ಧರ್ಮಕ್ಕೆಲ್ಲ ಮೂಲವಾದ ಆ ಸನಾತನ ಶಾಸ್ತ್ರವನ್ನು ಪ್ರಚಾರಗೊಳಿಸಿದರು. ಪ್ರಥಮಕಲ್ಪದ ಆರಂಭದ ಯುಗದಲ್ಲಿ ಬೃಹಸ್ಪತಿಯು ಉತ್ಪನ್ನನಾದನು. ಸಾಂಗವೇದಸಹಿತವಾದ ಉಪನಿಷತ್ತಿನೊಡನೆ ಈ ಶಾಸ್ತ್ರವನ್ನು ಬೃಹಸ್ಪತಿಯಲ್ಲಿ ನೆಲೆನಿಲ್ಲಿಸಿ ಇನ್ನೂ ತಪಸ್ಸುಮಾಡಬೇಕೆಂಬ ನಿಶ್ಚಯದಿಂದ ಸರ್ವಲೋಕಕ್ಕೂ ಆಶ್ರಯರೂ ಸರ್ವಧರ್ಮಪ್ರವರ್ತಕರೂ ಆದ ಆ ಋಷಿಗಳು ತಮ್ಮ ಇಷ್ಟ ಬಂದಕಡೆಗೆ ಹೊರಟುಹೋದರು.

* * * * *

# 3. ಉಪರಿಚರವಸುವಿನ ಯಜ್ಞ*

ಭೀಷ್ಮರು ಯುಧಿಷ್ಠಿರನನ್ನು ಕುರಿತು ಇಂತೆಂದರು: ಆ ಬಳಿಕ ಕಳೆದ ಮಹಾಕಲ್ಪದಲ್ಲಿ ಅಂಗಿರಸನ ಮಗನಾದ ದೇವಪುರೋಹಿತನಾದ ಬೃಹಸ್ಪತಿಯು ಜನಿಸಲು ದೇವತೆಗಳೆಲ್ಲರೂ ಹರ್ಷಗೊಂಡರು. ಬೃಹತ್, ಬ್ರಹ್ಮ, ಮಹತ್ ಎಂಬೀ ಶಬ್ದಗಳು ಪರ್ಯಾಯವಾಚಕಗಳು. ಎಲೈ ರಾಜನೆ, ವಿದ್ವಾಂಸನಾದ ಬೃಹಸ್ಪತಿಯು ಈ ಗುಣಗಳಿಂದ ಕೂಡಿದವನು. ಅವನಿಗೆ **ಉಪರಿಚರವಸು** ವೆಂಬ ರಾಜಶ್ರೇಷ್ಠನು ಶಿಷ್ಯನಾದನು. ಆಗ ಅವನು ಚಿತ್ರಶಿಖಂಡಿಗಳಿಂದ ವಿರಚಿತವಾಗಿದ್ದ (ಪಾಂಚರಾತ್ರ) ಶಾಸ್ತ್ರವನ್ನು ಆ ಬೃಹಸ್ಪತಿಯಿಂದ ಕಲಿತುಕೊಂಡನು.

ಆ ವಸುರಾಜನು ಮೊದಲು ದೈವವಿಧಿಯಿಂದ ಭಾವಿತನಾಗಿ ಇಂದ್ರನು ಸ್ವರ್ಗವನ್ನು ಆಳುವಂತೆ ಪೃಥ್ವಿಯನ್ನು ಪರಿಪಾಲಿಸುತ್ತಿದ್ದನು. ಆ ಮಹಾತ್ಮನಾದ ರಾಜನು ಒಂದು ಅಶ್ವಮೇಧಯಜ್ಞವನ್ನು ಆರಂಭಿಸಿದನು. ಅದರಲ್ಲಿ ಉಪಾಧ್ಯಾಯನಾದ ಬೃಹಸ್ಪತಿಯೇ ಹೋತೃವಾದನು. ಪ್ರಜಾಪತಿಯ ಮಕ್ಕಳಾದ ಏಕತ, ದ್ವಿತ, ಮತ್ತು ತ್ರಿತ– ಎಂಬ ಮಹರ್ಷಿಗಳು ಅದರಲ್ಲಿ ಸದಸ್ಯರಾಗಿದ್ದರು. ಇವರಲ್ಲದೆ ಧನುಷನೆಂಬಾತನು, ರೈಭ್ಯ, ಅರ್ತಿವಸು, ಪರಾವಸು, ಮೇಧಾತಿಥಿ ಎಂಬ ಋಷಿ, ತಾಂಡ್ಯಮಹರ್ಷಿ, ಮಹಾಭಾಗನಾದ ಶಾಂತಿ, ವೇದಶಿರಸ್ಸು, ಶಾಲಿಹೋತ್ರನ ತಂದೆಯಾದ ಋಷಿಶ್ರೇಷ್ಠನಾದ ಕಪಿಲ, ಆದ್ಯಕಟ, ವೈಶಂಪಾಯನನ ಅಣ್ಣನಾದ ತೈತ್ತಿರಿ, ಕಣ್ವ ಮತ್ತು ದೈವಹೋತ್ರ – ಒಟ್ಟು ಹೀಗೆ ಹದಿನಾರು ಸದಸ್ಯರಾಗಿದ್ದರು.

ರಾಜನೆ, ಆ ಮಹಾಯಜ್ಞಕ್ಕೆ ಬೇಕಾದ ಸರ್ವಸಂಭಾರಗಳೂ ಸಿದ್ಧವಾದವು. ಅದರಲ್ಲಿ ಪಶುವಧೆಯಾಗಲಿಲ್ಲ. ರಾಜನು ಈ ರೀತಿಯಲ್ಲಿ ಭಾವಿತನಾಗಿದ್ದನು: ಆತನು ಹಿಂಸಕನಲ್ಲ; ಶುಚಿ, ಉದಾರಭಾವದವನು, ನಿಷ್ಕಾಮನು, ಸತ್ಕರ್ಮನಿರತನೆಂದು ಪ್ರಖ್ಯಾತನಾದವನು. ಅರಣ್ಯಪ್ರದೇಶಗಳಲ್ಲಿ ಹುಟ್ಟಿದ ಫಲಾದಿಗಳು ಅಲ್ಲಿ ದೇವತೆಗಳಿಗೆ ಭಾಗವಾಗಿ ಏರ್ಪಾಡಾಗಿದ್ದವು. ದೇವದೇವನೂ ಪುರಾಣ ಪುರುಷನೂ ಆದ ಭಗವಂತನು ಯಜ್ಞದಿಂದ ಸುಪ್ರೀತನಾಗಿ ಮತ್ತೊಬ್ಬರಿಗೆ

---

* ಸಂಪುಟ 36; ಸಂಚಿಕೆ 3; ನವೆಂಬರ್ 1966

ಕಾಣಿಸಿಕೊಳ್ಳದೆ ಆತನಿಗೆ ಕಾಣಿಸಿಕೊಂಡನು. ಯಾರಿಗೂ ಕಾಣಿಸಿಕೊಳ್ಳದೆ ತಾನೇ ಭಾಗವನ್ನು ಆಘ್ರಾಣಿಸಿ ಪುರೋಡಾಶವನ್ನು ಪರಿಗ್ರಹಿಸಿ, ಸ್ವೀಕರಿಸಿದನು.

ಇದರಿಂದ ಕ್ರುದ್ಧನಾದ ಬೃಹಸ್ಪತಿಯು ವೇಗದಿಂದ ಸ್ರುಕ್ಕನ್ನು ಎತ್ತಿ ಆಕಾಶವನ್ನು ಅದರಿಂದ ಹೊಡೆಯುತ್ತಾ ರೋಷದಿಂದ ಕಣ್ಣೀರುಸುರಿಸಿದನು. ಉಪರಿಚರವಸುವನ್ನು ಕುರಿತು 'ಇಗೋ ಈ ಭಾಗವನ್ನು ಎತ್ತಿರುತ್ತೇನೆ; ಆ ದೇವನೇ ನನಗೆ ಕಾಣಿಸುವಂತೆ ಇದನ್ನು ಗ್ರಹಿಸತಕ್ಕದು ಯುಕ್ತವು' ಎಂದನು.

ಇಂತೆಂದ ಭೀಷ್ಮರ ವಚನವನ್ನು ಕೇಳಿದ ಯುಧಿಷ್ಠಿರನು ಹೀಗೆಂದು ಕೇಳಿದನು: 'ಎಲೈ ಭೀಷ್ಮಾಚಾರ್ಯನೆ, ಅಲ್ಲಿ ಮೇಲಕ್ಕೆತ್ತಿದ ಯಜ್ಞಭಾಗಗಳನ್ನು ಸಾಕ್ಷಾತ್ತಾಗಿ ದೇವತೆಗಳೇ ಬಂದು ಸ್ವೀಕರಿಸಿದರು; ಆದರೆ ಆ ವಿಭುವಾದ ಹರಿಯು ಏತಕ್ಕೆ ಬರಲಿಲ್ಲ?'

ಇದಕ್ಕೆ ಭೀಷ್ಮರು ಹೇಳಿದರೇನೆಂದರೆ : ಬಳಿಕ ರೋಷಪೂರಿತನಾದ ಆ ಬೃಹಸ್ಪತಿಯನ್ನು ಮಹಾಭೂಪಾಲನಾದ ವಸುವೂ ಅಲ್ಲಿದ್ದ ಸದಸ್ಯರೂ ಎಲ್ಲರೂ ಸೇರಿ ಸಮಾಧಾನಗೊಳಿಸಿದರು. ಶಾಂತರಾಗಿ ಆತನನ್ನು ಕುರಿತು 'ರೋಷವನ್ನು ಮಾಡದಿರು. ಇದು ಕ್ರತುಯುಗವು; ನೀನು ರೋಷವನ್ನು ಮಾಡಿದ್ದು ಈ ಯುಗಕ್ಕೆ ತಕ್ಕದ್ದಲ್ಲ. ಯಾವ ದೇವನಿಗಾಗಿ ಭಾಗವನ್ನು ಎತ್ತಿರುತ್ತಿಯೋ ಆತನು ಅರೋಷನು. ಎಲೈ ಬೃಹಸ್ಪತಿಯೆ, ಆತನನ್ನು ನೋಡುವದು ನಿನ್ನಿಂದಲಾಗಲಿ ನಮ್ಮಿಂದಲಾಗಲಿ ಶಕ್ಯವಲ್ಲ; ಆತನು ಯಾವನಲ್ಲಿ ಪ್ರಸನ್ನನಾಗುವನೋ ಅವನೇ ಆತನನ್ನು ಕಂಡಾನು' ಎಂದರು. ಆ ಬಳಿಕ ಚಿತ್ರಶಿಖಂಡಿಗಳಾದ ಏಕತ, ದ್ವಿತ, ತ್ರಿತ- ಇವರು "ನಾವು ಬ್ರಹ್ಮನ ಮಾನಸಪುತ್ರರೆನಿಸಿಕೊಂಡವರು. ಒಮ್ಮೆ ನಾವು ಮೋಕ್ಷಾರ್ಥಿಗಳಾಗಿ ಉತ್ತರದಿಕ್ಕಿಗೆ ಹೋದೆವು. ಅಲ್ಲಿ ಸಾವಿರವರ್ಷಗಳವರೆಗೆ ಉತ್ತಮವಾದ ತಪಸ್ಸನ್ನು ಮಾಡಿ ಒಂದೇ ಕಾಲಿನಮೇಲೆ ಕಾಷ್ಠಭೂತರಾಗಿ ಸಮಾಧಾನ ಚಿತ್ತದಿಂದ ಇದ್ದೆವು. ಮೇರುವಿನ ಉತ್ತರಭಾಗದಲ್ಲಿ ಕ್ಷೀರಸಮುದ್ರದ ತೀರದಲ್ಲಿದೆ, ನಾವು ತಪಸ್ಸುಮಾಡಿದ ಆ ಪ್ರದೇಶ. ನಾರಾಯಣಾತ್ಮಕನಾದ ಆ ದೇವನನ್ನು, ವರಣೀಯನೂ ವರಪ್ರದನೂ ಆದ ಆ ಸನಾತನದೇವದೇವನನ್ನು, ಹೇಗೆ ಕಂಡೇವು? ಆ ನಾರಾಯಣದೇವನನ್ನು ಹೇಗೆ ಕಂಡೇವೊ!" ಎಂದು ಕೊಂಡಿದ್ದೆವು. ವ್ರತವು ಮುಗಿಯುವವೇಳೆಗೆ ಅಶರೀರವಾಣಿಯು ಸ್ನೇಹಯುಕ್ತವಾದ

ಗಂಭೀರವಾದ ಸ್ವರದಿಂದ ಹರ್ಷವನ್ನುಂಟುಮಾಡುವದಾಗಿ ಇಂತೆಂದಿತು: "ಎಲೈ ವಿಪ್ರರೆ, ನೀವು ಪ್ರಸನ್ನಹೃದಯರಾಗಿ ಉತ್ತಮತಪಸ್ಸನ್ನು ಮಾಡಿರುವಿರಿ. ನೀವು ಜಿಜ್ಞಾಸುಗಳಾದ ಭಕ್ತರು. ಆ ವಿಭುವನ್ನು ಹೇಗೆ ಕಂಡೀರಿ? ಕ್ಷೀರಸಾಗರದ ಉತ್ತರದಲ್ಲಿ ಮಹಾಕಾಂತಿಯುಕ್ತವಾದ ಶ್ವೇತದ್ವೀಪವಿದೆ. ಅಲ್ಲಿ ನಾರಾಯಣ ಪರರಾಗಿರುವ ಚಂದ್ರಸಮಾನ ಪ್ರಕಾಶವುಳ್ಳ ಮಾನವರಿರುವರು. ಅವರು ಏಕಾಂತಭಾವದಿಂದೊಡಗೂಡಿ ನಾರಾಯಣನಲ್ಲಿ ಭಕ್ತರಾಗಿರುತ್ತಾರೆ. ನಿರಿಂದ್ರಿಯರೂ ನಿರಾಹಾರರೂ ನಿಷ್ಕ್ರಿಯರೂ ಸುಗಂಧಯುಕ್ತರೂ ಆಗಿರುವವರು ಸನಾತನದೇವನನ್ನು ಪ್ರವೇಶಿಸುವರು. ಶ್ವೇತದ್ವೀಪನಿವಾಸಿಗಳಾದ ಆ ಪುರುಷರು ಏಕಾಂತಿಗಳು, ಎಲೈ ಮುನಿಗಳಿರ, ನೀವೂ ಅಲ್ಲಿಗೆ ಹೋಗಿರಿ, ಅಲ್ಲಿ ನನ್ನ ಆತ್ಮವು ಪ್ರಕಾಶಿತವಾಗಿರುತ್ತದೆ". ಆಮೇಲೆ ನಾವು ಅಶರೀರವಾಣಿಯನ್ನು ಕೇಳಿ ಅದು ಹೇಳಿದ ಮಾರ್ಗದಿಂದ ಆ ಪ್ರದೇಶಕ್ಕೆ ಹೋದೆವು. ಆತನನ್ನೇ ಚಿತ್ತದಲ್ಲಿಟ್ಟುಕೊಂಡು ಆತನನ್ನು ನೋಡಬೇಕೆಂದು ಶ್ವೇತಮಹಾದ್ವೀಪವನ್ನು ಸೇರಿದೆವು. ಅಲ್ಲಿ ನಮ್ಮ ದೃಕ್ಶಕ್ತಿಯು ಪ್ರತಿಹತವಾಯಿತು. ಆತನ ತೇಜಸ್ಸಿನಿಂದ ದೃಕ್ಶಕ್ತಿಯು ಪ್ರತಿಹತವಾಗಿದ್ದರಿಂದ ಆತನನ್ನು ನೋಡುವದು ಆಗಲಿಲ್ಲ. ಇಷ್ಟರಲ್ಲಿ 'ತಪಸ್ಸನ್ನು ಮಾಡದವನಿಗೆ ಆತನನ್ನು ಸರಿಯಾಗಿ ಕಾಣುವದು ಶಕ್ಯವಲ್ಲ' ಎಂಬ ಬುದ್ಧಿಯು ದೈವಯೋಗ ದಿಂದ ಹೊಳೆಯಿತು. ಆಗ ಮತ್ತೆ ನೂರು ವರ್ಷಗಳವರೆಗೆ ಮಹಾತಪಸ್ಸನ್ನು ಮಾಡಿದಮೇಲೆ ವ್ರತದ ಸಮಾಪ್ತಿವೇಳೆಯಲ್ಲಿ ಶುಭಲಕ್ಷಣ ಸಂಪನ್ನರಾದ ಪುರುಷರನ್ನು ಕಂಡೆವು. ಅವರು ಬಿಳಿಯ ಬಣ್ಣದವರು, ಚಂದ್ರನಂತೆ ಹೊಳೆಯುತ್ತಿದ್ದರು, ಸರ್ವಲಕ್ಷಣಗಳಿಂದಲೂ ಕೂಡಿದ್ದರು. ನಿತ್ಯವೂ ಬದ್ಧಾಂಜಲಿ ಯಿಂದ ಈಶಾನ್ಯಮುಖರಾಗಿ ಮಂತ್ರಜಪವನ್ನು ಮಾಡುತ್ತಿದ್ದರು. ಆ ಮಹಾತ್ಮರು ಜಪಿಸುತ್ತಿದ್ದದ್ದು 'ಮಾನಸ'ವೆಂಬ ಜಪವು; ಏಕಾಗ್ರಮನಸ್ಸಿನಿಂದ ಮಾಡುತ್ತಿದ್ದ ಆ ಜಪಕ್ಕೆ ಹರಿಯು ಪ್ರೀತನಾಗುತ್ತಾನೆ. ಯುಗಕ್ಷಯದಕಾಲದಲ್ಲಿ ಸೂರ್ಯನ ಕಾಂತಿ ಹೇಗಿತ್ತೋ ಹಾಗೆಯೇ ಅಲ್ಲಿದ್ದ ಪ್ರತಿಯೊಬ್ಬನಿಗೂ ತೇಜಸ್ಸಿತ್ತು. ಆ ದ್ವೀಪವು ತೇಜೋನಿವಾಸವೇ ಎಂದುಕೊಂಡೆವು. ಅಲ್ಲಿ ಯಾರೊಬ್ಬರೂ ಹೆಚ್ಚಿರಲಿಲ್ಲ; ಎಲ್ಲರೂ ಸಮಾನತೇಜಸ್ಸಿನವರಾಗಿದ್ದರು. ಬೃಹಸ್ಪತಿಯೇ, ಆ ಬಳಿಕ ಒಂದೇ ಕಾಲಕ್ಕೆ ಸಾವಿರಸೂರ್ಯರು ಉದಯಿಸಿದಂಥ ತೇಜಸ್ಸನ್ನು ಕಂಡೆವು. ಆಗ ಅಲ್ಲಿದ್ದ ಮಾನವರು ಒಟ್ಟುಸೇರಿ ಬದ್ಧಾಂಜಲಿಗಳಾಗಿ ಹರ್ಷದಿಂದ **'ನಮಃ'** ಎಂದೇ

ಹೇಳುತ್ತಾ ಆ ಕಡೆಗೆ ಓಡಿದರು. ಆಗ ಅವರು ಮಾತನಾಡಿದ ದೊಡ್ಡ ಧ್ವನಿಯು ಕೇಳಿಸಿತು. ಆ ಜನರು ಆ ದೇವನಿಗೆ ಪೂಜಾದ್ರವ್ಯವನ್ನು ಅರ್ಪಿಸುತ್ತಿದ್ದರು. ನಮಗೆ ಆ ತೇಜಸ್ಸಿನಿಂದ ಚಿತ್ತವು ಎಲ್ಲಿಯೋ ಹೋಯಿತು. ಚಕ್ಷುರಿಂದ್ರಿಯದ ಬಲವೇ ಹೋದವರಾಗಿದ್ದ ನಮಗೆ ಏನೂ ಕಾಣಲಿಲ್ಲ. ಒಂದು ಶಬ್ದವು ಮಾತ್ರ ಗಟ್ಟಿಯಾಗಿ ಹೇಳಿದಂತೆ ನಮಗೆ ಕೇಳಬಂತು; **"ಜಿತಂ ತೇ ಪುಣ್ಡರೀಕಾಕ್ಷ ನಮಸ್ತೇ ವಿಶ್ವಭಾವನ। ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ॥"** ಪುಂಡರೀಕಾಕ್ಷನೆ! ನಿನಗೆ ಜಯವಾಗಲಿ! ವಿಶ್ವಭಾವನನೆ, ನಿನಗೆ ನಮಸ್ಕಾರ! ಮಹಾಪುರುಷರಿಗೂ ಪೂರ್ವಜನಾದ ಹೃಷೀಕೇಶನೆ, ನಿನಗೆ ನಮಸ್ಕಾರವಿರಲಿ! ಎಂಬೀ ಶಬ್ದವು ಉತ್ಕೃಷ್ಟವಾಗಿ ಉಚ್ಚರಿಸಿದ ಧ್ವನಿಯಿಂದ ಕೂಡಿ ನಮಗೆ ಕೇಳಬಂತು. ಈ ನಡುವೆ ಸರ್ವಗಂಧಗಳನ್ನೂ ಬೀಸಿಕೊಂಡು ವಾಯುವು ಶುಚಿಯಾದ ದಿವ್ಯಪುಷ್ಪಗಳನ್ನೂ ಕರ್ಮೋಪಯೋಗಿಗಳಾದ ಗಿಡಮೂಲಿಕೆಗಳನ್ನೂ ತಂದಿತು. ಪಂಚಕಾಲಜ್ಞರಾದ ಆ ಏಕಾಂತಿಮಾನವರು ಅವುಗಳಿಂದ ಆ ಹರಿಯನ್ನು ಪೂಜಿಸಿದರು. ಅವರು ಹಾಗೆ ಸ್ತುತಿಸಿದ್ದರಿಂದ ಅಲ್ಲಿಗೆ ದೇವನು ಬಂದಿರಬೇಕು; ಆದರೆ ಆತನ ಮಾಯೆಯಿಂದ ಮೋಹಿತರಾದ ನಮಗಂತೂ ಆತನು ಕಾಣಿಸಲಿಲ್ಲ. ಬೃಹಸ್ಪತಿಯೆ, ಗಾಳಿಯು ನಿಂತಮೇಲೆ ಪೂಜೆಯು ಮುಗಿದಮೇಲೆ ನಾವು ಚಿಂತೆಯಿಂದ ವ್ಯಾಕುಲಿತವಾದ ಚಿತ್ತದವರಾದೆವು. ಶುದ್ಧಜನ್ಮರಾಗಿದ್ದ ಸಹಸ್ರಗಟ್ಟಲೆಯ ಆ ಪುರುಷರಲ್ಲಿ ಒಬ್ಬನೂ ಮನಸ್ಸಿನಿಂದಲಾಗಲಿ, ಕಣ್ಣಿಂದಲಾಗಲಿ ನಮ್ಮತ್ತ ತಿರುಗಿ ಸನ್ಮಾನಿಸಲಿಲ್ಲ. ಅವರು ಸ್ವಸ್ಥರಾದ ಮುನಿಗಣಗಳು; ಏಕಭಾವವನ್ನೇ ಅನುಸರಿಸಿಕೊಂಡಿದ್ದರು. ಅವರು ಬ್ರಹ್ಮಭಾವದಲ್ಲಿದ್ದರಾದ್ದರಿಂದ ನಮ್ಮಲ್ಲಿ ಮನಸ್ಸನ್ನೇ ಇಡಲಿಲ್ಲ. ಬಳಿಕ ಅತ್ಯಂತ ಪರಿಶ್ರಾಂತರಾಗಿ ತಪಸ್ಸಿನಿಂದ ಅತಿಕೃಶರಾಗಿದ್ದ ನಮ್ಮನ್ನು ಕುರಿತು ಅಶರೀರಸತ್ತ್ವವೊಂದು ಹೀಗೆಂದಿತು. ದೇವನೆಂದದ್ದೇನೆಂದರೆ:

"ಯಾವ ಇಂದ್ರಿಯಗಳೂ ಇಲ್ಲದ ಈ ಶ್ವೇತಪುರುಷರನ್ನು ಕಂಡಿರಷ್ಟೆ? ಈ ದ್ವಿಜೋತ್ತಮರನ್ನು ಕಂಡರೆ ದೇವೇಶವನ್ನು ಕಂಡಂತೆ; ಮುನಿಗಳಿರ, ಎಲ್ಲರೂ ಈ ಸ್ಥಲವನ್ನು ಬಿಟ್ಟು ಬೇಗನೆ ನೀವು ಬಂದ ದಾರಿಯಿಂದ ಹಿಂತಿರುಗಿರಿ. ಅಭಕ್ತನಾದವನಿಗೆ ಆ ದೇವನನ್ನು ಕಾಣುವದು ಹೇಗೂ ಶಕ್ಯವಲ್ಲ. ದೀರ್ಘಕಾಲವು ಕಳೆದಬಳಿಕ ಆ ತೇಜಃಪುಂಜನಾಗಿ ದುರ್ದರ್ಶನಾಗಿರುವ ಆ ದೇವನನ್ನು

ಕಾಣಲೂಬಹುದು. ಎಲೈ ದ್ವಿಜಶ್ರೇಷ್ಠರೆ, ನೀವು ಒಂದು ಮಹಾಕಾರ್ಯವನ್ನು ಮಾಡತಕ್ಕದ್ದಿದೆ. ಈ ಕೃತಯುಗವು ಕಳೆದಬಳಿಕ ಧರ್ಮವೂ ವಿಪರ್ಯಾಸವಾಗಲು ದೇವತೆಗಳ ಕಾರ್ಯಸಿದ್ಧಿಗಾಗಿ ನೀವು ಸಹಾಯಕರಾಗುವಿರಿ." ಆ ಬಳಿಕ ಆ ಅಮೃತತುಲ್ಯವಾದ ಅದ್ಭುತವಾಕ್ಯವನ್ನು ಕೇಳಿ ಆತನ ಪ್ರಸಾದದಿಂದ ಇಷ್ಟಪ್ರದೇಶಕ್ಕೆ ಬಂದು ಸೇರಿದೆವು. ಬೃಹಸ್ಪತಿಯೆ, ಹೀಗೆ ಮಹಾತಪಸ್ಸಿನಿಂದಲೂ ಹವ್ಯಕವ್ಯಗಳಿಂದಲೂ ಕೂಡಿದ ನಮಗೂ ಆ ದೇವನು ಕಾಣಿಸಲಿಲ್ಲ. ಆತನನ್ನು ನೀನು ಹೇಗೆ ಕಂಡೀಯೆ? ನಾರಾಯಣನು ಮಹಾದೇವತೆಯಾಗಿರುತ್ತಾನೆ. ಆತನು ವಿಶ್ವವನ್ನು ಸೃಷ್ಟಿಸುವಾತನು, ಹವ್ಯಕವ್ಯಗಳ ಭೋಕ್ತನು, ಅನಾದ್ಯನಂತನು, ಅವ್ಯಕ್ತನು, ದೇವದಾನವರಿಂದ ಪೂಜಿತನಾಗುವವನು!

ಹೀಗೆ ಹೇಳಿದ ಏಕತನ ವಾಕ್ಯದಿಂದಲೂ ದ್ವಿತತ್ರಿತರ ವಚನದಿಂದಲೂ ಸದಸ್ಯರಿಂದಲೂ ಸಮಾಧಾನವನ್ನು ಹೊಂದಿದ ಉದಾರಬುದ್ಧಿಯುಳ್ಳ ಬೃಹಸ್ಪತಿಯು ಯಜ್ಞವನ್ನು ಸಮಾಪ್ತಿಗೊಳಿಸಿ ದೇವನನ್ನು ಪೂಜಿಸಿದನು. ಯಜ್ಞವನ್ನು ಸಮಾಪ್ತಿಗೊಳಿಸಿದ ರಾಜನಾದ ವಸುವೂ ಪ್ರಜೆಗಳನ್ನು ಪಾಲಿಸುತ್ತಿದ್ದನು. ಬ್ರಾಹ್ಮಣರಶಾಪದಿಂದ ಸ್ವರ್ಗದಿಂದ ಜಗುಳಿಬಿದ್ದು ಅವನು ಭೂಮಿಯನ್ನು ಹೊಕ್ಕನು. ಎಲೈ ರಾಜಶಾರ್ದೂಲನೆ, ಸತ್ಯಧರ್ಮಪರಾಯಣನಾದ ಆ ರಾಜನು ಭೂಮಿಯೊಳಗೆ ಹೊಕ್ಕ ಮೇಲೂ ಯಾವಾಗಲೂ ಧರ್ಮವತ್ಸಲನಾಗಿ ನಾರಾಯಣತತ್ಪರನಾಗಿ ನಾರಾಯಣ ನಾಮವನ್ನೇ ಜಪಿಸುತ್ತಾ ಇದ್ದು ಆತನ ಪ್ರಸಾದದಿಂದಲೇ ಮತ್ತೆ ಮೇಲಕ್ಕೆದ್ದನು. ಭೂತಲದಿಂದ ಬ್ರಹ್ಮನ ಸ್ಥಾನವನ್ನು ಹೊಂದಿ ಮುಖ್ಯವಾದ ನೈಷ್ಠಿಕವಾದ ಪರಗತಿಯನ್ನೇ ಪಡೆದುಕೊಂಡನು.

* * * * *

## 4. ಉಪರಿಚರವಸುವಿಗೆ ಅಧೋಗತಿ, ಪುನರುತ್ಥಾನ*

ಆಗ ಯುಧಿಷ್ಠಿರನಿಂತೆಂದನು: "ಎಲೈ ಪಿತಾಮಹನೆ, ಉಪರಿಚರವಸುವು ನಿರತಿಶಯಭಾಗವತೋತ್ತಮನಾಗಿದ್ದುಕೊಂಡೂ ಯಾವ ಕಾರಣದಿಂದ ಭೂಮಿಯಲ್ಲಿ ಬಿಲವನ್ನು ಹೊಗಸೇರಬೇಕಾಯಿತು? ಅದನ್ನು ಹೇಳು!

ಇಂತೆಂದ ಯುಧಿಷ್ಠಿರನನ್ನು ಕುರಿತು ಭೀಷ್ಮರು ನುಡಿದರೇನೆಂದರೆ: "ಈ ವಿಷಯದಲ್ಲಿಯೂ ಈ ಹಿಂದೆ ನಡೆದ ಇತಿಹಾಸವನ್ನು ಬಲ್ಲವರು ಹೇಳುತ್ತಿರುವರು. ಋಷಿಗಳಿಗೂ ದೇವತೆಗಳಿಗೂ ನಡೆದ ಸಂವಾದವದು. ದೇವತೆಗಳು ಅಜವನ್ನು ಯಾಗದಲ್ಲಿ ಉಪಯೋಗಿಸಬೇಕು- ಎಂದು ಋಷಿಗಳಿಗೆ ಹೇಳುತ್ತಿದ್ದರು; ಅಲ್ಲಿ ಅಜವೆಂದರೆ ಮೇಕೆಯೆಂದೇ ಅರ್ಥವೇ ಹೊರತು ಮತ್ತೊಂದು ಪಶುವಲ್ಲ- ಎಂಬುದು ಅವರ ಅಭಿಪ್ರಾಯ. ಅದಕ್ಕೆ ಋಷಿಗಳು ಹೇಳಿದ್ದೇನೆಂದರೆ: "ಬೀಜಗಳನ್ನೇ ಯಾಗಕ್ಕೆ ಬಳಸಬೇಕು ಎಂದು ವೈದಿಕಶ್ರುತಿಯು ಹೇಳುತ್ತಿರುವದು. ಅಜ ಎಂದರೆ ಬೀಜಗಳೇ; ಆದ್ದರಿಂದ ಮೇಕೆಯನ್ನು ನೀವು ಕೊಲ್ಲಬೇಡಿರಿ!"

ಹೀಗೆಂದು ಕಥೆಯನ್ನಾರಂಬಿಸಿದ ಭೀಷ್ಮರು ಅದನ್ನು ಮುಂದುವರಿಸಿದರು. "ಹೀಗೆ ಋಷಿಗಳು ದೇವತೆಗಳೊಡನೆ ಸಂವಾದಮಾಡುತ್ತಿರುವಲ್ಲಿ, ಸಂಚಾರಕ್ರಮ ದಿಂದ ನೃಪಶ್ರೇಷ್ಠನಾದ ವಸುವು ಆ ಪ್ರದೇಶಕ್ಕೆ ಬಂದನು. ಆತನು ಅಂತರಿಕ್ಷದಲ್ಲಿಯೇ ಸೇನೆ, ವಾಹನ- ಈ ಎಲ್ಲದರೊಡನೆ ಬರುತ್ತಿದ್ದನು. ಹೀಗೆ ಅಕಸ್ಮಾತ್ತಾಗಿ ಅಂತರಿಕ್ಷದಲ್ಲಿ ಬರುತ್ತಿದ್ದ ವಸುವನ್ನು ಕಂಡು ಋಷಿಗಳು ಇಂತೆಂದರು: 'ಈತನು ನಮ್ಮ ಸಂಶಯವನ್ನು ಬಗೆಹರಿಸಬಹುದು. ಏಕೆಂದರೆ ಇವನು ಯಜನಶೀಲನು, ದಾನವನ್ನು ಮಾಡುತ್ತಿರುವವರಲ್ಲಿ ಶ್ರೇಷ್ಠನು, ಸರ್ವಭೂತಗಳಿಗೂ ಹಿತವನ್ನೇ ಮಾಡುವದರಲ್ಲಿ ಇವನಿಗೆ ಪ್ರೀತಿಯುಂಟು.' ಈ ಮಾತಿಗೆ ಆ ದೇವತೆಗಳೂ ಋಷಿಗಳೂ ಇಬ್ಬರೂ ಒಪ್ಪಿ ವಸುರಾಜನ ಬಳಿಗೆ ಬಂದು 'ಎಲೈ ರಾಜನೆ, ನೀನು ನಮ್ಮ ಸಂಶಯವನ್ನು ಪರಿಹರಿಸು. ಮೇಕೆಯನ್ನು ಯಾಗದಲ್ಲಿ ಉಪಯೋಗಿಸಬೇಕೊ, ಬೀಜಗಳನ್ನು ಬಳಸಬೇಕೊ? ನೀನೇ ನಮಗೆ ಪ್ರಮಾಣಭೂತನಾಗಿರುವೆಯೆಂದು ನಾವಿಬ್ಬರೂ ತಿಳಿದುಕೊಂಡಿರುತ್ತೇವೆ."

---

* ಸಂಪುಟ 36; ಸಂಚಿಕೆ 6; ಫೆಬ್ರವರಿ 1967

ಆಗ, ಆ ವಸುವು 'ಎಲೈ ಬ್ರಾಹ್ಮಣೋತ್ತಮರೆ, ನಿಮ್ಮಲ್ಲಿ ಯಾರುಯಾರಿಗೆ ಯಾವಯಾವ ಅಭಿಪ್ರಾಯವೋ ಅದನ್ನು ಮೊದಲು ಹೇಳಿರಿ!, ಎಂದನು. ಋಷಿಗಳು 'ಎಲೈ ನರಾಧಿಪತಿಯೆ, ಧಾನ್ಯಗಳಿಂದಲೇ ಯಾಗವನ್ನು ಮಾಡ ಬೇಕೆಂಬುದು ನಮ್ಮ ಪಕ್ಷವು; ದೇವತೆಗಳಿಗಾದರೋ ಪಶುವನ್ನೇ ಯಾಗಮಾಡ ಬೇಕೆಂಬ ಪಕ್ಷವಿರುವದು. ಈಗ ನಿನ್ನ ಮತವನ್ನು ಹೇಳು' ಎಂದರು.

ಭೀಷ್ಮರು ಹೇಳುತ್ತಿದಾರೆ: "ಎಲೈ ರಾಜನೆ, ಇದು ದೇವತೆಗಳ ಮತವೆಂದು ಅರಿತುಕೊಂಡಬಳಿಕ ವಸುವು ಅವರ ಪಕ್ಷವನ್ನೇ ಆಶ್ರಯಿಸಿ 'ಮೇಕೆಯನ್ನೇ ಯಾಗಕ್ಕೆ ಬಳಸಬೇಕು'ಎಂದಿಂತು ಹೇಳಿದನು. ಆ ಸೂರ್ಯವರ್ಚಸ್ಸಿನ ಮುನಿಗಳೆಲ್ಲರೂ ಅದರಿಂದ ಕುಪಿತರಾಗಿ ದೇವತೆಗಳ ಪಕ್ಷವಾದದ್ದನ್ನೇ ಹೇಳುತ್ತಿದ್ದ ವಸುವನ್ನು ಕುರಿತು 'ದೇವತೆಗಳ ಪಕ್ಷವನ್ನೇ ಹಿಡಿದೆಯಷ್ಟೆ? ಈ ಕಾರಣದಿಂದ ನೀನು ಅಂತರಿಕ್ಷದಿಂದ ಕೆಳಕ್ಕೆ ಬೀಳು! ರಾಜನೆ, ಇಂದಿನಿಂದ ನಿನಗೆ ಆಕಾಶದಲ್ಲಿ ಓಡಾಡುವ ಶಕ್ತಿಯು ನಮ್ಮ ಶಾಪದ ಹೊಡೆತದಿಂದ ಇಲ್ಲವಾಗುವದು. ಭೂಮಿಯನ್ನು ಸೀಳಿಕೊಂಡು ಅದರೊಳಗೆ ನೀನು ಹೋಗುವೆ! ಎಲೈ ನೃಪನೆ, ನಾವು ವೇದಸೂತ್ರಗಳಿಗೆ ವಿರುದ್ಧವಾಗಿ ಆಡಿದ್ದರೆ ವಿರುದ್ಧವಚನವನ್ನಾಡಿದ ನಾವೇ ಹಾಗೆ ಬೀಳುವಂತಾಗಲಿ!' ಧರ್ಮರಾಜನೆ, ಆಗ ಆ ಮುಹೂರ್ತದಲ್ಲಿಯೇ ಉಪರಿಚರವಸುರಾಜನು ಕೆಳಕ್ಕೆ ಬಿದ್ದು ನೆಲದ ಬಿಲವನ್ನು ಹೊಕ್ಕನು. ನಾರಾಯಣನ ಅಪ್ಪಣೆಯಿಂದ ಅವನಿಗೆ ಸ್ಮೃತಿಶಕ್ತಿಯು ಮಾತ್ರ ತಪ್ಪಲಿಲ್ಲ.

ದೇವತೆಗಳೆಲ್ಲರೂ ಸೇರಿ ವಸುವಿಗೆ ಶಾಪವಿಮೋಚನವು ಹೇಗಾದೀತೆಂಬು ದನ್ನೇ ಏಕಾಗ್ರಚಿತ್ತತೆಯಿಂದ ಯೋಚಿಸಹತ್ತಿದರು. ರಾಜನು ಮಾಡಿದ ಪುಣ್ಯದ ಫಲವೇ ಅದು. 'ಈ ಮಹಾತ್ಮನಾದ ರಾಜನಿಗೆ ಶಾಪವು ಬಂದಿತಲ್ಲ! ಎಲೈ ದೇವತೆಗಳಿರ,ನಾವೆಲ್ಲರೂ ಸೇರಿ ಇವನಿಗೆ ಒಳ್ಳೆಯದಾಗುವಂತೆ ಮಾಡೋಣ?' ಎಂದುಕೊಂಡು ಎಲ್ಲರೂ ಸೇರಿ ಒಂದೇ ನಿಶ್ಚಯದಿಂದ ಉಪರಿಚರವಸುರಾಜನ ಬಳಿಗೆ ಹೋಗಿ ಆತನನ್ನು ಕುರಿತು ಸಂತುಷ್ಟರಾಗಿ ಇಂತೆಂದರು: "ನೀನು ಬ್ರಹ್ಮಣ್ಯನೂ ದೇವತೆಗಳ ಭಕ್ತನೂ ಆಗಿರುತ್ತೀಯೆ; ಶ್ರೀಹರಿಯು ಸುರಾಸುರರಿಗೆಲ್ಲ ಗುರು; ಆತನು ಸಂತುಷ್ಟಾಂತರಂಗನಾದರೆ ನಿನ್ನನ್ನು ಶಾಪದಿಂದ ಅವಶ್ಯವಾಗಿ ಬಿಡುಗಡೆಮಾಡಿಯಾನು ಆದರೆ ನೀನು ಮಹಾತ್ಮರಾದ ಬ್ರಾಹ್ಮಣರನ್ನು

ಗೌರವಿಸುತ್ತಿರಬೇಕು. ಎಲೈ ನೃಪೋತ್ತಮನೆ, ಅವರ ತಪಸ್ಸಿಗೆ ಅವಶ್ಯವಾಗಿ ಫಲವು ಆಗಿಯೇತೀರುವದು; ಅದರಿಂದಲೇ ಅಲ್ಲವೆ, ನೀನು ಆಕಾಶದಿಂದ ಇದ್ದಕ್ಕಿದ್ದಂತೆ ಬಿದ್ದು ನೆಲಕ್ಕುರುಳಿದೆ? ನಾವಾದರೂ ನಿನಗೆ ಒಂದು ಅನುಗ್ರಹವನ್ನು ಕೊಡುವೆವು. ಎಲೈ ಪಾಪರಹಿತನೆ, ಶಾಪದೋಷದಿಂದ ನೀನು ಎಷ್ಟುಕಾಲ ಬಿಲದೊಳಗೆ ಇದ್ದುಕೊಂಡಿರುವೆಯೋ ಅಷ್ಟುಕಾಲವೂ ಸಮಾಹಿತಚಿತ್ತ ಬ್ರಾಹ್ಮಣರಿಂದ ಯಜ್ಞದಲ್ಲಿ ಹೋಮವಾದ ವಸೋರ್ಧಾರೆಯು ನಿನಗೆ ದೊರೆಯಲಿ! ನೆಲದ ಬಿಲದಲ್ಲಿರುವಾಗ ನಮ್ಮನ್ನು ಧ್ಯಾನಮಾಡುತ್ತಿರುವದರಿಂದ ನಿನಗೆ ಯಾವ ಶ್ರಮವೂ ಸೋಕದಿರಲಿ! ಹಸಿವುಬಾಯಾರಿಕೆಗಳೂ ಆಗುವದಿಲ್ಲ. ವಸೋರ್ಧಾರೆಯನ್ನು ಪಾನಮಾಡಿ ಅದರ ತೇಜಸ್ಸಿನಿಂದ ಆಪ್ಯಾಯನವಾದದ್ದರಿಂದಲೂ ನಿನಗೆ ಇವೆಲ್ಲ ಉಂಟಾಗುವದು. ನಮ್ಮ ವರದಾನದ ಮಹಿಮೆಯಿಂದ ಆ ದೇವನು ನಿನ್ನಲ್ಲಿ ಪ್ರೀತನಾಗಿ ನಿನ್ನನ್ನು ಬ್ರಹ್ಮಲೋಕಕ್ಕೆ ಕರೆದೊಯ್ಯುವನು!" ಹೀಗೆಂದು ಆ ರಾಜನಿಗೆ ವರವನ್ನು ಕೊಟ್ಟು ಆ ದೇವತೆಗಳೂ ತಪೋಧನರಾದ ಋಷಿಗಳೂ ತಮ್ಮ ತಮ್ಮ ಸ್ಥಾನಕ್ಕೆ ಹಿಂತೆರಳಿದರು.

"ಎಲೈ ಧರ್ಮರಾಯನೆ, ಬಳಿಕ ವಸುವು ವಿಷ್ವಕ್ಸೇನಭಗವಂತನ ಪೂಜೆ ಯನ್ನು ಮಾಡುತ್ತಿದ್ದನು. ನಾರಾಯಣನ ಮುಖದಿಂದಲೇ ಬಂದಿದ್ದ ಮಂತ್ರವನ್ನು ಜಪಿಸುತ್ತಿದ್ದನು. ಭೂಮಿಯ ರಂಧ್ರದೊಳಗೆ ಇರುತ್ತಿದ್ದರೂ ಅಲ್ಲಿಯೂ ಐದುಕಾಲ ಗಳೂ ಪಂಚಯಜ್ಞಗಳಿಂದ ದೇವೇಶ್ವರನಾದ ಹರಿಯನ್ನು ಪೂಜಿಸುತ್ತಿದ್ದನು.

ಅನನ್ಯಭಕ್ತನೂ ತತ್ಪರನೂ ಜಿತಾಂತಃಕರಣನೂ ಆಗಿರುವಾತನಿಗೆ ವರವನ್ನು ಕೊಡುವ ವಿಷ್ಣುಭಗವಂತನು, ಮಹಾವೇಗಭಾವದಿಂದಲೂ ಉತ್ತಮವಾದ ಭಾಷೆಯಿಂದಲೂ ತನಗೆ ಇಷ್ಟನಾಗಿ ತನ್ನ ಹತ್ತಿರದಲ್ಲಿದ್ದ ಪಕ್ಷಿರಾಜನಾದ ಗರುಡನನ್ನು ಕುರಿತು 'ಎಲೈ ಮಹಾಭಾಗ್ಯಶಾಲಿಯಾದ ಪಕ್ಷಿಶ್ರೇಷ್ಠನೆ, ತೀಕ್ಷ್ಣವ್ರತದಲ್ಲಿರುವ ವಸುವೆಂಬ ಧರ್ಮಾತ್ಮನಾದ ಚಕ್ರವರ್ತಿಯು ಬ್ರಾಹ್ಮಣರ ಕೋಪನಿಮಿತ್ತದಿಂದ ಭೂತಲವನ್ನು ಸೇರಿದ್ದಾನೆ. ಈಗ ಆ ವಿಪ್ರಶ್ರೇಷ್ಠರನ್ನು ಸನ್ಮಾನಿಸಿರುತ್ತಾನೆ. ನೆಲದ ಬಿಲದಲ್ಲಿ ಗುಟ್ಟಾಗಿದ್ದುಕೊಂಡಿರುವ ಆತನ ಬಳಿಗೆ ನೀನು ಹೋಗಿ ಅಧಶ್ಚರನಾಗಿರುವ ಆತನನ್ನು ತಡಮಾಡದೆ ಖೇಚರನನ್ನಾಗಿ ಮಾಡು! ಇದು ನನ್ನ ಅಪ್ಪಣೆ!' ಎಂದನು.

ಆ ಬಳಿಕ ವಾಯುವೇಗವುಳ್ಳ ಗರುತ್ಮಂತನು, ಆ ವಸುರಾಜನು ಇದ್ದ ಭೂಮಿಯ ಬಿಲವನ್ನು ಹೊಕ್ಕನು, ಆಮೇಲೆ ಆ ವಿನತಾಪುತ್ರನು ಆತನನ್ನು

ಎತ್ತಿಕೊಂಡು ಕೂಡಲೆ ಆಕಾಶಕ್ಕೆ ಹಾರಿ ಅಲ್ಲಿ ಅವನನ್ನು ಬಿಟ್ಟುಬಿಟ್ಟನು. ಇದೇ ಮುಹೂರ್ತದಲ್ಲಿ ಉಪರಿಚರನು ಮತ್ತೆ ಹಿಂದಿನ ಜ್ಞಾನವನ್ನು ಪಡೆದುಕೊಂಡನು; ಸಶರೀರನಾಗಿಯೇ ಆ ನೃಪೋತ್ತಮನು ಬ್ರಹ್ಮಲೋಕವನ್ನು ಪಡೆದನು.

"ಎಲೈ ಕೌಂತೇಯನೆ, ಈ ರೀತಿಯಲ್ಲಿ ಮಹಾತ್ಮನಾದ ಅಂಥವನು ಕೂಡ ವಾಗ್ದೋಷದಿಂದ ದ್ವಿಜರ ಶಾಪನಿಮಿತ್ತವಾಗಿ ಅಧೋಗತಿಯನ್ನು ಪಡೆದನು. ಆದರೆ ಈಶ್ವರನೂ ಪುರುಷೋತ್ತಮನೂ ಆದ ಹರಿಯನ್ನು ಪೂಜಿಸಿದ್ದರಿಂದ ಮತ್ತೆ ಶೀಘ್ರವಾಗಿ ಶಾಪಮುಕ್ತನಾಗಿ ಬ್ರಹ್ಮಲೋಕವನ್ನೈದಿದನು. ಇಗೊ, ನಿನಗೆ ಮಾನವರು ಹೇಗೆ ಜನಿಸಿದರೆಂಬುದನ್ನೂ ಮತ್ತು ಭಗವಂತನಾದ ನಾರದರ್ಷಿಯು ಶ್ವೇತದ್ವೀಪಕ್ಕೆ ಹೋದ ಬಗೆಯನ್ನೂ ತಿಳಿಯಹೇಳುವೆನು, ಏಕಮನಸ್ಸಿನಿಂದ ಕೇಳು!"

* * * * *

## 5. ನಾರದನು ಭಗವಂತನನ್ನು ಸ್ತುತಿಸಿದ್ದು*

ಭಗವಂತನಾದ ನಾರದರ್ಷಿಯು ಶ್ವೇತಮಹಾದ್ವೀಪವನ್ನು ಸೇರಿ ಶ್ವೇತವರ್ಣದವರೂ ಚಂದ್ರಕಾಂತಿಯುಳ್ಳವರೂ ಆಗಿದ್ದ ಅದೇ ಜನರನ್ನು ಕಂಡನು. ಅವರನ್ನು ಶಿರಸ್ಸಿನಿಂದ ನಮಸ್ಕರಿಸಿ ಮನಸ್ಸಿನಿಂದ ಪೂಜಿಸಿ ಅವರಿಂದಲೂ ಪೂಜಿತನಾಗಿ ಭಗವಂತನನ್ನು ನೋಡುವ ತವಕದಿಂದ ಮಂತ್ರಜಪದಲ್ಲಿಯೇ ತತ್ಪರನಾಗಿ ಬಹಳ ಶ್ರಮದಿಂದ ಏಕಾಗ್ರಮನಸ್ಕನಾಗಿ ತೋಳುಗಳನ್ನೆತ್ತಿಕೊಂಡು ಸಮಾಹಿತನಾಗಿ ವಿಶ್ವನೂ ನಿರ್ಗುಣನೂ ಗುಣಾತ್ಮನೂ ಆದ ಭಗವಂತನಿಗಾಗಿ ಈ ಸ್ತೋತ್ರವನ್ನು ಹೇಳಿದನು:

1. [1]ನಮಸ್ತೇ ದೇವದೇವೇಶ 2. ನಿಷ್ಕ್ರಿಯ 3. ನಿರ್ಗುಣ 4. ಲೋಕ ಸಾಕ್ಷಿನ್ 5. ಕ್ಷೇತ್ರಜ್ಞ 6. ಪುರುಷೋತ್ತಮ 7. ಅನಂತ 8. ಪುರುಷ 9. ಮಹಾಪುರುಷ 10. ಪುರುಷೋತ್ತಮ 11. ತ್ರಿಗುಣ 12. ಪ್ರಧಾನ 13. ಅಮೃತ 14. ಅಮೃತಾಖ್ಯ 15. ಅನನ್ತಾಖ್ಯ 16. ವ್ಯೋಮ (ಅಮೃತಾತ್ಮನ್)[2] 17. ಸನಾತನ

* ಸಂಪುಟ 36; ಸಂಚಿಕೆ 7; ಮಾರ್ಚ್ 1967

1 ಈ ಸೋತ್ರವು ಪಠಿಸುವವರಿಗೆ ಅನುಕೂಲಿಸಲೆಂದು ಸಂಸ್ಕೃತದಲ್ಲಿದ್ದಂತೆಯೇ ಬರೆದಿದೆ.

2 ಕಂಸದಲ್ಲಿರುವ ನಾಮಗಳು ಕುಂಭಕೋಣಪಾಠದಲ್ಲಿ ಹೆಚ್ಚಾಗಿವೆ.

18. ಸದಸದ್ವ್ಯಕ್ತಾವ್ಯಕ್ತ 19. ಋತಧಾಮನ್ 20. ಆದಿದೇವ 21. ವಸುಪ್ರದ 22. ಪ್ರಜಾಪತೇ 23. ಸುಪ್ರಜಾಪತೇ 24. ವನಸ್ಪತೇ 25. ಮಹಾಪ್ರಜಾಪತೇ 26. ಊರ್ಜಸ್ಪತೇ 27. ವಾಚಸ್ಪತೇ 28. ಜಗತ್ಪತೇ 29. ಮನಸ್ಪತೇ 30. ದಿವಸ್ಪತೇ 31. ಮರುತ್ಪತೇ 32. ಸಲಿಲಪತೇ 33. ಪೃಥಿವೀಪತೇ 34. ದಿಕ್ಪತೇ 35. ಪೂರ್ವನಿವಾಸ 36. ಗುಹ್ಯ 37. ಬ್ರಹ್ಮಪುರೋಹಿತ 38. ಬ್ರಹ್ಮಕಾಯಿಕ 39. ಮಹಾರಾಜಿಕ 40. ಚಾತುರ್ಮಹಾರಾಜಿಕ 41. ಭಾಸುರ 42. ಮಹಾಭಾಸುರ 43. ಸಪ್ತಮಹಾಭಾಗ (ಸಪ್ತಮಹಾಸ್ವರ) 44. ಯಾಮ್ಯ 45. ಮಹಾಯಾಮ್ಯ 46. ಸಂಜ್ಞಾಸಂಜ್ಞ 47. ತುಷಿತ 48. ಮಹಾತುಷಿತ 49.ಪ್ರಮರ್ದನ 50. ಪರಿನಿರ್ಮಿತ 51. ಅಪರಿನಿರ್ಮಿತ 52. ವಶವರ್ತಿನ್ 53. ಅಪರಿನಿನ್ದಿತ 54. ಅಪರಿಮಿತ 55. ವಶವರ್ತಿನ್ 56. ಅವಶವರ್ತಿನ್ 57. ಯಜ್ಞ 58. ಮಹಾಯಜ್ಞ 59. ಯಜ್ಞಸಮ್ಭವ 60. ಯಜ್ಞಯೋನೇ 61. ಯಜ್ಞಗರ್ಭ 62. ಯಜ್ಞಹೃದಯ 63. ಯಜ್ಞಸ್ತುತ 64. ಯಜ್ಞಭಾಗಹರ 65. ಪಞ್ಚಯಜ್ಞ 66. ಪಞ್ಚಕಾಲಕರ್ತೃಪತೇ 67. ಪಾಞ್ಚರಾತ್ರಿಕ 68. ವೈಕುಣ್ಠ 69. ಅಪರಾಜಿತ 70.ಮಾನಸಿಕ 71. ನಾಮನಾಮಿಕ 72. ಪರಸ್ವಾಮಿನ್ 73. ಸುಸ್ನಾತ 74. ಹಂಸ 75. ಪರಮಹಂಸ 76. ಮಹಾಹಂಸ 77. (ಪರಮಜ್ಞೇಯ) ಪರಮಯಾಜ್ಞಿಕ 78. ಸಾಂಖ್ಯಯೋಗ 79. ಸಾಂಖ್ಯಮೂರ್ತೇ 80. ಅಮೃತೇಶಯ 81. ಹಿರಣ್ಯೇಶಯ 82. ದೇವೇಶಯ 83. ಕುಶೇಶಯ 84. ಬ್ರಹ್ಮೇಶಯ 85. ಪದ್ಮೇಶಯ 86. ವಿಶ್ವೇಶ್ವರ 87. ವಿಷ್ವಕ್ಸೇನ 88. ತ್ವಂ ಜಗದನ್ವಯಃ 89. ತ್ವಂ ಜಗತ್ಪ್ರಕೃತಿಃ 90. ತವಾಗ್ನಿರಾಸ್ಯಮ್ 91. ವಡವಾಮುಖೋಗ್ನಿಃ 92. ತ್ವಮಾಹುತಿಃ 93. ಸಾರಥಿಃ 94. ತ್ವಂ ವಷಟ್ಕಾರಃ 95. ತ್ವಮೋಙ್ಕಾರಃ 96. ತ್ವಂ ತಪಃ 97. ತ್ವಂ ಮನಃ 98. ತ್ವಂ ಚನ್ದ್ರಮಾಃ =ಪೂರ್ಣಾಙ್ಗಃ 99. ತ್ವಂ ಚಕ್ಷುರಾಜ್ಯಮ್ 100. ತ್ವಂ ಸೂರ್ಯಃ 101. ತ್ವಂ ದಿಶಾಂ ಗಜಃ 102. ತ್ವಂ ದಿಗ್ಭಾನೋ 103. ವಿದಿಗ್ಭಾನೋ 104. ಹಯಶಿರಃ 105.ಪ್ರಥಮತ್ರಿಸೌಪರ್ಣಃ 106. ವರ್ಣಧರಃ 107. ಪಂಚಾಗ್ನೇ 108. ತ್ರಿಣಾಚಿಕೇತ 109. ಷಡಙ್ಗನಿಧಾನ 110. ಪ್ರಾಗ್ಜ್ಯೋತಿಷ 111. ಜ್ಯೇಷ್ಠಸಾಮಗ 112. ಸಾಮಿಕವ್ರತಧರ 113. ಅಥರ್ವಶಿರಾಃ 114. ಪಞ್ಚಮಹಾಕಲ್ಪ 115. ಫೇನಪಾಚಾರ್ಯ 116.ವಾಲಖಿಲ್ಯ

117. ವೈಖಾನಸ 118.ಅಭಗ್ನಯೋಗ (ಅಭಗ್ನವ್ರತ) 119. ಅಭಗ್ನಪರಿಸಂಖ್ಯಾನ 120. ಯುಗಾದೇ 121. ಯುಗಮಧ್ಯ 122. ಯುಗನಿಧನ 123. ಆಖಣ್ಡಲ 124. ಪ್ರಾಚೀನಗರ್ಭ 125. ಕೌಶಿಕ 126 ಪುರುಷ್ಟುತ 127. ಪುರುಹೂತ 128. ವಿಶ್ವಕೃತ್ (ವಿಶ್ವಜಿತ್) 129. ವಿಶ್ವರೂಪ 130. ಅನನ್ತಗತೇ 131. ಅನನ್ತಭೋಗ 132. ಅನನ್ತ 133. ಅನಾದೇ 134. ಅಮಧ್ಯ 135. ಅವ್ಯಕ್ತಮಧ್ಯ 136. ಅವ್ಯಕ್ತನಿಧನ 137. ವ್ರತಾವಾಸ 138. ಸಮುದ್ರಾಧಿವಾಸ 139. ಯಶೋವಾಸ 140. ತಪೋವಾಸ 141. ದಮಾವಾಸ 142. ಲಕ್ಷ್ಮ್ಯಾವಾಸ 143. ವಿದ್ಯಾವಾಸ 144. ಕೀರ್ತ್ಯಾವಾಸ 145. ಶ್ರೀವಾಸ 146. ಸರ್ವಾವಾಸ 147. ವಾಸುದೇವ 148. ಸರ್ವಚ್ಛನ್ದಕ 149. ಹರಿಹಯ 150. ಹರಿಮೇಧ 151. ಮಹಾಯಜ್ಞಭಾಗಹರ 152. ವರಪ್ರದ 153. ಸುಖಪ್ರದ 154. ಧನಪ್ರದ 155. ಹರಿಮೇಧ 156. ಯಮ 157. ನಿಯಮ 158. ಮಹಾನಿಯಮ 159. ಕೃಚ್ಛ್ರ 160. ಅತಿಕೃಚ್ಛ್ರ 161. ಮಹಾಕೃಚ್ಛ್ರ 162. ಸರ್ವಕೃಚ್ಛ್ರ 163. ನಿಯಮಧರ 164. ನಿವೃತ್ತಭ್ರಮ (ನಿವೃತ್ತಿಧರ್ಮ, ನಿಪ್ರವರಗತ) 165. ಪ್ರವಚನಗತ 166. ಪೃಶ್ನಿಗರ್ಭಪ್ರವೃತ್ತ 167. ಪ್ರವೃತ್ತವೇದಕ್ರಿಯ 168. ಅಜ 169. ಸರ್ವಗತೇ 170. ಸರ್ವದರ್ಶಿನ್ 171. ಅಗ್ರಾಹ್ಯ 172. ಅಚಲ 173. ಮಹಾವಿಭೂತೇ 174. ಮಾಹಾತ್ಮ್ಯಶರೀರ 175. ಪವಿತ್ರ 176.ಮಹಾಪವಿತ್ರ 177. ಹಿರಣ್ಮಯ 178. ಬೃಹತ್ 179. ಅಪ್ರತರ್ಕ್ಯ 180. ಅವಿಜ್ಞೇಯ 181. ಬ್ರಹ್ಮಾಗ್ರ್ಯ 182. ಪ್ರಜಾಸರ್ಗಕರ 183. ಪ್ರಜಾನಿಧನಕರ 184. ಮಹಾಮಾಯಾಧರ (ವಿದ್ಯಾಧರ, ಯೋಗಧರ) 185. ಚಿತ್ರಶಿಖಣ್ಡಿನ್ 186. ವರಪ್ರದ 187. ಪುರೋಡಾಶಭಾಗಹರ 188. ಗತಾಧ್ವರ 189. ಛಿನ್ನತೃಷ್ಣ 190. ಛಿನ್ನಸಂಶಯ 191. ಸರ್ವತೋವೃತ್ತ 192. ನಿವೃತ್ತಿರೂಪ 193. ಬ್ರಾಹ್ಮಣರೂಪ 194. ಬ್ರಾಹ್ಮಣಪ್ರಿಯ 195. ವಿಶ್ವಮೂರ್ತೇ 196. ಮಹಾಮೂರ್ತೇ 197. ಬಾನ್ಧವ 198. ಭಕ್ತವತ್ಸಲ 199. ಬ್ರಹ್ಮಣ್ಯದೇವ ಭಕ್ತೋಽಹಂ ತ್ವಾಂ ದಿದೃಕ್ಷುರೇಕಾನ್ತದರ್ಶನಾಯ ನಮೋ ನಮಃ॥

* * * * *

# 6. ನಾರದನಿಗೆ ಭಗವಂತನ ಉಪದೇಶ

## (1)

ಇಂತು ರಹಸ್ಯವೂ ಯಥಾರ್ಥವೂ ಆದ ನಾಮಗಳಿಂದ ನಾರದರ್ಷಿಯು ಸ್ತೋತ್ರಮಾಡಲಾಗಿ ಭಗವಂತನು ವಿಶ್ವರೂಪಧರನಾಗಿ ಆ ಮುನಿಗೆ ದರ್ಶನವನ್ನು ಕೊಟ್ಟನು. ಆತನು ಒಕ್ಕಡೆಯಲ್ಲಿ ಚಂದ್ರನಿಗಿಂತ ವಿಶುದ್ಧನಾಗಿದ್ದನು, ಒಕ್ಕಡೆಯಲ್ಲಿ ಚಂದ್ರನಿಗಿಂತ ವಿಶೇಷವಾದ ಪ್ರಭೆಯುಳ್ಳವನಾಗಿದ್ದನು. ಒಂದು ಕಡೆಯಲ್ಲಿ ಸ್ವಲ್ಪ ಅಗ್ನಿವರ್ಣನಾಗಿಯೂ ಮತ್ತೊಂದು ಕಡೆ ನಕ್ಷತ್ರವರ್ಣನಾಗಿಯೂ, ಒಂದು ಕಡೆ ಗಿಣಿಯ ರೆಕ್ಕೆಯ ಕಾಂತಿಯುಳ್ಳವನೂ ಇನ್ನೊಂದು ಕಡೆ ಸ್ಫಟಿಕದಂತೆ ಥಳಗುಟ್ಟುವವನೂ ಆಗಿದ್ದನು. ಒಂದು ಕಡೆಯಲ್ಲಿ ಮಿಂಚಿನಂತೆ ಥಳಾರೆನ್ನುತ್ತಿದ್ದನು, ಇನ್ನೊಂದು ಕಡೆಯಲ್ಲಿ ಚಿನ್ನದಂತಿರುವ ಬಣ್ಣದವನಾಗಿದ್ದನು. ಒಕ್ಕಡೆ ಹವಳದ ಕುಡಿಯಂತಿರುವ ಬಣ್ಣ, ಇನ್ನೊಂದುಕಡೆ ಶ್ವೇತವರ್ಣ, ಮತ್ತೊಂದು ಕಡೆ ಸುವರ್ಣ ವರ್ಣ, ಇನ್ನೂ ಒಂದೆಡೆಯಲ್ಲಿ ವೈಡೂರ್ಯದಂತಿರುವ ವರ್ಣ, ನೀಲ ವೈಡೂರ್ಯದ ಬಣ್ಣ, ಇಂದ್ರನೀಲದಂತೆ, ನವಿಲಿನಕಂಠದಂತೆ, ಮುತ್ತಿನ ಸರದಂತೆ- ಇವೇ ಮುಂತಾದ ಬಹುಬಗೆಯ ಬಣ್ಣಗಳುಳ್ಳವನಾಗಿದ್ದನು. ಆ ಸನಾತನನು ಸಾವಿರಕಂಗಳುಳ್ಳವನಾಗಿ ನೂರಾರು ತಲೆಗಳುಳ್ಳವನೂ, ಸಾವಿರಾರು ಪಾದಗಳುಳ್ಳವನೂ, ಸಾವಿರಾರು ಹೊಟ್ಟೆಗಳು ತೋಳುಗಳು – ಹೀಗೆ ಒಂದು ಕಡೆಯಿದ್ದರೆ ಇನ್ನೊಂದೆಡೆಯಲ್ಲಿ ಅವ್ಯಕ್ತನಾಗಿದ್ದನು. ಬಾಯಿಂದ ಓಂಕಾರವನ್ನು ಅದಕ್ಕೆ ಸೇರಿದಂತೆ ಸಾವಿತ್ರೀಮಂತ್ರವನ್ನು ಉಚ್ಚರಿಸುತ್ತಿದ್ದನು. ಮಿಕ್ಕ ಬಾಯಿಗಳಿಂದ ನಾಲ್ಕು ವೇದಗಳನ್ನು ಪಠಿಸುತ್ತಿದ್ದನು, ಆ ಹರಿಯು ನಾರಾಯಣನು ಆರಣ್ಯಕವನ್ನು ಪಠಿಸುತ್ತಿದ್ದನು. ಯಜ್ಞಪತಿಯಾದ ಆತನು ವೇದಿ, ಕಮಂಡಲು, ಬಿಳಿಯ ರತ್ನಗಳು, ಪಾದರಕ್ಷೆಗಳು, ಕುಶ, ಅಜಿನ, ದಂಡಕಾಷ್ಠ, ಉರಿಯುತ್ತಿರುವ ಅಗ್ನಿ – ಇವುಗಳನ್ನು ಧರಿಸಿದ್ದನು.

ಹೀಗೆ ಪ್ರಸನ್ನನಾದ ಆ ಭಗವಂತನನ್ನು ಪ್ರಸನ್ನಾತ್ಮನಾದ ದ್ವಿಜಶ್ರೇಷ್ಠನಾದ ನಾರದನು ಮೌನದಿಂದ ಪ್ರಣತನಾಗಿ ನಮಸ್ಕರಿಸಿದನು. ಹೀಗೆ ನಮಸ್ಕರಿಸಿದ ಆ

---

* ಸಂಪುಟ 36; ಸಂಚಿಕೆ 8; ಏಪ್ರಿಲ್ 1967

ನಾರದನನ್ನು ಕುರಿತು ದೇವತೆಗಳಿಗೆಲ್ಲ ಆದಿಯಾದ ಅವ್ಯಯನಾದ ಭಗವಂತ ನಿಂತೆಂದನು: "ಏಕತ, ದ್ವಿತ, ತ್ರಿತ – ಎಂಬ ಮಹರ್ಷಿಗಳು ನನ್ನ ದರ್ಶನವಾಗಲೆಂಬ ಅಭಿಲಾಷೆಯಿಂದ ಈ ಪ್ರದೇಶಕ್ಕೆ ಬಂದಿದ್ದರು. ಆದರೂ ಅವರಿಗೆ ನಾನು ಕಾಣಿಸಲಿಲ್ಲ; ಇನ್ನುಮುಂದೆಯೂ ಯಾವನೊಬ್ಬನೂ ನನ್ನನ್ನು ಕಾಣಲಾರನು. ಏಕಾಂತಿಕನಾದವನಿಗೆ ಹೊರತು ಮತ್ತೆಯಾರಿಗೂ ನನ್ನ ದರ್ಶನವಾಗದು. ನೀನು ಏಕಾಂತಭಕ್ತನಾಗಿರುವೆ, ಎಲೈ ದ್ವಿಜನೆ, ಧರ್ಮನ ಮನೆಯಲ್ಲಿ ಹುಟ್ಟಿದ ಈ ನರನಾರಾಯಣಾದಿಗಳು ನನ್ನ ಶ್ರೇಷ್ಠವಾದ ತನುಗಳು; ಅವರನ್ನು ನೀನು ಭಜಿಸು. ಇನ್ನು ಬಂದಂತೆ ಹೋಗು; ಎಲೈ ವಿಪ್ರನೆ, ನಿನಗೆ ಯಾವದಾದರೂ ಇಚ್ಛೆಯಿದ್ದರೆ ಆ ವರವನ್ನು ಬೇಡಿಕೊ, ಅವ್ಯಯನಾದ ನಾನು ಪ್ರಸನ್ನನಾಗಿ ವಿಶ್ವರೂಪಮೂರ್ತಿ ರೂಪದಿಂದ ಕಾಣಿಸಿಕೊಂಡಿರುತ್ತೇನೆ."

ಆಗ ನಾರದನಿಂತೆಂದನು: "ದೇವನೆ, ಇಂದು ನನ್ನ ತಪಸ್ಸು, ನಿಯಮ – ಎಲ್ಲಕ್ಕೂ ಫಲವು ಲಭಿಸಿದಂತಾಯಿತು; ಏಕೆಂದರೆ ಭಗವಂತನಾದ ನಿನ್ನನ್ನು ಕಂಡಿರುತ್ತೇನೆ. ಸನಾತನನಾದ ವಿಶ್ವರೂಪಧರನಾದ, ಸರ್ವಮೂರ್ತಿಯಾದ, ಪ್ರಭುವಾದ ನಿನ್ನನ್ನು ಕಂಡೆನಲ್ಲ, ಇದೇ ಎಲ್ಲಕ್ಕಿಂತಲೂ ಹೆಚ್ಚಿನ ವರವು."

ಭೀಷ್ಮರು ಹೇಳುತ್ತಾರೆ: ಇಂತು ತನ್ನ ದರ್ಶನವನ್ನಿತ್ತು ಬ್ರಹ್ಮಪುತ್ರನಾದ ನಾರದನನ್ನು ಕುರಿತು ಭಗವಂತನು "ಎಲೈ ನಾರದನೆ, ತಡಮಾಡದೆ ಹಿಂತೆರಳು: ಈ ಅನಿಂದ್ರಿಯರೂ ಅನಾಹಾರರೂ ಚಂದ್ರನಂತೆ ಕಾಂತಿಯುಳ್ಳವರೂ ಆಗಿರುವ ಇಗೋ, ಇವರು ನನ್ನ ಭಕ್ತರು; ಇವರು ಏಕಾಗ್ರತೆಯಿಂದ ಧ್ಯಾನಮಾಡಲಿ, ಇವರಿಗೆ ಯಾವ ವಿಘ್ನವೂ ಆಗದೆ ಇರಲಿ. ಈ ಮಹಾಭಾಗರಾದ ಸಿದ್ಧಪುರುಷರು ಪೂರ್ವದಲ್ಲಿ ಏಕಾಂತಿಗಳಾಗಿರುತ್ತಿದ್ದರು. ಇವರಲ್ಲಿ ಯಾವ ತಮಸ್ಸಾಗಲಿ ರಜೋಗುಣವಾಗಲಿ ಇರುವದಿಲ್ಲ. ಇವರು ನನ್ನನ್ನೇ ಪ್ರವೇಶಿಸುವರು, ಇದಕ್ಕೆ ಸಂಶಯವಿಲ್ಲ. ಕಣ್ಣಿಗೆ ಕಾಣದವನು, ಸ್ಪರ್ಶೇಂದ್ರಿಯಕ್ಕೆ ಮುಟ್ಟಲಾಗದಂತಿರುವವನು, ಘ್ರಾಣೇಂದ್ರಿಯದಿಂದ ಮೂಸಿನೋಡುವದಕ್ಕಾಗದವನು, ಯಾವನಿಗೆ ಸವಿದುನೋಡುವ ಯಾವ ರುಚಿಯೂ ಇರುವದಿಲ್ಲವೋ, ಸತ್ತ್ವರಜಸ್ತಮೋ ಗುಣಗಳು ಯಾವನಲ್ಲಿ ಸೇರಲಾರವೋ, ಯಾವನು ಸರ್ವವ್ಯಾಪಿಯೂ ಸಾಕ್ಷಿಯೂ ಲೋಕಕ್ಕೆಲ್ಲ ಆತ್ಮನೆನಿಸಿರುವಾತನೂ ಆಗಿರುವನೋ ಯಾವನು ಭೂತಸಮುದಾಯ

ವೆಲ್ಲವೂ ನಾಶವಾದರೂ ತಾನು ನಾಶವಾಗದೆ ಇರುವನೋ, ಯಾವನು ಅಜನೂ ನಿತ್ಯನೂ ಶಾಶ್ವತನೂ ನಿರ್ಗುಣನೂ ನಿಷ್ಕಲನೂ ಆಗಿರುವನೋ, ಇಪ್ಪತ್ತುನಾಲ್ಕು ಗುಣಗಳ ಅಪೇಕ್ಷೆಯಿಂದ ಯಾವನು ಇಪ್ಪತ್ತೈದನೆಯವನೆನಿಸಿರುವನೋ, ಯಾವನನ್ನು ಪುರುಷನೆಂದೂ ನಿಷ್ಕ್ರಿಯನೆಂದೂ ಜ್ಞಾನಕ್ಕೆ ಗೋಚರನೆಂದೂ ಹೇಳುವರೋ, ಯಾವನನ್ನು ಪ್ರವೇಶಿಸಿದ ದ್ವಿಜಶ್ರೇಷ್ಠರು ಇಲ್ಲಿ ಮುಕ್ತರು ಎನಿಸಿಕೊಳ್ಳುವರೋ, ಸನಾತನನಾದ ಆ ಪರಮಾತ್ಮನೇ **ವಾಸುದೇವ**ನೆಂದು ತಿಳಿಯಬೇಕು. ಎಲೈ ನಾರದನೆ, ಆ ದೇವನ ಮಾಹಾತ್ಮ್ಯವನ್ನು ಮಹಿಮೆಯನ್ನು ನೋಡು! ಆತನಿಗೆ ಶುಭಾಶುಭಕರ್ಮಗಳು ಎಂದಿಗೂ ಅಂಟುವದಿಲ್ಲ. ಸತ್ತ್ವ, ರಜಸ್ಸು, ತಮಸ್ಸು–ಇವುಗಳನ್ನು ಗುಣಗಳೆಂದು ಕರೆಯುತ್ತಿರುವರಷ್ಟೆ. ಇವು ಎಲ್ಲರ ಶರೀರಗಳಲ್ಲಿಯೂ ಇದ್ದುಕೊಂಡು ಸಂಚರಿಸುತ್ತಿರುವವು. ಇವುಗಳನ್ನು ಕ್ಷೇತ್ರಜ್ಞನು ಭೋಗಿಸುತ್ತಿರುವನು, ಇವುಗಳು ಆತನನ್ನು ಭೋಗಿಸಲಾರವು; ಆತನು ನಿರ್ಗುಣನು, ಗುಣಭೋಕ್ತೃ, ಗುಣಗಳನ್ನು ಸೃಷ್ಟಿಸುವಾತನು, ಗುಣಗಳನ್ನು ಮೀರಿರುವಾತನು, ಎಲೈ ದೇವರ್ಷಿಯೆ, ಜಗತ್ತಿಗೆಲ್ಲ ಪ್ರತಿಷ್ಠಾಸ್ಥಾನವಾಗಿರುವ ಪೃಥಿವಿಯು ಅಪ್ಪಿನಲ್ಲಿ ಪ್ರಲಯವಾಗುವದು; ಅಪ್ಪು ಜ್ಯೋತಿಯಲ್ಲಿ ಪ್ರಲಯವಾಗುವದು, ಜ್ಯೋತಿಯು ವಾಯುವಿನಲ್ಲಿ ಪ್ರಲಯವಾಗುವದು; ವಾಯುವು ಆಕಾಶದಲ್ಲಿ ಲಯವಾಗುವದು: ಆಕಾಶವು ಮನಸ್ತತ್ತ್ವದಲ್ಲಿ ಅಡಗುತ್ತದೆ. ಎಲ್ಲಕ್ಕೂ ಹೆಚ್ಚಿನ ಮನಸ್ಸು ಅವ್ಯಕ್ತದಲ್ಲಿ ಅಡಗುವದು. ಎಲೈ ಬ್ರಾಹ್ಮಣನೆ, ಅವ್ಯಕ್ತವು ನಿಷ್ಕ್ರಿಯನಾದ ಪುರುಷನಲ್ಲಿ ಲಯವಾಗುವದು. ಆ ಸನಾತನನಾದ ಪುರುಷನಿಗಿಂತ ಹೆಚ್ಚಿನದು ಯಾವದೊಂದೂ ಇರುವದಿಲ್ಲ. ಜಗತ್ತಿನಲ್ಲಿ ಸನಾತನವಾಸುದೇವನೆಂಬ ಆ ಏಕಪುರುಷನ ಹೊರತು ಮತ್ತೆ ಯಾವ ಸ್ಥಾವರಜಂಗಮಾತ್ಮಕಭೂತವೂ ಇರುವದಿಲ್ಲ. ಮಹಾಬಲನಾದ ವಾಸುದೇವನು ಸರ್ವಭೂತಗಳಿಗೂ ಆತ್ಮನಾಗಿರುವನಲ್ಲವೆ? ಪೃಥಿವಿ, ವಾಯು, ಆಕಾಶ, ಅಪ್ಪು, ಜ್ಯೋತಿ– ಎಂಬೀ ಐದೂ ಒಟ್ಟು ತೋರಿದರೆ **ಶರೀರ**ವೆನಿಸುವದು. ಎಲೈ ಬ್ರಾಹ್ಮಣನೆ, ಅದನ್ನು ಒಳಹೊಕ್ಕು ಹುಟ್ಟುವಾಗಲೇ ಶರೀರವನ್ನು ವ್ಯಾಪಾರಮಾಡಿಸುವ ಅದೃಶ್ಯನೂ ಲಘುವಿಕ್ರಮನೂ ಆಗಿರುವ ಆ ಪ್ರಭುವಿರುವನಲ್ಲ ಅವನೇ **ಸಂಕರ್ಷಣನು**. ಧಾತುಗಳು ಕೂಡಿ ಸಂಘಾತವಾಗದೆ ಶರೀರವಾಗಲಾರದು; ಜೀವನಿಲ್ಲದೆ, ಎಲೈ ಬ್ರಾಹ್ಮಣನೆ, ವಾಯುಗಳು ವ್ಯಾಪಾರಮಾಡಲಾರವು. ಆ

ಜೀವನೇ ಶೇಷನು, ಸಂಕರ್ಷಣನು ಎನಿಸುವನು. ಅವನಿಂದ ಯಾವಾತನು ತನ್ನ ಕರ್ಮದಿಂದ ಸನತ್ಕುಮಾರತ್ವವನ್ನು ಹೊಂದಿರುವನೋ ಯಾವನಲ್ಲಿ ಸರ್ವಭೂತಗಳೂ ಪ್ರಲಯದಲ್ಲಿ ಕ್ಷಯವಾಗುವವೋ ಆತನೇ ಸರ್ವಭೂತಗಳಿಗೂ **ಮನಸ್ಸು,** ಮತ್ತು ಪ್ರದ್ಯುಮ್ನನು ಎನಿಸಿರುತ್ತಾನೆ. ಅವನಿಂದ ಹುಟ್ಟುವನಾಗಿ ಯಾವನು ಕರ್ತೃ, ಕರಣ, ಕಾರ್ಯ- ಈ ಎಲ್ಲವೂ ಆಗುವನೋ, ಆತನಿಂದಲೇ ಸ್ಥಾವರ ಜಂಗಮಾತ್ಮಕವಾದ ಸರ್ವಜಗತ್ತೂ ಉಂಟಾಗುವದು. ಆತನೇ ಅನಿರುದ್ಧನು, ಅವನೇ **ಈಶಾನನು,** ಸರ್ವಕರ್ಮಗಳಲ್ಲಿಯೂ ವ್ಯಕ್ತನಾಗಿರುವನು. ಯಾವನು ನಿರ್ಗುಣನಾದ ವಾಸುದೇವಭಗವಂತನೋ ಅವನೇ ಜೀವನಾಗಿರುವ ಸಂಕರ್ಷಣ ಪ್ರಭು; ಸಂಕರ್ಷಣನಿಂದಲೇ ಪ್ರದ್ಯುಮ್ನನು ಆಗಿ ಪ್ರದ್ಯುಮ್ನನೆನಿಸಿರುತ್ತಾನೆ. ಪ್ರದ್ಯುಮ್ನನಿಂದ ಆಗಿರುವ ಅನಿರುದ್ಧನಿರುವನಲ್ಲ, ಅವನೇ ಅಹಂಕಾರವು, ಅವನೇ ಈಶ್ವರನು.

* * * * *

# 6. ನಾರದನಿಗೆ ಭಗವಂತನ ಉಪದೇಶ (2)

(ಭಗವಂತನಿಂತೆಂದನು) : "ಎಲೈ ನಾರದನೆ, ನನ್ನಿಂದಲೇ ಸ್ಥಾವರಜಂಗ ಮಾತ್ಮಕವಾದ ಜಗತ್ತು- ಅಕ್ಷರವೂ ಕ್ಷರವೂ, ಸತ್ತೂ ಅಸತ್ತೂ ಉಂಟಾಗಿರುವದು. ನನ್ನ ಭಕ್ತರಾದವರು ನನ್ನನ್ನು ಪ್ರವೇಶಿಸಿ ಇಲ್ಲಿಯೇ ಮುಕ್ತರಾಗುವರು. ನಾನೇ ನಿಷ್ಕ್ರಿಯನಾದ ಇಪ್ಪತ್ತೈದನೆಯ ತತ್ತ್ವವಾದ ಪುರುಷನು. ಇವನು ನಿರ್ಗುಣನು, ನಿಷ್ಕಲನು, ನಿರ್ದ್ವಂದ್ವನು ತನ್ನದೆಂಬುದಿಲ್ಲದಾತನು. 'ಇವನು ರೂಪವಂತನಾಗಿ ಹೀಗೆ ಕಾಣಿಸುತ್ತಿದಾನೆ' ಎಂದಿಂತು ಎಣಿಸದಿರು. ಈಶ್ವರನೂ ಜಗತ್ತಿಗೆಲ್ಲ ಗುರುವೂ ಆಗಿರುವ ನಾನು ಇಚ್ಛಾಮಾತ್ರದಿಂದ ಒಂದೇ ಮುಹೂರ್ತದಲ್ಲಿ ಅದೃಶ್ಯನಾದೇನು. ನಾರದನೆ, ನನ್ನನ್ನು ಕಾಣುತ್ತಿರುವೆಯಲ್ಲ, ಇದು ನಾನು ಸೃಷ್ಟಿಸಿರುವ ಮಾಯೆಯು. 'ಎಲ್ಲಾ ಭೂತಗುಣಗಳಿಂದ ಕೂಡಿದವನು' ಎಂದು ನನ್ನನ್ನು ಬಗೆಯದಿರು.

---

* ಸಂಪುಟ 36; ಸಂಚಿಕೆ 9; ಮೇ 1967

"ಇಗೊ, ನಿನಗೆ ಮೂರ್ತಿಚತುಷ್ಟಯವನ್ನು ಚೆನ್ನಾಗಿ ತಿಳಿಯಹೇಳಿರುತ್ತೇನೆ. 'ಜೀವ'ನೆಂಬ ಸಂಜ್ಞೆಯಿರುವಾತನು ನಾನೇ, ನನ್ನಲ್ಲಿಯೇ ಜೀವನು ಇದ್ದು ಕೊಂಡಿರುವನು, 'ನಾನು ಒಬ್ಬ ಜೀವನನ್ನು ಕಂಡೆನು' ಎಂದು ಈ ವಿಷಯಕ್ಕೆ ನಿನಗೆ ಮತಿಯುಂಟಾಗದಿರಲಿ. ಬ್ರಾಹ್ಮಣನೆ, ನಾನು ಸರ್ವವ್ಯಾಪಕವಾದ ಭೂತಗ್ರಾಮಕ್ಕೆ ಅಂತರಾತ್ಮನು; ಭೂತಗ್ರಾಮದ ಶರೀರಗಳು ನಾಶವಾದರೂ ನಾನು ನಾಶವಾಗದೆ ಇರುವೆನು. ಎಲೈ ಮುನಿಯೆ, ಆ ಸಿದ್ಧರಾದ ಮಹಾತ್ಮರಾದ ಜನರು ಏಕಾಂತಿಗಳಾದವರಾಗಿದ್ದರು; ತಮೋರಜಸ್ಸುಗಳಿಂದ ನಿರ್ಮುಕ್ತರಾಗಿ ನನ್ನನ್ನೇ ಹೊಗುವರು. ಸನಾತನನಾದ ಬ್ರಹ್ಮದೇವನು ನನ್ನ ಪರಮಾರ್ಥವನ್ನೇ ಚಿಂತಿಸುತ್ತಿರುವನು; ರುದ್ರದೇವನು ಕ್ರೋಧದಿಂದ ನನ್ನ ಹಣೆಯಿಂದ ಹೊರಕ್ಕೆ ಬಂದಿರುತ್ತಾನೆ. ಇಗೊ, ನನ್ನ ಬಲಪಕ್ಕೆಯನ್ನು ಆಶ್ರಯಿಸಿಕೊಂಡಿರುವ ಈ ಏಕಾದಶರುದ್ರರನ್ನು ನೋಡು! ಹಾಗೂ ನನ್ನ ಎಡಪಾರ್ಶ್ವವನ್ನು ಆಶ್ರಯಿಸಿಕೊಂಡಿರುವ ದ್ವಾದಶಾದಿತ್ಯರನ್ನು ಕಂಡೆಯ? ನನ್ನ ಮುಂದುಗಡೆಯಿಂದ ಅಷ್ಟವಸುಗಳನ್ನು ನೋಡು; ಹಿಂದುಗಡೆಯಲ್ಲಿ ನಾಸತ್ಯ, ದಸ್ರ – ಎಂಬ ಅಶ್ವಿನೀದೇವತೆಗಳಿರುವದನ್ನು ನೋಡು! ಇಗೊ, ಇಲ್ಲಿ ಪ್ರಜಾಪತಿಗಳೆಲ್ಲರೂ ಇರುವರು, ನೋಡು! ಈ ಸಪ್ತರ್ಷಿಗಳನ್ನು ನೋಡು! ವೇದಗಳನ್ನೂ ನೂರಾರು ಯಜ್ಞಗಳನ್ನೂ ಅಮೃತವನ್ನೂ ಓಷಧಿಗಳನ್ನೂ ಇಲ್ಲಿ ಕಾಣಬಹುದು. ತಪಸ್ಸುಗಳು, ನಿಯಮಗಳು, ಬಗೆಬಗೆಯ ಯಮಗಳು, ಒಂದೇ ಕಡೆಯಲ್ಲಿ ಮೂರ್ತಿಮಂತ ವಾಗಿರುವ ಅಷ್ಟೈಶ್ವರ್ಯ, ಶ್ರೀ, ಲಕ್ಷ್ಮೀ, ಕೀರ್ತಿ, ಪೃಥಿವಿ, ಕಕುದ್ಮಿನಿ– ಇವರನ್ನು ಕಂಡೆಯ? ವೇದಗಳಿಗೆ ಮಾತೃವಾಗಿರುವ ಸರಸ್ವತೀದೇವಿಯು ನನ್ನಲ್ಲಿರುವದನ್ನು ನೋಡು! ನಾರದನೆ, ಆಕಾಶದಲ್ಲಿ ಸಂಚರಿಸುತ್ತಿರುವ ಜ್ಯೋತಿಃಶ್ರೇಷ್ಠನಾದ ಧ್ರುವನನ್ನು ನೋಡು! ಮೂರ್ತಿಮಂತರಾದ ಮೇಘಗಳು, ಸಮುದ್ರಗಳು, ಸರಸ್ಸುಗಳು, ನದಿಗಳು, ಎಲೈ ಸತ್ತಮನೆ, ನಾಲ್ಕು ಪಿತೃಗಣಗಳನ್ನು ನೋಡು. ಮೂರ್ತಿರಹಿತರಾಗಿರುವ ಈ ಮೂರು ಗಣಗಳನ್ನು ನೋಡು! ಮುನಿಯೆ, ದೇವತಾಕಾರ್ಯಕ್ಕಿಂತಲೂ ಪಿತೃಕಾರ್ಯವು ಹೆಚ್ಚಿನದು; ದೇವತೆಗಳಿಗೂ ಪಿತೃಗಳಿಗೂ ಆದಿಪಿತನಾಗಿರುವವನು ನಾನೊಬ್ಬನೇ. ನಾನು ಹಯಗ್ರೀವನಾಗಿ ವಾಯವ್ಯಸಮುದ್ರದಲ್ಲಿ ಶ್ರದ್ಧೆಯಿಂದ ಕೊಟ್ಟ ಹವ್ಯವನ್ನೂ ಕವ್ಯವನ್ನೂ ಪಾನಗೈಯುವೆನು.

ನನ್ನಿಂದಲೇ ಪೂರ್ವದಲ್ಲಿ ಸೃಷ್ಟನಾದ ಬ್ರಹ್ಮನು ತಾನೆ ನನ್ನನ್ನು ಯಜ್ಞದಿಂದ ಪೂಜಿಸಿದನು. ಆಗ ಅದರಿಂದ ಪ್ರೀತನಾಗಿ ಅತ್ಯುತ್ತಮವಾದ ವರಗಳನ್ನು ಅವನಿಗೆ ಕೊಟ್ಟಿರುತ್ತೇನೆ. ಕಲ್ಪಾದಿಯಲ್ಲಿ ಅವನು ನನಗೆ ಪುತ್ರನಾಗಬೇಕು, ಮತ್ತು ಲೋಕಗಳಿಗೆಲ್ಲ ಒಡೆಯನಾಗಬೇಕು. ಅವನು **ಅಹಂಕಾರ**ವೆಂಬ ಪರ್ಯಾಯವಾಚಕ ಶಬ್ದಕ್ಕೆ ವಾಚ್ಯನಾಗಬೇಕು - ಈ ವರಗಳೆಲ್ಲವನ್ನೂ ಅವನಿಗೆ ಕೊಟ್ಟಿರುತ್ತೇನೆ.

* * * * *

# 6. ನಾರದನಿಗೆ ಭಗವಂತನ ಉಪದೇಶ
# (3)

ಎಲೈ ನಾರದನೆ, ಹೀಗೆ ಬ್ರಹ್ಮನಿಗೆ ವರಗಳನ್ನು ಕೊಟ್ಟು "ಎಲೈ ಬ್ರಹ್ಮನೆ, ನೀನು ಏರ್ಪಡಿಸುವ ಎಲ್ಲೆಕಟ್ಟನ್ನು ಯಾವನೊಬ್ಬನೂ ಅತಿಕ್ರಮಿಸದೆ ಇರುವನು. ಎಲೈ ಬ್ರಹ್ಮನೆ, ನೀನೂ ವರವನ್ನು ಬೇಡುವವರಿಗೆ ವರಗಳನ್ನು ಕೊಡುವ ಶಕ್ತಿಯುಳ್ಳವನಾಗಿರುವೆ. ಸುರಾಸುರಗಣಗಳಿಗೂ, ಋಷಿಗಳಿಗೂ, ಪಿತೃಗಳಿಗೂ, ವಿವಿಧಪ್ರಾಣಿಗಳಿಗೂ ಉಪಾಸ್ಯನಾಗಿರುವೆಯಯ್ಯ; ಎಲೈ ತಪೋಧನನೆ, ಮಹಾಭಾಗನೆ, ನಿಯಮದಿಂದ ನಡೆಯುವ ಕ್ರಮವುಳ್ಳಾತನೆ, ನಾನು ಯಾವಾಗಲೂ ದೇವತೆಗಳ ಕಾರ್ಯಗಳಿಗಾಗಿ ಪ್ರಾದುರ್ಭೂತನಾಗುತ್ತಿರುವೆನಷ್ಟೆ? ಆಗ ನೀನೂ ನನಗೆ ಅನುಶಾಸನವನ್ನು ಮಾಡಿ ಮಗನಂತೆ ಆಯಾ ಕಾರ್ಯದಲ್ಲಿ ನಿಯೋಜಿಸುವೆ!" ಎಂಬೀ ಪರಿಯಲ್ಲಿ ಈ ಮೇಲೆ ಹೇಳಿದ ಮತ್ತು ಇನ್ನೂ ಕೆಲವು ವರಗಳನ್ನು ಅಮಿತತೇಜನಾದ ಬ್ರಹ್ಮನಿಗೆ ಕೊಟ್ಟು ನಿವೃತ್ತಿಪರನಾದೆನು.

ಎಲೈ ನಾರದನೆ, ಧರ್ಮಗಳೊಳಗೆಲ್ಲ ಸುಖಪ್ರದವಾದ ನಿವೃತ್ತಿಯೇ ಹೆಚ್ಚಿನದೆನಿಸುವದು. ಆದ್ದರಿಂದ ನಿವೃತ್ತಿಯನ್ನು ಹೊಂದಿ ಸರ್ವಪ್ರಕಾರದಿಂದಲೂ ನಿರ್ವಮನಾಗಿ ವ್ಯವಹರಿಸಬೇಕು. ವಿದ್ಯಾಸಹಾಯವಂತನೂ ಆದಿತ್ಯಮಂಡಲದಲ್ಲಿರುವವನೂ ಸಮಾಹಿತಚಿತ್ತನೂ ಆಗಿರುವ ಕಪಿಲನೇ ನಾನೆಂದು ಸಾಂಖ್ಯದರ್ಶನದಲ್ಲಿ ನಿಶ್ಚಿತರಾದ ಆಚಾರ್ಯರುಗಳು ಹೇಳುತ್ತಿರುವರು. ವೇದದಲ್ಲಿ

* ಸಂಪುಟ 36; ಸಂಚಿಕೆ 10; ಜೂನ್ 1967

ಸುಷ್ಟುತನಾಗಿರುವ ಯೋಗರತನಾದ ಹಿರಣ್ಯಗರ್ಭನೇ ನಾನೆಂದು ಯೋಗಶಾಸ್ತ್ರದಲ್ಲಿ ಹೇಳಿರುತ್ತದೆ. ಈ ನಾನು ವ್ಯಕ್ತಿರೂಪದಿಂದ ಅಂತರಿಕ್ಷದಲ್ಲಿ ಶಾಶ್ವತನಾಗಿ ಇದ್ದುಕೊಂಡಿರುವೆನು. ಸಾವಿರಯುಗಗಳಾದ ಬಳಿಕ ಜಗತ್ತೆಲ್ಲವನ್ನೂ ಮತ್ತೆ ಸಂಹಾರಗೈಯುವೆನು. ಆಮೇಲೆ ಮತ್ತೆ ವಿದ್ಯಾಪ್ರಭಾವದಿಂದ ಸರ್ವಜಗತ್ತನ್ನೂ ಸೃಷ್ಟಿಸುವೆನು. ಇದರಲ್ಲಿ ನಾಲ್ಕನೆಯ ಮೂರ್ತಿಯಿರುವದಷ್ಟೆ, ಅದು ಅವ್ಯಯನಾದ ಶೇಷನನ್ನು ಸೃಷ್ಟಿಸಿತು; ಅವನೇ **ಸಂಕರ್ಷಣ**ನೆನಿಸಿರುತ್ತಾನೆ. ಅವನು **ಪ್ರದ್ಯುಮ್ನ**ನನ್ನು ಉಂಟುಮಾಡಿದನು; ಪ್ರದ್ಯುಮ್ನನಿಂದ **ಅನಿರುದ್ಧ**ನಾದ ನಾನು. ಈ ನನ್ನ ಸೃಷ್ಟಿಯು ಮತ್ತೆ ಮತ್ತೆ ಆಗುತ್ತಿರುವದು. ಹೇಗೆ ಇಲ್ಲಿ ಸೂರ್ಯನ ಉದಯಾಸ್ತಮಯಗಳು ನಷ್ಟವಾದರೂ ಮತ್ತೆ ಅಮಿತದ್ಯುತಿಯಾದ ಕಾಲವು ಅದನ್ನು ಬಲಾತ್ಕಾರದಿಂದ ತಂದುಕೊಡುವದೋ, ಹಾಗೆಯೇ ನಾನು ಮತ್ತೆ ಸರ್ವಭೂತಗಳ ಹಿತಕ್ಕಾಗಿ ಸೃಷ್ಟಿಸುವೆನು.

ಭೀಷ್ಮನು ಯುಧಿಷ್ಠಿರನಿಗೆ ಹೇಳುತ್ತಿದಾನೆ: ಭಗವಂತನು ಹೀಗೆನ್ನಲು ನಾರದನು ಜನಾರ್ದನ ಭಗವಂತನನ್ನು 'ಮಹಾಪ್ರಭುವೆ, ನಿನ್ನನ್ನು ಯಾವಯಾವ ಭಾವಗಳಲ್ಲಿ ಕಾಣಬೇಕು, ಅದನ್ನು ಹೇಳು' ಎಂದು ಕೇಳಿಕೊಂಡನು.

ಅದಕ್ಕೆ ಶ್ರೀ ಭಗವಂತನಿಂತೆಂದನು: 'ಮಹಾಮುನಿಯಾದ ನಾರದನೆ, ನನ್ನ ಪ್ರಾದುರ್ಭಾವಗಳನ್ನು ಹೇಳುವೆನು ಕೇಳು; ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ರಾಮ, ಪರಶುರಾಮ, ಬಲರಾಮ, ಕೃಷ್ಣ, ಕಲ್ಕಿ– ಇವು ಹತ್ತು. ಮೊದಲು ನಾನು ಮತ್ಸ್ಯನಾಗಿ ಪ್ರಜೆಗಳನ್ನು ಸ್ಥಾಪಿಸುವೆನು. ಮಹಾಸಾಗರದಲ್ಲಿ ಮುಳುಗಿದ್ದ ಲೋಕಗಳನ್ನೂ ವೇದಗಳನ್ನೂ ಉದ್ಧರಿಸುವೆನು. ಮಗನೆ, ಕೂರ್ಮರೂಪವು ನನ್ನ ಎರಡನೆಯ ಪ್ರಾದುರ್ಭಾವವು. ಆ ರೂಪದಿಂದ ನಾನು ಮಂದರಪರ್ವತವನ್ನು ಅಮೃತದ ಉತ್ಪತ್ತಿಗಾಗಿ ಧರಿಸುವೆನು. ಬಾರಾಕ್ರಾಂತವಾಗಿ ಸಮುದ್ರದಲ್ಲಿ ಮುಳುಗಿರುವ ಭೂಮಿಯನ್ನು ಸಕಲ ಪ್ರಾಣಿಗಳೊಡನೆ ಸಾಗರದ ಸುತ್ತುವಳೆಯದಿಂದ ಕೂಡಿರುವಂತೆ ತನ್ನ ಸ್ಥಾನಕ್ಕೆ ವರಾಹರೂಪದಿಂದ ತರುವೆನು. ಬಲದಿಂದ ಗರ್ವಿತನಾಗಿರುವ ಹಿರಣ್ಯಾಕ್ಷನೆಂಬ ದೈತ್ಯನನ್ನು ಕೊಲ್ಲುವೆನು. ಮತ್ತೆ ನಾರಸಿಂಹಶರೀರವನ್ನು ಧರಿಸಿ ಯಜ್ಞನಾಶಕನಾದ ಹಿರಣ್ಯಕಶಿಪುವನ್ನು ದೇವತೆಗಳ ಕಾರ್ಯಕ್ಕೆಂದು ಕೊಲ್ಲುವೆನು. ವಿರೋಚನನ

ಮಗನಾದ ಬಲವಂತನಾದ ಬಲಿಯು ದೇವಾಸುರರಾಕ್ಷಸರೇ ಮೊದಲಾದ ಯಾರಿಗೂ ವಧ್ಯನಾಗದೆ ಇರುವನು. ಅವನು ಇಂದ್ರನನ್ನು ಕೂಡ ತನ್ನ ರಾಜ್ಯದಿಂದ ಚ್ಯುತಿಗೊಳಿಸುವನು. ಅವನು ತ್ರೈಲೋಕ್ಯವನ್ನು ಅಪಹರಿಸಿ ಇಂದ್ರನನ್ನು ಕೂಡ ವಿಮುಖನನ್ನಾಗಿ ಮಾಡಲಾಗಿ ಅದಿತಿಯಲ್ಲಿ ಕಶ್ಯಪನಿಂದ ಹನ್ನೆರಡನೆಯ ಪುತ್ರನ ರೂಪದಿಂದ ಜನಿಸುವೆನು. (ಜಟಾಧಾರಿಯಾಗಿ ಯಜ್ಞದ ಸದಸ್ಸಿಗೆ ಹೋಗಿ ಎಲ್ಲರೂ ಸ್ತೋತ್ರಮಾಡುತ್ತಿರಲು ಯಜ್ಞದ ಸ್ತುತಿಯನ್ನು ಮಾಡುವೆನು.) ಆ ಬಲಿಯು ಅದನ್ನು ಕೇಳಿ ಪ್ರೀತನಾಗಿ 'ಏನು ಬೇಡುವೆ, ಕೇಳಿಕೊ' ಎನ್ನಲು ಮೂರು ಹೆಜ್ಜೆ ಭೂಮಿಮಾತ್ರವು ಸಾಕೆಂದು ಮಹಾಸುರನಿಗೆ ಉತ್ತರವನ್ನೀಯುವೆನು. ಮಂತ್ರಿಗಳು ಬೇಡವೆಂದರೂ ಅವನು ಅದನ್ನು ಕೊಡಲು ಮೂರು ಹೆಜ್ಜೆಗಳಿಂದ ಸಮುದ್ರಪರ್ಯಂತವಾದ ಜಗತ್ತೆಲ್ಲವನ್ನೂ ಆಕ್ರಮಿಸಿ ವಶವಾದ ಆಧಿಪತ್ಯವನ್ನು ಅಮಿತ ತೇಜಸ್ವಿಯಾದ ಇಂದ್ರನಿಗೆ ಕೊಡುವೆನು; ದೇವತೆಗಳನ್ನು ಅವರವರ ಸ್ಥಾನದಲ್ಲಿ ಸ್ಥಾಪಿಸುವೆನು. ದೇವತೆಗಳಿಗೆಲ್ಲರಿಗೂ ಅವಧ್ಯನಾದ ಬಲಿಯನ್ನು ಪಾತಾಳಕ್ಕಿಳಿಸುವೆನು. ತ್ರೇತಾಯುಗದಲ್ಲಿ ಭೃಗುಕುಲಶ್ರೇಷ್ಠನಾದ ರಾಮನಾಗಿ ತೋರಿಕೊಳ್ಳುವೆನು. ಕ್ಷತ್ರಕುಲವನ್ನೇ ಸೈನ್ಯವಾಹನಾದಿಗಳ ಸಮೇತವಾಗಿ ನಾಶಗೊಳಿಸುವೆನು. ತ್ರೇತದ್ವಾಪರಗಳ ಸಂಧ್ಯಂಶವು ಪ್ರಾಪ್ತವಾಗಲು ನಾನು ಜಗತ್ಪತಿಯಾದ ದಾಶರಥಿ ರಾಮನಾಗುವೆನು. ತ್ರಿತನ ಶಾಪದಿಂದ ಪ್ರಜಾಪತಿಯ ಮಕ್ಕಳಾದ ಏಕತ, ದ್ವಿತ- ಎಂಬ ಋಷಿಗಳು ವಾನರತ್ವವನ್ನು ಪಡೆಯುವರು; ಅವರ ವಂಶದಲ್ಲಿ ಹುಟ್ಟಿದ ಕಪಿಗಳು ಮಹಾಬಲರೂ ಮಹಾವೀರರೂ ಇಂದ್ರಸಮಾನವಾದ ಪರಾಕ್ರಮವುಳ್ಳವರೂ ಆಗಿದ್ದು, ಎಲೈ ದ್ವಿಜನೆ, ನಾನು ಮಾಡುವ ದೇವತಾಕಾರ್ಯಕ್ಕೆ ಸಹಾಯಕರಾಗುವರು. ಆಗ ಪುಲಸ್ತ್ಯಕುಲಕ್ಕೆ ಕಲಂಕನಾಗಿರುವ ರಾವಣನೆಂಬ ಘೋರನಾದ ರಕ್ಷಃಪತಿಯನ್ನು ಸಂಹಾರ ಮಾಡುವೆನು. ದ್ವಾಪರಕಲಿಗಳ ಸಂಧಿಯಕೊನೆಯಲ್ಲಿ ಕಂಸನ ವಧೆಗಾಗಿ ಮಧುರೆಯಲ್ಲಿ ನನ್ನ ಪ್ರಾದುರ್ಭಾವವಾಗುವದು. (ಕಂಸ, ಕೇಶಿ, ಕಾಲ, ಅರಿಷ್ಟನೆಂಬ ಮಹಾವೀರ್ಯನಾದ ಚಾಣೂರ, ಮಹಾಬಲಶಾಲಿ ಯಾದ ಮುಷ್ಟಿಕ, ಪ್ರಲಂಬ, ವೃಷಭರೂಪಿಯಾದ ಧೇನುಕ- ಇವರೆಲ್ಲರನ್ನೂ ಸಂಹರಿಸುವೆನು. ಆ ಬಳಿಕ ಗೋಕುಲದಲ್ಲಿ ಗೋಗಳಿಗಾಗಿ ಏಳು ದಿವಸಗಳ ಪರ್ಯಂತ ಇಂದ್ರನ ಮಳೆಯಿಂದ

ರಕ್ಷಿಸುವುದಕ್ಕಾಗಿ ಮಹಾಗಿರಿಯನ್ನು ಧರಿಸಿರುವೆನು. ಆ ಬಳಿಕ ಮಳೆ ನಿಂತಮೇಲೆ ಇಂದ್ರನೊಡನೆ ಸಂವಾದವನ್ನೂ ಮಾಡುವೆನು). ಅಲ್ಲಿ ನಾನು ಬಹಳ ದೇವಕಂಟಕರಾದ ದಾನವರನ್ನು ಕೊಂದು ಕುಶಸ್ಥಲಿಯನ್ನು ದ್ವಾರಕಾಪುರಿಯಾಗಿ ಮಾಡಿಕೊಳ್ಳುವೆನು. ಅಲ್ಲಿ ವಾಸಮಾಡಿಕೊಂಡಿದ್ದು ಅದಿತಿಗೆ ಅಪ್ರಿಯವಾದದ್ದನ್ನು ಮಾಡುವ ನರಕನನ್ನೂ, ಮುರನನ್ನೂ ಪೀಠನೆಂಬ ದಾನವನನ್ನೂ ಸಂಹರಿಸುವೆನು; ನಾನಾಧನ ಸಹಿತವಾಗಿ ರಮ್ಯವಾದ ಪ್ರಾಗ್ಜ್ಯೋತಿಷ ಪುರವನ್ನು – ಆ ದಾನವರನ್ನು ಕೊಂದ ಬಳಿಕ ಕುಶಸ್ಥಲಿಗೆ ಕೊಂಡೊಯ್ಯುವೆನು. (ಓತಿಕೇತದ ಜನ್ಮವನ್ನು ಪಡೆದ ನೃಗನನ್ನು ಶಾಪವಿಮುಕ್ತನಾಗಿ ಮಾಡುವೆನು. ಮೊಮ್ಮಗನ ನಿಮಿತ್ತದಿಂದ ಶೋಣೀತಪುರಕ್ಕೆ ಹೋಗಿ ಬಾಣಾಸುರನೊಡನೆ ಮಹಾಯುದ್ಧವನ್ನು ಮಾಡುವೆನು.) ಲೋಕನಮಸ್ಕೃತನಾದ ಮಹೇಶ್ವರ, ಮಹಾಸೇನ– ಎಂಬ ಬಾಣಾಸುರಮಿತ್ರರಾದ ದೇವತೆಗಳನ್ನು ಸೋಲಿಸುವೆನು. ಬಳಿಕ ಬಲಿಯ ಮಗನಾದ ಸಹಸ್ರಬಾಹುವಾದ ಬಾಣನನ್ನು ಜಯಿಸಿ, ಸೌಭನಗರಿಯಲ್ಲಿರುವವರೆಲ್ಲರನ್ನೂ ನಾಶಗೊಳಿಸುವೆನು. ದ್ವಿಜೋತ್ತಮನೆ, ಗರ್ಗರ ತೇಜಸ್ಸಿನಿಂದ ಕೂಡಿರುವ ಕಾಲಯವನನ ವಧೆಯೂ ನನ್ನಿಂದಲೇ ಆಗುವದು. ಎಲ್ಲಾ ರಾಜರುಗಳಿಗೂ ವಿರೋಧಿಯಾದ ಬಲಿಷ್ಠನಾದ ಜರಾಸಂಧನೆಂಬ ಅಸುರನು ಗಿರಿವ್ರಜದಲ್ಲಿ ದೊರೆಯಾಗಿರುವನು. ನನ್ನ ಬುದ್ಧಿಯ ಪ್ರಭಾವದಿಂದ ಅವನ ವಧೆಯೂ ಆಗುವದು. ಧರ್ಮಪುತ್ರನ ಯಜ್ಞದಲ್ಲಿ ಶಿಶುಪಾಲನನ್ನು ವಧಿಸುವೆನು. ಭೂಮಿಯಲ್ಲಿರುವ ಎಲ್ಲಾ ಬಲಶಾಲಿಗಳಾದ ರಾಜರುಗಳು ಸಂಗತರಾಗಿರುವಲ್ಲಿ ನನಗೆ ಇಂದ್ರನ ಮಗನಾದ ಅರ್ಜುನನೊಬ್ಬನು ಸಹಾಯಕನಾಗಿರುವನು. ಆಮೇಲೆ ತಮ್ಮಂದಿರಿಂದೊಡಗೂಡಿದ ಯುಧಿಷ್ಠಿರನನ್ನು ಅವನ ರಾಜ್ಯದಲ್ಲಿ ಸ್ಥಾಪಿಸುವೆನು. ಈಶ್ವರಸ್ವರೂಪರಾದ ನರನಾರಾಯಣ ಋಷಿಗಳಿಬ್ಬರೂ ಸೇರಿ ಲೋಕಕಾರ್ಯಾರ್ಥವಾಗಿ ಕ್ಷತ್ರಿಯಕುಲವನ್ನು ಸುಟ್ಟು ಹಾಕುತ್ತಿದಾರೆ– ಎಂದು ಜನರು ಆಡಿಕೊಳ್ಳುವರು. ಭೂಮಿಯ ಭಾರವನ್ನು ಇಚ್ಛೆಯಿಂದ ಇಳಿಸಿ, ಸರ್ವಸಾತ್ತ್ವತಮುಖ್ಯರ ದ್ವಾರಕೆಯ, ಮತ್ತು ನನ್ನ ಜ್ಞಾತಿಗಳೆಲ್ಲರ ವಿನಾಶವನ್ನು ಮಾಡುವೆನು. ಹೀಗೆ ಚತುರ್ಮೂರ್ತಿಧರನಾದ ನಾನು ಅಪರಿಮಿತ ವಾದ ಕರ್ಮಗಳನ್ನು ಮಾಡಿ ಬ್ರಹ್ಮಸತ್ಕೃತವಾದ ಲೋಕಗಳಿಗೆ ತೆರಳುವೆನು.

ಎಲೈ ದ್ವಿಜೋತ್ತಮನೆ, ಹಂಸ, ಕೂರ್ಮ, ಮತ್ಸ್ಯ, ವರಾಹ, ನಾರಸಿಂಹ, ವಾಮನ, ರಾಮ, ದಾಶರಥಿರಾಮ, ಸಾತ್ವತ, ಕಲ್ಕಿ– ಇವೆಲ್ಲ ನನ್ನ ಪ್ರಾದುರ್ಭಾವ ಗಳು. ವೇದವು ನಷ್ಟವಾಗಲು ಮತ್ತೆ ನಾನು ಅದನ್ನು ಉದ್ಧರಿಸಿರುವೆನು; ಹೀಗೆ ಕ್ರತುಯುಗದಲ್ಲಿ ವೇದಗಳನ್ನೂ ಶ್ರುತಿಗಳನ್ನೂ ಜಗತ್ತಿಗೆ ಕೊಟ್ಟಿರುವೆನು. ನನ್ನ ಉತ್ತಮಪ್ರಾಧುರ್ಭಾವಗಳು ಎಷ್ಟೋ ಹಿಂದಕ್ಕೆ ಆಗಿರುವವು; ಅವು ಲೋಕಕಾರ್ಯ ಗಳನ್ನು ಮಾಡಿ ಮತ್ತೆ ತಮ್ಮ ಪ್ರಕೃತಿಯನ್ನು ಸೇರಿಕೊಂಡಿರುತ್ತವೆ.

ಇಂಥ ನನ್ನ ದರ್ಶನವು ಬ್ರಹ್ಮನಿಗೂ ಆಗಿರುವುದಿಲ್ಲ; ಅಂಥ ದರ್ಶನವು ಏಕಾಂತಬುದ್ಧಿಯುಕ್ತನಾದ ನಿನಗೆ ದೊರಕಿರುತ್ತದೆ. ಇದೊ, ಹಿಂದಿನ, ಮುಂದಿನ ಘಟನೆಯೆಲ್ಲವನ್ನೂ ಸರಹಸ್ಯವಾಗಿ ಭಕ್ತನಾದ ನಿನಗೆ ಹೇಳಿರುವೆನು.

* * * * *

## 7. ಪಾಂಚರಾತ್ರಶಾಸ್ತ್ರದ ಗುರುಪರಂಪರೆ, ಫಲಶ್ರುತಿ*

ಭೀಷ್ಮರಿಂತೆಂದರು: "ಎಲೈ ರಾಜನೆ, ವಿಶ್ವಮೂರ್ತಿಧರನಾದ ಅವ್ಯಯನಾದ ಆ ಭಗವಂತನು ಈ ರೀತಿಯಾಗಿ ನಾರದನಿಗೆ ಉಪದೇಶಿಸಿ ಅಲ್ಲಿಯೇ ಮಾಯವಾದನು. ನಾರದನಾದರೋ ಭಗವಂತನ ಅನುಗ್ರಹವನ್ನು ಪಡೆದುಕೊಂಡು ನರನಾರಾಯಣರನ್ನು ದರ್ಶನಮಾಡುವದಕ್ಕೋಸ್ಕರ ಬದರಿಕಾಶ್ರಮಕ್ಕೆ ಹೊರಟನು. ಚತುರ್ವೇದಗಳ ಸಾರಭೂತವಾದ ಪಾಂಚರಾತ್ರವೆಂಬ ಹೆಸರುಳ್ಳ ಸಾಂಖ್ಯಯೋಗಗಳಿಂದುಂಟಾದ, ಶ್ರೀಮನ್ನಾರಾಯಣನ ಮುಖದಿಂದ ಹೊರಬಂದ ಈ ರಹಸ್ಯವಿದ್ಯೆಯನ್ನು ನಾರದನು ಮತ್ತೆ ಬ್ರಹ್ಮಸಭೆಯಲ್ಲಿ ಎಲ್ಲರಿಗೂ ತಾನು ಕಂಡಂತೆ ಮತ್ತು ಕೇಳಿದಂತೆ ಶ್ರವಣಮಾಡಿಸಿದನು."

ಆಗ ಯುಧಿಷ್ಠಿರನು ಇಂತೆಂದನು: "ಎಲೈ ಪಿತಾಮಹನೆ, ಈ ಭಗವಂತನ ಮಹಿಮೆಯು ಅತ್ಯಾಶ್ಚರ್ಯಯುಕ್ತವಾಗಿದೆ. ಆದರೆ ನಾರದನು ಬ್ರಹ್ಮಸಭೆಯಲ್ಲಿ ಈ ವೃತ್ತಾಂತವನ್ನು ಶ್ರವಣಮಾಡಿಸಿದುದರ ರಹಸ್ಯವೇನು? ಭಗವಂತನ ತತ್ತ್ವವು

* ಸಂಪುಟ 36; ಸಂಚಿಕೆ 11; ಜುಲೈ 1967

ಆ ಬ್ರಹ್ಮನಿಗೆ ತಿಳಿದಿರಲಿಲ್ಲವೆ? ಬ್ರಹ್ಮನೆಂಬವನು ಪರಮಾತ್ಮನಿಂದ ಹುಟ್ಟಿದ ಪ್ರಥಮಪ್ರಜೆಯಲ್ಲವೆ? ಹೀಗಿರುವಾಗ ಅಪಾರತೇಜಸ್ವಿಯಾದ ಆ ಭಗವಂತನ ಪ್ರಭಾವವನ್ನು ಬ್ರಹ್ಮನು ತಿಳಿಯದೆ ಇದ್ದುದು ಹೇಗೆ? ಇದನ್ನು ನನಗೆ ವಿವರಿಸಬೇಕು."

ಆಗ ಭೀಷ್ಮರಿಂತೆಂದರು: "ಎಲೈ ರಾಜೇಂದ್ರನೆ, ಕೇಳು; ಈ ಅನಾದಿಸಂಸಾರ ಪ್ರವಾಹದಲ್ಲಿ ಈವರೆಗೆ ಎಷ್ಟೋ ಮಹಾಕಲ್ಪಗಳೂ ಸೃಷ್ಟಿಪ್ರಲಯಗಳೂ ಕಳೆದು ಹೋಗಿವೆ. ಒಂದೊಂದು ಕಲ್ಪದಲ್ಲಿಯೂ ಬ್ರಹ್ಮನ ಸೃಷ್ಟಿಯು ಮೊದಲಾಗುತ್ತದೆ. ಆದ್ದರಿಂದ ಪ್ರಥಮಜನಾದ ಹಿರಣ್ಯಗರ್ಭನಿಗೆ ಆ ಭಗವಂತನ ಮಹಿಮೆಯು ತಿಳಿದಿರಲಿಲ್ಲವೆಂದರ್ಥವಲ್ಲ. ತನ್ನ ಉತ್ಪತ್ತಿಗೆ ಕಾರಣವಾದ ನಾರಾಯಣ ತತ್ತ್ವವನ್ನು ಎಲ್ಲರಿಗಿಂತಲೂ ಅಧಿಕವಾಗಿ ಚೆನ್ನಾಗಿ ಬಲ್ಲವನೇ ಆ ಚತುರ್ಮುಖಬ್ರಹ್ಮನು. ಹೀಗಿದ್ದರೂ ನಾರದನು ಬ್ರಹ್ಮಸಭೆಯಲ್ಲಿ ನೆರೆದಿದ್ದ ಉಳಿದ ಸಿದ್ಧರೇ ಮುಂತಾದ ಭಕ್ತರಿಗೂ ಋಷಿಗಳಿಗೂ ತಿಳಿಯಲೆಂದು ಈ ಶಾಸ್ತ್ರವನ್ನು ಶ್ರವಣಮಾಡಿಸಿದನು. ಆ ಸಿದ್ಧಮಹಾಮುನಿಗಳಿಂದ ಸೂರ್ಯನು ಈ ವಿದ್ಯೆಯನ್ನು ಸ್ವೀಕರಿಸಿದನು. ಅನಂತರ ಲೋಕಗಳನ್ನೆಲ್ಲ ತಪಿಸುವ ಆ ಸೂರ್ಯನು ತನ್ನ ಸಂಚಾರಕಾಲದಲ್ಲಿ ಯಾವಾಗಲೂ ತನ್ನನ್ನೇ ಹಿಂಬಾಲಿಸುತ್ತಿರುವ ಶುದ್ಧಮನಸ್ಕರಾದ ಅರವತ್ತಾರುಸಾವಿರಮಹರ್ಷಿಗಳಿಗೆ (ವಾಲಖಿಲ್ಯರಿಗೆ) ಈ ವಿದ್ಯೆಯನ್ನು ಉಪದೇಶಿಸಿದನು. ಮಹಾತ್ಮರಾದ ಆ ಮಹರ್ಷಿಗಳಿಂದ ಮೇರುಪರ್ವತದಲ್ಲಿ ಸಭೆಸೇರಿದ್ದ ದೇವತೆಗಳು ಈ ಶಾಸ್ತ್ರವನ್ನು ಗ್ರಹಿಸಿದರು. ಅಸಿತನೆಂಬ ಬ್ರಾಹ್ಮಣನು ದೇವತೆಗಳಿಂದ ಈ ವಿದ್ಯೆಯನ್ನು ಸ್ವೀಕರಿಸಿ ಪಿತೃಗಳಿಗೆ ಶ್ರವಣಮಾಡಿಸಿದನು. ಪಿತೃದೇವತೆಗಳಿಂದ ನಮ್ಮ ತಂದೆಯಾದ ಶಂತನುವು ಇದನ್ನು ಕಲಿತು ನನಗೆ ಹೇಳಿಕೊಟ್ಟನು. ನಾನು ನಿನಗೆ ಈಗ ಉಪದೇಶಿಸಿರುತ್ತೇನೆ. ದೇವತೆಗಳಾಗಲಿ ಮುನಿಗಳಾಗಲಿ ಯಾರು ಈ ಶಾಸ್ತ್ರವನ್ನು ಶ್ರವಣಮಾಡಿದರೋ ಅವರುಗಳು ಪರಮಾತ್ಮನನ್ನೇ ಪೂಜಿಸಿದವರಾದರು. ಈ ಆರ್ಷೇಯವಾದ ಉಪಾಖ್ಯಾನವನ್ನು ವಾಸುದೇವನ ಭಕ್ತನಲ್ಲದವನಿಗೆ ಹೇಳಬಾರದು. ಎಲೈ ರಾಜೇಂದ್ರನೆ, ಈವರೆಗೆ ನನ್ನಿಂದ ನೀನು ಕೇಳಿರುವ ಬೇರೆ ಯಾವ ಕಥೆಗಳಿವೆಯೋ ಅವೆಲ್ಲದರ ಸಾರವೇ ಇದೆಂದು ತಿಳಿ. ಹಿಂದೆ ದೇವಾಸುರರು ಕೂಡಿ ಸಮುದ್ರಮಥನಮಾಡಿ ಅಮೃತವನ್ನು

ಪಡೆದಂತೆಯೇ ವಿಪ್ರರುಗಳಿಂದ ವಿಚಾರಮಾಡಿ ತಿಳಿಯಲ್ಪಟ್ಟ ಸಾರಭೂತವಾದ ನಾರಾಯಣಕಥಾಮೃತವೇ ಇದಾಗಿದೆ.

ಈ ಉಪಾಖ್ಯಾನವನ್ನು ಯಾವನು ಪಠನಮಾಡುವನೋ ಮತ್ತು ಯಾವನು ಶ್ರವಣಮಾಡುವನೋ ಅವನು ಏಕಾಂತಭಾವವನ್ನು ಹೊಂದಿ ಏಕಾಂತಿಭಕ್ತರಲ್ಲಿ ಸೇರಿಹೋಗಿ ಶ್ವೇತವೆಂಬ ಮಹಾದ್ವೀಪವನ್ನು ಪಡೆದು ಚಂದ್ರನಂತೆ ಕಾಂತಿಯುಳ್ಳವನಾಗಿ ಸಹಸ್ರಾರ್ಚಿಯಾದ ತೇಜೋಮಯನಾದ ಭಗವಂತನನ್ನೇ ಪ್ರವೇಶಿಸುವನು. ಇದರಲ್ಲಿ ಸಂಶಯವಿಲ್ಲ. ಆರ್ತನಾದವನು ಕೇಳಿದರೆ ಸಂಕಟದಿಂದ ಪಾರಾಗುವನು. ರೋಗಿಯಾದವನು ಶ್ರವಣ ಮಾಡಿದರೆ ನೀರೋಗಿಯಾಗುವನು. ಜಿಜ್ಞಾಸುವು ತನ್ನ ಇಷ್ಟಾರ್ಥಗಳನ್ನೂ ಭಕ್ತನು ಸದ್ಗತಿಯನ್ನೂ ಹೊಂದುವರು. ಎಲೈ ರಾಜೇಂದ್ರನೆ, ನೀನೂ ಯಾವಾಗಲೂ ಆ ಪುರುಷೋತ್ತಮನನ್ನು ಅರ್ಚಿಸುವವನಾಗು, ಅವನೇ ತಾಯಿಯು, ಅವನೇ ತಂದೆಯು, ಅವನೇ ಜಗದ್ಗುರುವು. ಎಲೈ ಯುಧಿಷ್ಠಿರನೆ, ಬ್ರಹ್ಮಣ್ಯದೇವನೂ ಮಹಾಬುದ್ಧಿಯೂ ಸನಾತನನೂ ಆದ ಆ ದೇವನು ಸಂತುಷ್ಟನಾಗಿ ನಿನಗೆ ಅನುಗ್ರಹಿಸಲಿ!"

ವೈಶಂಪಾಯನರಿಂತೆಂದರು: "ಎಲೈ ಜನಮೇಜಯನೆ, ಧರ್ಮರಾಜನು ಈ ಕಥೆಯನ್ನು ಕೇಳಿ ನಾರಾಯಣತತ್ಪರನಾದನು. ಅವನ ಸಹೋದರರೂ ಅವನನ್ನೇ ಅನುಸರಿಸಿದರು. ತಮ್ಮೆಲ್ಲರಿಗೂ ಗುರುವಾದ, ಅಂತರಿಕ್ಷಮಾರ್ಗದಿಂದ ಕ್ಷೀರಸಮುದ್ರಕ್ಕೆ ಹೋಗಿ ನಾರಾಯಣನನ್ನು ಅರ್ಚಿಸಿ ಬಂದ ಕೃಷ್ಣದ್ವೈಪಾಯನ ಋಷಿಯನ್ನು ಅವರು ಸ್ತುತಿಸಿದರು.

* * * * *

## 8. ಭಗವಂತನು ಬ್ರಹ್ಮಾದಿಗಳಿಗೆ ಉಪದೇಶಿಸಿದ ಪ್ರವೃತಿನಿವೃತ್ತಿಧರ್ಮಗಳ ರಹಸ್ಯ*

### (1)

ಸೌತಿಯು ಇಂತೆಂದನು: "ಶೌನಕಾದಿಗಳಿರಾ, ವೈಶಂಪಾಯನನು ಹೇಳಿದ್ದೆಲ್ಲವನ್ನೂ ನಿಮಗೆ ತಿಳಿಸಿರುತ್ತೇನೆ. ನೀವುಗಳೆಲ್ಲರೂ ತಪಸ್ಸನ್ನು ಆಚರಿಸಿರುವವರು, ಎಲ್ಲರೂ ವ್ರತಾನುಷ್ಠಾನವನ್ನು ಮಾಡಿದವರು. ಎಲ್ಲರೂ ವೇದವಿದರು, ನೈಮಿಷಾರಣ್ಯವಾಸಿಗಳು, ಶೌನಕನ ಮಹಾಸತ್ರವನ್ನು ನೋಡುವದಕ್ಕೆ ಬಂದ ದ್ವಿಜೋತ್ತಮರು, ಶಾಶ್ವತನಾದ ಪರಮೇಶ್ವರನನ್ನು ಸುಹುತಯಜ್ಞಗಳಿಂದ ಆರಾಧಿಸಿದಿರಿ. ಇದು ಪಾರಂಪರ್ಯದಿಂದ ಬಂದದ್ದು; ನಮ್ಮ ತಂದೆಯು ಪೂರ್ವದಲ್ಲಿ ನನಗೆ ಹೇಳಿದ್ದು."

ಆಗ ಶೌನಕರಿಂತೆಂದರು: "ಎಲೈ ಸೌತಿಯೆ, ಪೂಜ್ಯನಾದ ದೇವದೇವನಾದ ಜಗತ್ಪ್ರಭುವಾದ ಭಗವಂತನು ಯಜ್ಞಗಳಲ್ಲಿ ಪ್ರಧಾನದೇವತೆಯಾಗಿ ಹವಿಸ್ಸುಗಳನ್ನು ಸ್ವೀಕರಿಸಿದುದು ಹೇಗೆ? ಯಜ್ಞಗಳನ್ನು ಧರಿಸುವವನಾದದ್ದು ಹೇಗೆ? ವೇದವೇದಾಂಗಗಳನ್ನು ಬಲ್ಲ ಈ ಭಗವಂತನು ಜ್ಞಾನವೈರಾಗ್ಯರೂಪನಾದ ನಿವೃತ್ತಿ ಧರ್ಮವನ್ನು ಏಕೆ ಆಶ್ರಯಿಸಿದನು? ದೇವತೆಗಳನ್ನು ಪ್ರವೃತ್ತಿಧರ್ಮರೂಪವಾದ ಯಜ್ಞಗಳಲ್ಲಿ ಭಾಗಾರ್ಹರಾಗುವಂತೆ ಹೇಗೆ ಮಾಡಿದನು? ದೇವತೆಗಳಾದರೋ ಕರ್ಮದಿಂದ ಬುದ್ಧಿಯನ್ನು ಹಿಂತಿರುಗಿಸಿ ಕೊಂಡು ನಿವೃತ್ತಿಧರ್ಮವನ್ನು ಹೇಗೆ ಅನುಸರಿಸಿದರು? ಈ ಸಂಶಯಗಳನ್ನು ನಾರಾಯಣನ ಕಥೆಗಳನ್ನು ಕೇಳಿ ಬಲ್ಲವನಾಗಿರುವ ನೀನು ಪರಿಹರಿಸುವವನಾಗು."

ಹೀಗೆನ್ನಲು ಸೂತರ ಪುತ್ರನಾದ ಆ ಮುನಿಯು "ಎಲೈ ಶೌನಕನೆ, ಕೇಳು. ಈ ವಿಚಾರದಲ್ಲಿ ಹಿಂದೆ ಜನಮೇಜಯನು ವೈಶಂಪಾಯನರನ್ನು ಪ್ರಶ್ನೆಮಾಡಿ ಏನು ತಿಳಿದುಕೊಂಡನೋ ಅದನ್ನು ನಿನಗೆ ಅನುವಾದಮಾಡಿ ಹೇಳುವೆನು."

ಜನಮೇಜಯನಿಂತೆಂದನು: "ಎಲೈ ಪೂಜ್ಯನಾದ ದ್ವಿಜನೆ, ಬ್ರಹ್ಮನಿಂದ

---

* ಸಂಪುಟ 36; ಸಂಚಿಕೆ 12; ಆಗಸ್ಟ್ 1967

ಹಿಡಿದು ಸ್ಥಾವರಾಂತವಾದ ಪ್ರಾಣಿಗಳುಳ್ಳ ಈ ಎಲ್ಲಾ ಲೋಕಗಳಲ್ಲಿರುವ ದೇವಮಾನವದಾನವಾದಿಗಳು ಅಭ್ಯುದಯರೂಪವಾದ ಕ್ರಿಯೆಗಳಲ್ಲಿಯೇ ಆಸಕ್ತರಾಗಿರುವದು ಕಂಡುಬರುತ್ತಿದೆ. ನೀನು ಉಪದೇಶಮಾಡುವಾಗ ಮೋಕ್ಷವೇ ಪರಮಸುಖವೆಂದೂ ನಿತ್ಯವೆಂದೂ ತಿಳಿಸಿರುತ್ತೀಯೆ. ಯಾರು ಇಲ್ಲಿ ಬ್ರಹ್ಮವನ್ನು ಅರಿತು ಮುಕ್ತರಾಗುವರೋ ಅವರು ಸಹಸ್ರಾರ್ಚಿಯಾದ ದೇವನನ್ನು ಪ್ರವೇಶಿಸುವರೆಂದು ಕೇಳಿದ್ದೇನೆ. ಆದರೆ ಸನಾತನವಾದ ಈ ಮೋಕ್ಷಧರ್ಮ ವೆಂಬುದು ಅನುಷ್ಠಾನ ಮಾಡಲು ಕಷ್ಟತರವಾಗಿದೆ. ಆದ್ದರಿಂದಲೇ ದೇವತೆಗಳೂ ಕೂಡ ಈ ಧರ್ಮವನ್ನು ಬಿಟ್ಟು ಯಜ್ಞಗಳಲ್ಲಿ ಹವಿರ್ಭಾಗಗಳನ್ನು ಆಶ್ರಯಿಸಿದವರಾದರು. ಚತುರ್ಮುಖ ಬ್ರಹ್ಮನಾದ ಹಿರಣ್ಯಗರ್ಭನು, ರುದ್ರನು, ಬಲಭಿದನಾದ ಇಂದ್ರನು, ಸೂರ್ಯನು, ನಕ್ಷತ್ರಗಳಿಗೆ ಅಧಿಪತಿಯಾದ ಚಂದ್ರನು, ವಾಯುದೇವನು, ಅಗ್ನಿಯು, ವರುಣನು, ಆಕಾಶವು– ಇವರೇ ಮುಂತಾದ ಎಲ್ಲಾ ದೇವತೆಗಳೂ ತಮಗೆ ನಿರ್ಮಿತವಾದ ಪ್ರಲಯವನ್ನು ಅರಿತಿರುವದಿಲ್ಲ. ಆದ್ದರಿಂದಲೇ ಇವರುಗಳು ಕಾಲಪರಿಮಾಣಕ್ಕೆ ವಶವಾಗಿರುವ ಲೋಕಗಳನ್ನು ಹೊಂದಿ ಅಕ್ಷರವೂ ಅವ್ಯಯವೂ ಆದ ಮೋಕ್ಷಸ್ವರೂಪವನ್ನು ಪಡೆಯದೆ ಇರುವರು. ಕರ್ಮಿಗಳ ಮಾರ್ಗದಲ್ಲಿ ಇದೊಂದು ದೊಡ್ಡ ದೋಷವು. ದೇವತೆಗಳು ಯಜ್ಞದಲ್ಲಿ ಪೂಜಿಸಲ್ಪಡುವರೇಕೆ? ಅವರುಗಳು ಯಜ್ಞಭಾಗಾರ್ಹರಾದುದು ಹೇಗೆ? ಹೀಗೆ ಯಜ್ಞಗಳಲ್ಲಿ ಭಾಗವನ್ನು ಸ್ವೀಕರಿಸುವ ದೇವತೆಗಳು ತಾವು ಮಾಡುವ ಯಜ್ಞಗಳಲ್ಲಿ ಯಾರಿಗೆ ಭಾಗವನ್ನು ಸಮರ್ಪಿಸುತ್ತಾರೆ? ಈ ಸಂಶಯಗಳು ನನಗೆ ಮನಸ್ಸಿನಲ್ಲಿ ಕೊರೆಯುತ್ತಿವೆ. ನೀನು ಇತಿಹಾಸವನ್ನು ಹೇಳುವದರ ಮೂಲಕ ನನ್ನ ಸಂಶಯಗಳನ್ನು ಪರಿಹರಿಸುವವನಾಗು."

ಆಗ ವೈಶಂಪಾಯನರಿಂತೆಂದರು: "ಎಲೈ ರಾಜನೆ, ಬಹಳ ಗೂಢತಮವಾದ ಪ್ರಶ್ನೆಯನ್ನೇ ನೀನು ಕೇಳಿರುತ್ತೀಯೆ. ತಪಸ್ವಿಯಲ್ಲದವನೂ ವೇದಗಳನ್ನು ಅರಿಯದವನೂ ಪುರಾಣಗಳನ್ನು ತಿಳಿಯದೆ ಇರುವವನೂ ಈ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರವನ್ನು ಹೇಳಲಾರನು. ಒಳ್ಳೆಯದು, ನಾನು ಹಿಂದೆ ನನ್ನ ಗುರುವಾದ ಕೃಷ್ಣದ್ವೈಪಾಯನವ್ಯಾಸರನ್ನು ಕುರಿತು ಈ ಪ್ರಶ್ನೆಯನ್ನು ಕೇಳಿದ್ದೆನು. ಸಿದ್ಧಚಾರಣದಿಂದ ಸೇವಿತವಾದ ರಮ್ಯವಾದ ಗಿರಿಶ್ರೇಷ್ಠವಾದ ಮೇರುಪರ್ವತದಲ್ಲಿ

ವ್ಯಾಸಮಹಾಮುನಿಯು ಒಂದು ಬಾರಿ ತನ್ನ ಬಳಿಗೆ ಬಂದ ಶೌಚಾಚಾರ ಸಂಪನ್ನರಾದ, ಜಿತೇಂದ್ರಿಯರೂ ಕೋಪವೇ ಮೊದಲಾದ ದೋಷಗಳನ್ನು ಗೆದ್ದವರೂ ಆದ, ದಮಯುಕ್ತರಾದ ಸುಮಂತು, ಜೈಮಿನಿ, ದೃಢವ್ರತನಾದ ಪೈಲ, ನಾಲ್ಕನೆಯವನಾದ ನಾನು, ಐದನೆಯವನಾದ ಶುಕ– ಹೀಗೆ ಐದುಜನ ಶಿಷ್ಯರುಗಳಿಗೆ ಮಹಾಭಾರತವೇ ಐದನೆಯದಾಗುಳ್ಳ ವೇದಗಳನ್ನು ಅಧ್ಯಯನ ಮಾಡಿಸಿದನು. ವೇದಾಧ್ಯಯನ ಮಾಡುತ್ತಿದ್ದ ಅವರುಗಳಿಗೆ ಒಂದುಬಾರಿ ಇದೊ, ನೀನು ಕೇಳಿದ ಸಂಶಯವೇ ಉಂಟಾಯಿತಾದ್ದರಿಂದ ವ್ಯಾಸರು ಆ ಸಂಶಯಗಳಿಗೆ ಉತ್ತರಗಳನ್ನು ಕೊಟ್ಟರು. ಅಲ್ಲಿಂದ ನಾನು ಕೇಳಿದ್ದನ್ನೇ ನಿನಗೆ ಹೇಳುವೆನು."

ವ್ಯಾಸರಿಂತೆಂದರು: " ಕೇಳಿರಿ, ನಾನಾದರೋ ಬಹಳ ಕಠಿನತರವಾದ ದೊಡ್ಡ ತಪಸ್ಸನ್ನು ಕೈಗೊಂಡೆನು. ಭೂತಭವಿಷ್ಯದ್ವರ್ತಮಾನಕಾಲಗಳ ಎಲ್ಲಾ ವಿಷಯಗಳನ್ನೂ ಅರಿಯಬೇಕೆಂಬ ಆಶೆಯೇ ಈ ತಪಸ್ಸಿಗೆ ಕಾರಣವಾಗಿತ್ತು. ಹೀಗೆ ಇಂದ್ರಿಯನಿಗ್ರಹಪೂರ್ವಕವಾಗಿ ತಪಸ್ಸುಮಾಡಿದ ನನಗೆ ಕ್ಷೀರಸಮುದ್ರ ತೀರದಲ್ಲಿ ಶ್ರೀಮನ್ನಾರಾಯಣನ ಪ್ರಸಾದದಿಂದ ಈ ತ್ರೈಕಾಲಿಕಜ್ಞಾನವುಂಟಾಯಿತು. ನಿಮ್ಮಗಳ ಸಂಶಯವನ್ನು ಪರಿಹರಿಸಲು ಆ ಜ್ಞಾನವನ್ನು ಹೇಳುವೆನು. ಕಲ್ಪಾದಿಯಲ್ಲಿ ಜ್ಞಾನದೃಷ್ಟಿಯಿಂದ ನಾನು ಇದ್ದದ್ದು ಇದ್ದಂತೆ ಕಂಡುಕೊಂಡಿರುವದನ್ನು ವಿವರಿಸುವೆನು."

"ಸಾಂಖ್ಯಯೋಗಗಳನ್ನು ಬಲ್ಲ ಜನರು ಪರಮಾತ್ಮನೆಂದು ಯಾವನನ್ನು ಕರೆಯುವರೋ ಅವನು ತನ್ನ ಕರ್ಮದಿಂದಲೇ **ಮಹಾಪುರುಷ**ನೆಂಬ ಹೆಸರನ್ನು ಪಡೆಯುವನು. ಅವನಿಂದ ಹುಟ್ಟಿದ ಅವ್ಯಕ್ತವನ್ನು ಪ್ರಧಾನವೆಂದು ಬಲ್ಲವರು ಹೇಳುತ್ತಾರೆ. ಅವ್ಯಕ್ತದಿಂದ ಲೋಕಗಳ ನಿರ್ಮಾಣಕ್ಕಾಗಿ ಆ ಈಶ್ವರನಿಂದಲೇ ವ್ಯಕ್ತವು ಉಂಟಾಗುವದು. ಹೀಗೆ ವ್ಯಕ್ತತ್ವವನ್ನು ಪಡೆದ ತತ್ತ್ವವನ್ನೇ **ಅನಿರುದ್ಧ**ನೆಂದೂ ಮಹಾನಾತ್ಮನೆಂದೂ ಕರೆಯುವರು. ಇವನು ಸರ್ವತೇಜೋಮಯನಾಗಿದ್ದು ಪಿತಾಮಹನನ್ನು ಸೃಷ್ಟಿಮಾಡಿದನು. ಇವನನ್ನೇ ಅಹಂಕಾರನೆಂದೂ ಕರೆಯುವರು. ಈ ಅಹಂಕಾರನಿಂದ ಪೃಥಿವಿಯು, ವಾಯು, ಆಕಾಶ, ಅಪ್ಪು, ತೇಜಸ್ಸು– ಎಂಬ ಐದು ಮಹಾಭೂತಗಳು ಸೃಷ್ಟವಾದವು. ಹೀಗೆ ಸೃಷ್ಟಿಮಾಡಿದ ಮೇಲೆ ಅವುಗಳ ಗುಣಗಳನ್ನೂ ಆ ದೇವನು ಸೃಷ್ಟಿಮಾಡಿದನು. ಈ ಪಂಚಮಹಾಭೂತ

ಗಳಿಂದ ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ಮಹಾತ್ಮನಾದ ವಸಿಷ್ಠ, ಸ್ವಾಯಂಭುವ ಮನು– ಎಂಬ ಎಂಟುಜನ ಮೂರ್ತಿಮಂತರಾದ ಬ್ರಹ್ಮರುಗಳು ಉಂಟಾದರು. ಇವರೇ ಪ್ರಕೃತಿಗಳು. ಎಲ್ಲಾ ಲೋಕಗಳೂ ಇವರನ್ನೇ ಆಶ್ರಯಿಸಿಕೊಂಡಿವೆ. ಅನಂತರ ಲೋಕಪಿತಾಮಹನಾದ ಬ್ರಹ್ಮನು ವೇದಗಳು, ವೇದಾಂಗಗಳು, ಯಜ್ಞಗಳು, ಅವುಗಳ ಅವಯವಗಳು– ಇವುಗಳನ್ನು ಲೋಕಗಳ ಸಿದ್ಧಿಗಾಗಿ ಸೃಷ್ಟಿಸಿದನು. ಮೇಲೆಹೇಳಿದ ಎಂಟು ಪ್ರಕೃತಿಗಳಿಂದ ಈ ಜಗತ್ತೆಲ್ಲವೂ ಉಂಟಾಯಿತು; ಕ್ರೋಧಮೂರ್ತಿಯಾದ ರುದ್ರನು ಉಂಟಾದನು. ಅವನು ತನ್ನಂತೆಯೇ ಇರುವ ಬೇರೆ ಹತ್ತು ಜನರನ್ನು ಸೃಷ್ಟಿಸಿದನು. ಹೀಗೆ ರುದ್ರರು ಹನ್ನೊಂದುಮಂದಿಯಾದರು. ಇವರುಗಳೆಲ್ಲರೂ ವಿಕಾರಪುರುಷರು. ತಮ್ಮಿಂದ ಸೃಷ್ಟಿಸಲ್ಪಡುವ ಭೂತಗಳ ಅಪೇಕ್ಷೆಯಿಂದ ಪ್ರಕೃತಿಗಳೂ ಹೌದು. ಹೀಗೆ ಲೋಕವ್ಯಾಪಾರಕ್ಕಾಗಿ ಸೃಷ್ಟರಾದ ಎಲ್ಲರೂ ಬ್ರಹ್ಮನಬಳಿಗೆ ಬಂದರು. "ಪೂಜ್ಯನೆ, ಸಮರ್ಥನಾದ ನಿನ್ನಿಂದ ನಾವು ಸೃಷ್ಟಿಸಲ್ಪಟ್ಟಿರುವೆವಷ್ಟೆ! ನಾವು ಯಾರುಯಾರು ಯಾವಯಾವ ಅಧಿಕಾರದಲ್ಲಿರಬೇಕು? ಆ ಅಧಿಕಾರಗಳನ್ನು ನಾವು ಹೇಗೆ ನಡೆಸಬೇಕು? ಅಂಥ ಅಧಿಕಾರಗಳನ್ನು ನಡೆಸಲು ತಕ್ಕ ಬಲವನ್ನೂ ಅನುಗ್ರಹಿಸುವವನಾಗು" ಎನ್ನಲು ಆಗ ಬ್ರಹ್ಮನು ಮುಂದೆ ವಿವರಿಸುವಂತೆ ಆ ದೇವತೆಗಳನ್ನು ಕುರಿತು ಹೇಳಿದನು.

* * * * *

## 8. ಭಗವಂತನು ಬ್ರಹ್ಮಾದಿಗಳಿಗೆ ಉಪದೇಶಿಸಿದ ಪ್ರವೃತಿನಿವೃತ್ತಿಧರ್ಮಗಳ ರಹಸ್ಯ*

## (2)

ಆಗ ಬ್ರಹ್ಮನಿಂತೆಂದನು: ಎಲೈ, ದೇವತೆಗಳಿರಾ, ನೀವು ಸರಿಯಾಗಿಯೇ ನನಗೆ ಜ್ಞಾಪಿಸಿರುತ್ತೀರಿ. ನಿಮಗೆ ಮಂಗಳವಾಗಲಿ. ನಿಮಗೆ ಅಭೀಷ್ಟವಾದ ಈ ಚಿಂತೆಯೇ ನನಗೂ ಉಂಟಾಗಿದೆ. ಈ ಇಡೀ ಲೋಕತ್ರಯದ ಪರಿಗ್ರಹವನ್ನು ಹೇಗೆಮಾಡಬೇಕು? ನಿಮಗೂ ನಮಗೂ ಬಲಕ್ಷಯವು ಆಗದೆ ಹೇಗಿದ್ದೀತು?

* ಸಂಪುಟ 37; ಸಂಚಿಕೆ 1; ಸೆಪ್ಟೆಂಬರ್ 1967

ಎನಿಸಿದೆ. ಇಲ್ಲಿಂದ ನಾವೆಲ್ಲರೂ ಲೋಕಸಾಕ್ಷಿಯಾದ ಅವ್ಯಕ್ತನಾದ ಮಹಾಪುರುಷನ ಬಳಿಗೆ ಹೋಗೋಣ. ನಮಗೆ ಯಾವದು ಹಿತವೋ ಅದನ್ನು ಅವನು ಹೇಳುವನು. ಬ್ರಹ್ಮನು ಹೀಗೆನ್ನಲು ಆತನೊಡನೆ ಋಷಿಗಳೂ ದೇವತೆಗಳೂ ಲೋಕಹಿತಾರ್ಥಿಗಳಾಗಿ ಕ್ಷೀರಸಾಗರದ ಉತ್ತರದ ದಡಕ್ಕೆ ಹೋದರು. ಅವರು ಬ್ರಹ್ಮನು ಹೇಳಿಕೊಟ್ಟ ವೇದಕಲ್ಪಿತವಾದ ತಪಸ್ಸನ್ನು ಅನುಷ್ಠಾನಮಾಡಿದರು. ತಪಶ್ಚರ್ಯೆಗಳೊಳಗೆಲ್ಲ ಅದು ದಾರುಣವಾದದ್ದು. ಅದಕ್ಕೆ **ಮಹಾನಿಯಮ**ವೆಂದು ಹೆಸರು. ದೃಷ್ಟಿಯೂ ಬಾಹುಗಳೂ ಮೇಲಕ್ಕೇರಿದವು. ಮನಸ್ಸು ಏಕಾಗ್ರವಾಗಿತ್ತು. ಎಲ್ಲರೂ ಒಂಟಿಗಾಲಿನಲ್ಲಿ ನಿಂತುಕೊಂಡು ಕಾಷ್ಠಭೂತರಾಗಿ ಸಮಾಹಿತಚಿತ್ತರಾಗಿ ದಿವ್ಯಸಹಸ್ರವರ್ಷಗಳವರೆಗೆ ಈ ದಾರುಣವಾದ ತಪಸ್ಸನ್ನು ಮಾಡಿದರು. ಅವರಿಗೆ ವೇದವೇದಾಂಗಭೂಷಿತವಾದ ಮಧುರವಾದ ಈ ವಾಣಿಯು ಕೇಳಬಂತು.

ಶ್ರೀ ಭಗವಂತನಿಂತೆಂದನು: ಎಲೈ, ಬ್ರಹ್ಮಸಹಿತರಾದ ದೇವತೆಗಳಿರಾ, ಋಷಿಗಳಿರಾ, ತಪೋಧನರುಗಳಿರಾ, ನಿಮ್ಮೆಲ್ಲರನ್ನೂ ಸ್ವಾಗತದಿಂದ ಅರ್ಚಿಸಿ ಉತ್ತಮವಾದ ವಾಕ್ಯವನ್ನು ಹೇಳುವೆನು. ನಿಮ್ಮಿಂದ ಲೋಕಹಿತಕ್ಕಾಗಿ ನಾನು ಮಾಡಬೇಕಾದ ಮಹತ್ಕಾರ್ಯವು ಯಾವದೆಂಬುದು ತಿಳಿಯಿತು. ನಿಮ್ಮ ಪ್ರಾಣಕ್ಕೆ ಪುಷ್ಟಿಯನ್ನು ಪ್ರವೃತ್ತಿಯುಕ್ತವಾಗಿ ಮಾಡಬೇಕು. ಎಲೈ ದೇವತೆಗಳಿರಾ, ನನ್ನ ಆರಾಧನೆಯನ್ನು ಮಾಡಬೇಕೆಂಬ ಇಚ್ಛೆಯಿಂದ ಹೆಚ್ಚಿನ ತಪಸ್ಸನ್ನು ಮಾಡಿದ್ದೀರಿ. ಎಲೈ, ಮಹಾಸತ್ತ್ವರೇ, ಈ ತಪಸ್ಸಿನ ಉತ್ತಮಫಲವನ್ನು ಅನುಭವಿಸುವಿರಿ. ಲೋಕಗುರುವೂ ಲೋಕಪಿತಾಮಹನೂ ಆದ ಈ ಬ್ರಹ್ಮನೂ ವಿಬುಧಶ್ರೇಷ್ಠರಾದ ನೀವೂ ಸಮಾಹಿತಚಿತ್ತರಾಗಿ ನನ್ನನ್ನು ಆರಾಧನೆಮಾಡಿರಿ. ಯಾವಾಗಲೂ ಯಜ್ಞದಲ್ಲಿ ನನಗೆ ಭಾಗಗಳನ್ನು ಕಲ್ಪಿಸಿರಿ, ಹಾಗಾದರೆ ಎಲೈ, ಈಶ್ವರರಾದ ದೇವತೆಗಳೆ, ನಿಮ್ಮ ನಿಮ್ಮ ಅಧಿಕಾರಕ್ಕೆ ತಕ್ಕಂತೆ ಶ್ರೇಯಸ್ಸನ್ನು ಹೇಳಿಕೊಡುವೆನು.

ವೈಶಂಪಾಯನನಿಂತೆಂದನು: ದೇವದೇವನಾದ ಭಗವಂತನ ಈ ವಾಕ್ಯವನ್ನು ಕೇಳಿ ರೋಮಾಂಚವನ್ನು ಹೊಂದಿ ಆ ದೇವತೆಗಳೂ ಮಹರ್ಷಿಗಳೂ ಎಲ್ಲರೂ ವೇದದಲ್ಲಿ ಕಂಡುಬರುವ ವಿಧಿಯಂತೆ ವೈಷ್ಣವಕ್ರತುವನ್ನು ಮಾಡಿದರು. ಆ ಸವದಲ್ಲಿ ಬ್ರಹ್ಮನೇ ಮೊದಲು ಭಾಗವನ್ನು ಕಲ್ಪಿಸಿದನು. ದೇವತೆಗಳೂ ದೇವರ್ಷಿಗಳೂ ತಮ್ಮ ತಮ್ಮ ಭಾಗವನ್ನು ಕಲ್ಪಿಸಿದರು. ಕೃತಯುಗದ ಧರ್ಮದಿಂದ

ಭಾಗವನ್ನು ಕಲ್ಪಿಸಿದ ಅನಂತರ ಆದಿತ್ಯವರ್ಣನೂ ತಮಸ್ಸಿನ ಆಚೆಯಿರುವವನೂ ಆದ ಭಗವಂತನಲ್ಲಿ ಅರಿಕೆಮಾಡಿಕೊಂಡರು. ಆ ಪುರುಷನೇ ಹೆಚ್ಚಿನವನು, ಸರ್ವವ್ಯಾಪಕನು, ಈಶಾನದೇವನು, ವರದನು, ಪ್ರಭುವು– ಎಂದು ಸ್ತುತಿಸಿದರು. ಆಮೇಲೆ ವರದಾಯಕನಾದ, ದೇವನು ಅಲ್ಲಿದ್ದ ಆ ದೇವತೆಗಳನ್ನೆಲ್ಲ ಕುರಿತು ಅಶರೀರನಾಗಿ ಈ ವಾಕ್ಯವನ್ನು ಹೇಳಿದನು: ಯಾವನು ಯಾವಯಾವ ಭಾಗವನ್ನು ಕಲ್ಪಿಸಿದನೋ ಅವನು ಅದದರಿಂದ ನನ್ನನ್ನು ಪೂಜಿಸಿರುತ್ತಾನೆ. ನೀವು ಸದಕ್ಷಿಣಾಕವಾದ ಯಜ್ಞಗಳಿಂದ ನನ್ನನ್ನು ಆರಾಧಿಸಿರುತ್ತೀರಿ. ನೀವು ಪ್ರತಿಯುಗದಲ್ಲಿಯೂ ಪ್ರವೃತ್ತಿಫಲಕ್ಕೆ ಭಾಗಿಗಳಾಗಿರುವಿರಿ. ಎಲೈ ದೇವತೆಗಳಿರ, ಯಾವ ಲೋಕಗಳಲ್ಲಿಯೇ ಆಗಲಿ ಯಾರು ಯಾಗವನ್ನು ಮಾಡುವರೋ ಅವರು ವೇದಕಲ್ಪಿತವಾದ ಆಯಾ ಭಾಗಗಳನ್ನು ನಿಮಗಾಗಿ ಏರ್ಪಡಿಸುವರು. ಈ ಮಹಾಕ್ರತುವಿನಲ್ಲಿ ನಿಮ್ಮಗಳಲ್ಲಿ ಯಾವಯಾವನು ಯಾವಯಾವ ಭಾಗವನ್ನು ನನಗಾಗಿ ಕಲ್ಪಿಸಿರುವನೋ ಅವವನಿಗೆ ಆಯಾ ಭಾಗಗಳು ಸಲ್ಲುವವು. ಹೀಗೆಂದು ನಾನು ವೇದಸೂತ್ರದಲ್ಲಿ ಏರ್ಪಡಿಸಿರುತ್ತೇನೆ. ಯಜ್ಞಭಾಗಫಲದಿಂದ ತುಷ್ಟರಾಗಿ ನೀವು ಜನರನ್ನು ಪೋಷಣೆಮಾಡಿರಿ. ನಿಮ್ಮ ನಿಮ್ಮ ಅಧಿಕಾರಕ್ಕೆ ತಕ್ಕಂತೆ ಎಲ್ಲರಿಗೂ ಸರ್ವಾರ್ಥಗಳನ್ನೂ ಚಿಂತಿಸುತ್ತಾ ಪ್ರವೃತ್ತಿ ಫಲವುಳ್ಳ ಯಾವಯಾವ ಕರ್ಮಗಳು ಆಚರಣೆಗೆ ಬರುವವೋ ಅವವುಗಳಿಂದ ಬಲವನ್ನು ಹೊಂದಿ ಲೋಕಗಳನ್ನು ಧಾರಣೆ ಮಾಡುತ್ತಿರಿ. ನೀವು ಎಲ್ಲಾ ಯಜ್ಞಗಳಿಂದ ಭಾವಿತರಾಗಿ ನನ್ನನ್ನು ಭಾವಿಸುವವರಾಗಿರಿ. ಇದೇ ನೀವು ನನ್ನ ವಿಷಯದಲ್ಲಿ ಮಾಡತಕ್ಕ ಭಾವನೆ. ಇದಕ್ಕಾಗಿಯೇ ವೇದಗಳು, ಯಜ್ಞಗಳು, ಗಿಡಗಳು– ಇವೆಲ್ಲ ನಿರ್ಮಿತವಾಗಿರುತ್ತವೆ. ಇವುಗಳನ್ನು ಭೂಲೋಕದಲ್ಲಿ ಸರಿಯಾಗಿ ಪ್ರಯೋಗಿಸಿದರೆ ದೇವತೆಗಳು ಪ್ರೀತರಾಗುವರು. ಪ್ರವೃತ್ತಿಗುಣಕಲ್ಪಿತವಾಗಿರುವ ಈ ಸೃಷ್ಟಿಯನ್ನು ನಾನು ನಿಮಗಾಗಿ ಉಂಟುಮಾಡಿರುವೆನು. ಸರ್ವಶ್ರೇಷ್ಠರೆ, ಕಲ್ಪಕ್ಷಯವಾಗುವವರೆಗೂ ಇದು ನಡೆದುಕೊಂಡುಬರುವದು. ಎಲೈ ದೇವತೆಗಳಿರ, ನಿಮ್ಮ ನಿಮ್ಮ ಅಧಿಕಾರಕ್ಕೆ ತಕ್ಕಂತೆ ಲೋಕಹಿತವನ್ನು ಚಿಂತಿಸುತ್ತಾ ಇರಿ. ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ – ಹೀಗೆ ಸಪ್ತಮಾನಸಪುತ್ರರನ್ನು ನಿರ್ಮಿಸಲಾಗಿರುತ್ತದೆ. ಇವರು ವೇದವಿದರು. ಮುಖ್ಯರಾದ ವೇದಾಚಾರ್ಯರು. ಪ್ರವೃತ್ತಿಧರ್ಮಿಗಳಾಗಿರುವ ಪ್ರಜಾಪತಿಗಳೆಂದು ಇವರನ್ನು ಏರ್ಪಡಿಸಿರುತ್ತೇನೆ.

ಇದು ಕರ್ಮಿಗಳ ಹಾದಿಯು. ಲೋಕಸೃಷ್ಟಿಯನ್ನು ಮಾಡುವ ಭಗವಂತನು **ಅನಿರುದ್ಧ**ನೆಂಬ ಹೆಸರಿನಿಂದ ಪ್ರಸಿದ್ಧನಾಗಿರುತ್ತಾನೆ. ಸನ, ಸನತ್ಸುಜಾತ, ಸನಕ, ಸನಂದನ, ಸನತ್ಕುಮಾರ, ಕಪಿಲ, ಸನಾತನ– ಈ ಏಳುಮಂದಿಯೂ ಬ್ರಹ್ಮನ ಮಾನಸಪುತ್ರರಾದ ಋಷಿಗಳು. ಇವರಿಗೆ ವಿಜ್ಞಾನವು ತನಗೆತಾನೇ ಬಂದಿರುತ್ತದೆ; ಇವರು ನಿವೃತ್ತಿಧರ್ಮವನ್ನು ಅನುಸರಿಸಿರುತ್ತಾರೆ. ಇವರು ಯೋಗವನ್ನು ಬಲ್ಲವರು. ಸಾಂಖ್ಯಜ್ಞಾನದಲ್ಲಿ ವಿಶಾರದರು, ಧರ್ಮಶಾಸ್ತ್ರಗಳಲ್ಲಿ ಆಚಾರ್ಯರು, ಮೋಕ್ಷಧರ್ಮ ಪ್ರವರ್ತಕರು. ಅವ್ಯಕ್ತದಿಂದ ತ್ರಿಗುಣವುಳ್ಳ ಮಹತ್ತು, ಅದರಿಂದ ಅಹಂಕಾರವು ಉಂಟಾಗಿರುವದಷ್ಟೆ? ಆ ಅವ್ಯಕ್ತಕ್ಕಿಂತಲೂ ಹೆಚ್ಚಿನದಾದ ಕ್ಷೇತ್ರಜ್ಞನೆನ್ನುವರಲ್ಲ, ಅವನೇ ನಾನು. ಇದು ಪುನರಾವೃತ್ತಿಯಿಲ್ಲದ ಕ್ರಿಯಾವಂತರ ಮಾರ್ಗವು. ಯಾವನು ಯಾವ ಪ್ರವೃತ್ತಿ ಅಥವಾ ನಿವೃತ್ತಿ– ಯಾವ ಧರ್ಮದಲ್ಲಿ ನಿರ್ಮಿತನಾಗಿರುತ್ತಾನೋ, ಅವನವನು ಅದರದರಿಂದ ಶ್ರೇಯಸ್ಸನ್ನು ಪಡೆದುಕೊಳ್ಳುತ್ತಾನೆ. ಈ ಬ್ರಹ್ಮನು ಲೋಕಗುರುವು, ಜಗತ್ತಿನ ಸೃಷ್ಟಿಯನ್ನು ಮಾಡುವ ಪ್ರಭುವು ಇವನೇ ನಿಮಗೆ ತಾಯಿ, ತಂದೆ, ಅಜ್ಜನು. ನನ್ನ ಅಪ್ಪಣೆಯಂತೆ ಸರ್ವಭೂತಗಳಿಗೂ ವರವನ್ನು ಕೊಡಬಲ್ಲವನಾಗುವನು. ಇವನಿಗೆ ಮಗನಾದ ರುದ್ರನು ನನ್ನ ಹಣೆಯಿಂದ ಹುಟ್ಟಿರುತ್ತಾನೆ, ಅವನು ಬ್ರಹ್ಮನ ಅಪ್ಪಣೆಯಿಂದ ಸರ್ವಭೂತಗಳನ್ನೂ ಕಾಪಾಡಬಲ್ಲ ಪ್ರಭುವಾಗುವನು. ಹೊರಡಿರಿ, ನಿಮ್ಮನಿಮ್ಮ ಅಧಿಕಾರಗಳನ್ನು ಯಥಾವಿಧಿಯಾಗಿ ಮನಸ್ಸಿಗೆ ತಂದುಕೊಳ್ಳಿರಿ. ಎಲ್ಲಾ ಲೋಕಗಳಲ್ಲಿಯೂ ಬೇಗನೆ ಎಲ್ಲಾ ಕ್ರಿಯೆಗಳೂ ನಡೆಯಲಿ! ಜೀವರುಗಳಿಗೆ ಕರ್ಮಗಳನ್ನೂ ಗತಿಗಳನ್ನೂ ತಿಳಿಸಿಕೊಡಿರಿ. ಸುರಶ್ರೇಷ್ಠರೆ, ಇಲ್ಲಿ ಇಷ್ಟೇಕಾಲ ಆಯುಸ್ಸೆಂದು ಗೊತ್ತಾಗಿರುತ್ತದೆ. "ಈಗ ಕ್ರತುಯುಗವೆಂಬ ಶ್ರೇಷ್ಠಕಾಲವು ಬಂದಿರುತ್ತದೆ; ಈ ಯುಗದಲ್ಲಿ ಯಜ್ಞಪಶುಗಳನ್ನು ಹಿಂಸಿಸತಕ್ಕದ್ದಲ್ಲ; ಇದನ್ನು ಮೀರಬಾರದು. ಇಲ್ಲಿ ಧರ್ಮವು ನಾಲ್ಕು ಪಾದಗಳಿಂದಲೂ ಇರುತ್ತಿರುವದು. ಆಮೇಲೆ ತ್ರೇತಾಯುಗವೆಂಬ ಯುಗವು ಬರುವದು; ಆಗ ವೇದಧರ್ಮವು ನಡೆಯುವದು. ಅಲ್ಲಿ ಯಜ್ಞದಲ್ಲಿ ಪ್ರೋಕ್ಷಣಮಾಡಿದಮಾತ್ರದಿಂದ ಪಶುಗಳ ವಧೆಯಾಗುವದು ಮತ್ತು ಧರ್ಮದ ನಾಲ್ಕನೆಯ ಪಾದವು ಪ್ರಾಯಿಕವಾಗಿ ಲುಪ್ತವಾಗಿರುವದು. ಆ ಬಳಿಕ ದ್ವಾಪರವೆಂಬ ಮಿಶ್ರಕಾಲವು ಬರುವದು. ಆ ಯುಗದಲ್ಲಿ ಧರ್ಮದ ಎರಡುಪಾದಗಳು ಇಲ್ಲವಾಗುವವು. ಆ ಬಳಿಕ ಕಲಿಯುಗವು ಬರಲಾಗಿ ಧರ್ಮದ ಒಂದೇ ಪಾದವು ನಿಂತಿರುವದು."

## 8. ಭಗವಂತನು ಬ್ರಹ್ಮಾದಿಗಳಿಗೆ ಉಪದೇಶಿಸಿದ ಪ್ರವೃತಿನಿವೃತ್ತಿಧರ್ಮಗಳ ರಹಸ್ಯ*

## (3)

ಆಗ ಹೀಗೆಂದ ಆ ಗುರುವನ್ನು ಕುರಿತು ದೇವತೆಗಳೂ ದೇವರ್ಷಿಗಳೂ ಹೀಗೆಂದು ಕೇಳಿದರು: 'ಒಂದೇ ಕಾಲಿನಲ್ಲಿ ಧರ್ಮವು ಸಂಚರಿಸುತ್ತಿರುವಾಗ, ಭಗವಂತನೆ, ನಾವು ಹೇಗೆ ನಡೆದುಕೊಳ್ಳಬೇಕು? ಇದನ್ನು ನಮಗೆ ಹೇಳುವನಾಗು' ಅದಕ್ಕೆ ಭಗವಂತನು ಹೇಳಿದ ಉತ್ತರವಿದು: "ಎಲೈ ಸುರಶ್ರೇಷ್ಠರೆ, ಎಲ್ಲಿ ವೇದಗಳು, ಯಜ್ಞಗಳು, ತಪಸ್ಸು, ಸತ್ಯ, ದಮ, ಅಹಿಂಸೆ, ಧರ್ಮದಿಂದ ಕೂಡಿ ಪ್ರಚಾರ ದಲ್ಲಿರುವವೋ ಆ ಪ್ರದೇಶವನ್ನೇ ನೀವು ಸೇವಿಸತಕ್ಕದ್ದು; ನಿಮ್ಮನ್ನು ಅಧರ್ಮವು ಸ್ವಲ್ಪವೂ ಸೋಂಕದೆ ಇರಲಿ!"

ವ್ಯಾಸನಿಂತೆಂದನು: ಹೀಗೆ ಭಗವಂತನ ಅನುಶಾಸನವನ್ನು ಹೊಂದಿದ ದೇವತೆಗಳೂ ಋಷಿಗಳೂ ಭಗವಂತನಿಗೆ ನಮಸ್ಕಾರವನ್ನು ಮಾಡಿ ಯಥೇಷ್ಟವಾದ ದೇಶಗಳಿಗೆ ಹೊರಟುಹೋದರು. ದೇವತೆಗಳು ಹೊರಟು ಹೋಗಲಾಗಿ ಬ್ರಹ್ಮನೊಬ್ಬನೇ ಉಳಿದುಕೊಂಡನು. ಅನಿರುದ್ಧರೂಪದಿಂದ ಇದ್ದ ಭಗವಂತನಾದ ದೇವನು ಅವನಿಗೆ ದೊಡ್ಡ ಕುದುರೆಯ ಮುಖವನ್ನು ಧರಿಸಿಕೊಂಡು ಕಾಣಿಸಿಕೊಂಡನು. ಆಗ ಆತನು ಸಾಂಗವೇದಗಳನ್ನು ಆವರ್ತನೆಮಾಡುತ್ತಿದ್ದನು. ಕಮಂಡಲವನ್ನೂ ತ್ರಿದಂಡವನ್ನೂ ಧರಿಸಿದ್ದನು. ಆ ಅಮಿತಪರಾಕ್ರಮಿಯಾದ ಹಯಗ್ರೀವನನ್ನು ಕಂಡ ಲೋಕಕರ್ತೃವೂ ಪ್ರಭುವೂ ಆದ ಬ್ರಹ್ಮನು ಲೋಕಗಳಿಗೆ ಹಿತವಾಗಲೆಂಬ ಇಚ್ಛೆಯಿಂದ ಆ ವರದನಿಗೆ ಶಿರಸಾ ನಮಸ್ಕಾರವನ್ನು ಮಾಡಿ ಕೈಮುಗಿದುಕೊಂಡು ಮುಂದೆ ನಿಂತುಕೊಂಡನು. ಅವನನ್ನು ದೇವನು ಆಲಿಂಗನಮಾಡಿಕೊಂಡು ಹೇಳಿದ್ದೇನೆಂದರೆ:

ಶ್ರೀ ಭಗವಂತನ ವಚನ: "ಎಲೈ ಬ್ರಹ್ಮನೆ, ಲೋಕಕಾರ್ಯಗಳನ್ನೂ ಗತಿಗಳನ್ನೂ ಎಲ್ಲವನ್ನೂ ನೀನು ವಿಧಿವತ್ತಾಗಿ ಆಲೋಚಿಸು. ನೀನೇ ಸರ್ವಭೂತ ಗಳಿಗೂ ಧಾತೃ; ಜಗತ್ತಿಗೆಲ್ಲ ನೀನೇ ಪ್ರಭು, ಗುರು. ನಿನ್ನ ಮೇಲೆ ಭಾರವನ್ನಿಟ್ಟು

* ಸಂಪುಟ 37; ಸಂಚಿಕೆ 2; ಅಕ್ಟೋಬರ್ 1967

ನಾನು ಸರಿಯಾಗಿ ಧೃತಿಯನ್ನು ಹೊಂದಿರುವೆನು. ಯಾವಾಗ ದೇವತೆಗಳ ಕಾರ್ಯವು ನಿನ್ನಿಂದ ಆಗಲಾರದೆಂದು ನಿನಗೆ ಕಾಣುವದೋ ಆಗ ಆತ್ಮಜ್ಞಾನವನ್ನು ಉಪದೇಶಿಸುವದಕ್ಕಾಗಿ ನಾನು ಪ್ರಾದುರ್ಭವಿಸುವೆನು" ಹೀಗೆಂದು ಹೇಳಿ ಆ ಹಯಗ್ರೀವನು ಅಲ್ಲಿಯೇ ಅಂತರ್ಧಾನನಾದನು. ಅವನ ಅಪ್ಪಣೆಯಂತೆ ಬ್ರಹ್ಮನು ಬೇಗನೆ ತನ್ನ ಲೋಕಕ್ಕೆ ತೆರಳಿದನು.

ಈ ರೀತಿಯಲ್ಲಿ ಈ ಮಹಾಭಾಗನೂ ಸನಾತನನೂ ಆದ ಪದ್ಮನಾಭನು ಯಜ್ಞಗಳಲ್ಲಿ ಅಗ್ರಭಾಗಹರನಾದನು; ಯಾವಾಗಲೂ ಯಜ್ಞಧಾರಿಯೂ ಆಗಿರುತ್ತಾನೆ; ಮತ್ತು ಅಕ್ಷಯಧರ್ಮಿಗಳ ನಿವೃತ್ತಿಧರ್ಮವನ್ನು ಆಶ್ರಯಿಸಿರುತ್ತಾನೆ; ಲೋಕವೈಚಿತ್ರ್ಯ ವನ್ನುಂಟುಮಾಡಿ ಪ್ರವೃತ್ತಿಧರ್ಮಗಳನ್ನು ವಿಧಿಸಿರುತ್ತಾನೆ. ಆತನೇ ಆದಿ, ಆತನೇ ನಡುವೆ, ಆತನೇ ಅಂತವು; ಪ್ರಜೆಗಳಿಗೆ ಆತನೇ ಧಾತನು, ಆತನೇ ಧ್ಯೇಯವು; ಆತನೇ ಕರ್ತೃ, ಆತನೇ ಕಾರ್ಯ. ಯುಗಾಂತದಲ್ಲಿ ಲೋಕಗಳನ್ನೆಲ್ಲ ಪ್ರಲಯಮಾಡಿ ಸುಪ್ತನಾಗಿದ್ದು ಯುಗಾದಿಯಲ್ಲಿ ಎಚ್ಚತ್ತು ಜಗತ್ತನ್ನು ಸೃಷ್ಟಿಮಾಡುತ್ತಾನೆ; ಆ ನಿರ್ಗುಣನಾದ ಮಹಾತ್ಮನಾದ ದೇವನಿಗೆ- ಅಜನೂ ವಿಶ್ವರೂಪನೂ ಸರ್ವದೇವತೆಗಳಿಗೂ ಆಶ್ರಯನಾಗಿರುವ ಆತನಿಗೆ – ನಮಸ್ಕಾರವನ್ನು ಮಾಡಿರಿ. ಆತನು ಮಹಾಭೂತಗಳಿಗೆ ಅಧಿಪತಿಯು, ರುದ್ರರಿಗೆಲ್ಲ ಪತಿಯು. ಆದಿತ್ಯರಿಗೆ ಪತಿಯು, ವಸುಗಳಿಗೆ ಪತಿಯು, ಅಶ್ವಿನೀದೇವತೆಗಳಿಬ್ಬರಿಗೂ ಪತಿಯು, ಮರುತ್ತರಿಗೆ ಪತಿಯು, ವೇದಯಜ್ಞಗಳಿಗೆ ಅಧಿಪತಿಯು, ವೇದಾಂಗಗಳಿಗೆ ಪತಿಯು, ನಿತ್ಯವೂ ಸಮುದ್ರದಲ್ಲಿ ವಾಸವಾಗಿರುವಾತನು, ಹರಿಯು, ಮುಂಜಕೇಶಿಯು, ಶಾಂತನು, ಸರ್ವಭೂತಗಳಿಗೂ ಮೋಕ್ಷಧರ್ಮವನ್ನು ಹೇಳಿಕೊಡುವಾತನು, ಕಪರ್ದಿಯು, ವರಾಹನು, ಏಕಶೃಂಗನು, ಧೀಮಂತನು, ವಿವಸ್ವಂತನು, ಹಯಗ್ರೀವನು, ಚತುರ್ಮೂರ್ತಿಯನ್ನು ಧರಿಸಿರುವಾತನು, ಗುಹ್ಯನು, ಜ್ಞಾನದೃಶ್ಯನು, ಅಕ್ಷರನು, ಕ್ಷರನು, ಈ ಅವ್ಯಯವಾದ ದೇವನೇ ಎಲ್ಲೆಲ್ಲಿಯೂ ಗತಿಯುಳ್ಳವನಾಗಿ ಸಂಚರಿಸುತ್ತಿರುವನು. ಈತನೇ ವಿಜ್ಞಾನಚಕ್ಷುಸ್ಸಿನಿಂದ ಅರಿತುಕೊಳ್ಳಬೇಕಾಗಿರುವ ಪರಬ್ರಹ್ಮವು, ಈತನನ್ನೇ ಜ್ಞಾನಚಕ್ಷುಸ್ಸಿನಿಂದ ಹೀಗೆಂದು ನಾನು ಅರಿತುಕೊಂಡೆನು. ನೀವು ಕೇಳಿದ್ದರಿಂದ ನಿಮಗೂ ಹೇಳಿರುತ್ತೇನೆ. ಎಲೈ ಶಿಷ್ಯರೆ, ನನ್ನ ಮಾತಿನಂತೆ ನಡೆದುಕೊಳ್ಳಿ. ಈಶ್ವರನಾದ ಹರಿಯನ್ನು ಸೇವಿಸಿರಿ. ವೇದಶಬ್ದಗಳಿಂದ ಆತನನ್ನು

ಗಾನಮಾಡಿರಿ, ವಿಧಿವತ್ತಾಗಿ ಆತನನ್ನು ಪೂಜಿಸಿರಿ.

ವೈಶಂಪಾಯನನಿಂತೆಂದನು: ಎಲೈ ರಾಜನೆ, ಹೀಗೆಂದು ಧೀಮಂತನಾದ ವೇದವ್ಯಾಸನು ಶಿಷ್ಯರೆಲ್ಲರಿಗೂ ಪರಮಧಾರ್ಮಿಕನಾದ ಶುಕನೆಂಬ ಪುತ್ರನಿಗೂ ಹೇಳಿದನು. ನಮಗೆ ಉಪಾಧ್ಯಾಯನಾದ ಆತನು ನಮ್ಮೊಡನೆ ಚತುರ್ವೇದದಲ್ಲಿರುವ ಋಕ್ಕುಗಳಿಂದಲೂ ಆತನನ್ನು ಸ್ತುತಿಸಿದನು. ನೀನು ಕೇಳಿದೆಯಲ್ಲ, ಅದೆಲ್ಲವನ್ನೂ ನಿನಗೆ ಹೇಳಿರುತ್ತೇನೆ. ದ್ವೈಪಾಯನಗುರುವು ಹೀಗೆಂದು ಭಗವಂತನಿಗೆ ನಮಸ್ಕಾರಮಾಡಿ ಸಮಾಹಿತಚಿತ್ತನಾಗಿ ಹೀಗೆ ಹೇಳಿರುತ್ತಾನೆ: ಯಾವನು ಇದನ್ನು ಶ್ರವಣಮಾಡುವನೋ, ಯಾವನು ಇದನ್ನು ಹೇಳುವನೋ, ಅವನು ಮೋಹರಹಿತನಾಗುವನು, ಮತಿಮಂತನಾಗುವನು, ಬಲರೂಪಯುಕ್ತನಾಗುವನು, ರೋಗಿಯು ರೋಗದಿಂದ ಮುಕ್ತನಾಗುವನು, ಬದ್ಧನಾದವನು ಬಂಧನದಿಂದ ಮುಕ್ತನಾಗುತ್ತಾನೆ. ಕಾಮಿಯು ಕಾಮಗಳನ್ನು ಪಡೆದುಕೊಳ್ಳುತ್ತಾನೆ, ದೀರ್ಘಾಯುವನ್ನು ಬಯಸುವವನು ದೀರ್ಘಾಯುಸ್ಸನ್ನು ಪಡೆದುಕೊಳ್ಳುವನು. ಬ್ರಾಹ್ಮಣನಿಗೆ ಸರ್ವವೇದಗಳೂ ವಶವಾಗುವವು,ಕ್ಷತ್ರಿಯನು ವಿಜಯಿಯಾಗುವನು, ವೈಶ್ಯನು ಹೇರಳವಾಗಿ ಧನಲಾಭವನ್ನು ಪಡೆದುಕೊಳ್ಳುತ್ತಾನೆ. ಶೂದ್ರನಿಗೆ ಸುಖವು ಲಭಿಸುವದು, ಪುತ್ರಹೀನನಿಗೆ ಪುತ್ರನು ದೊರಕುವನು, ಕನ್ಯೆಗೆ ಇಷ್ಟವಾದ ಪತಿಯ ಲಾಭವಾಗುವದು. ಗರ್ಭಿಣಿಯಾದವಳು ಸುಖವಾಗಿ ಪ್ರಸವಿಸಿ ಪುತ್ರನನ್ನು ಪಡೆದುಕೊಳ್ಳುವಳು; ಬಂಜೆಯು ಪುತ್ರಪೌತ್ರಸಮೃದ್ಧಿಯಿಂದ ಮಕ್ಕಳನ್ನು ಪಡೆಯುವಳು. ಇದನ್ನು ದಾರಿಯಲ್ಲಿ ಪಠಿಸಿದವನು ದಾರಿಯನ್ನು ಕ್ಷೇಮದಿಂದ ದಾಟುವನು. ಯಾವನು ಯಾವದನ್ನು ಬಯಸುವನೋ ಆ ಕಾಮವನ್ನು ನಿಶ್ಚಯವಾಗಿ ಪಡೆದುಕೊಳ್ಳುವನು. ಮಹಾತ್ಮನಾದ ಪರಮಪುರುಷನ ಮಹಿಮೆಯನ್ನು ಹೇಳುವ, ಮಹರ್ಷಿವಚನವನ್ನೂ ಋಷಿಗಳ, ದೇವತೆಗಳ ಸಮಾಗಮವೃತ್ತಾಂತವನ್ನೂ ಶ್ರವಣಮಾಡುವ ಭಕ್ತರು ಅತಿಶಯವಾದ ಸುಖವನ್ನು ಪಡೆದುಕೊಳ್ಳುತ್ತಾರೆ.

* * * * *

## 9. ಭಗವಂತನು ಅರ್ಜುನನಿಗೆ ತನ್ನ ನಾಮಗಳ ವ್ಯುತ್ಪತ್ತಿಯನ್ನೂ ಮಾಹಾತ್ಮ್ಯವನ್ನೂ ತಿಳಿಸಿಕೊಟ್ಟದ್ದು

ಜನಮೇಜಯನಿಂತೆಂದನು: ಪೂಜ್ಯರೆ, ವ್ಯಾಸರು ಶಿಷ್ಯರಿಂದೊಡಗೂಡಿ ಯಾವ ನಾಮಗಳಿಂದ ಮಧುಸೂದನನನ್ನು ಸ್ತುತಿಸಿದರೋ ಅವುಗಳ ನಿರ್ವಚನ ವನ್ನು ದಯವಿಟ್ಟು ತಿಳಿಸಿಕೊಡಬೇಕು. ಪ್ರಜಾಪತಿಗೂ ಪತಿಯಾಗಿರುವ ಹರಿಯ ಈ ನಾಮಮಾಹಾತ್ಮ್ಯವನ್ನು ಕೇಳಿ ಅರಿತುಕೊಂಡು ನಾನು ಶರಚ್ಚಂದ್ರನಂತೆ ನಿರ್ಮಲನಾಗಬೇಕೆಂದಿಚ್ಛಿಸುತಿದ್ದೇನೆ.

ಇದಕ್ಕೆ ವೈಶಂಪಾಯನರು ಹೇಳಿದ ಪ್ರತ್ಯುತ್ತರವೇನೆಂದರೆ: ಪ್ರಭುವಾದ ಶ್ರೀಹರಿಯು ತನ್ನ ನಾಮಗಳ ಗುಣಕರ್ಮಗಳಿಂದಾಗಿರುವ ನಿರ್ವಚನವನ್ನು ಹೇಳಿದ ಪರಿಯನ್ನು ಶತ್ರುವೀರರ ಹಂತೃವಾದ ಅರ್ಜುನನು ಮಹಾತ್ಮನಾದ ಕೇಶವನನ್ನು ಹೀಗೆ ಕೇಳಿದನು: ಭಗವಂತನೆ, ಭೂತಭವ್ಯೇಶನೆ, ಸರ್ವಭೂತಗಳನ್ನು ಸೃಜಿಸಿರುವ ಅವ್ಯಯನೆ, ಲೋಕಧಾಮನೆ, ಜಗನ್ನಾಥನೆ, ಲೋಕಗಳಿಗೆ ಅಭಯಪ್ರದನಾಗಿರುವಾತನೆ, ಯಾವ ನಿನ್ನ ನಾಮಗಳನ್ನು ಮಹರ್ಷಿಗಳು ಹೇಳಿರುವರೋ ಪುರಾಣಸಹಿತವಾದ ವೇದಗಳಲ್ಲಿ ಕರ್ಮ ಸೂಚಕಗಳಾದ ಯಾವ ಗ್ರಾಹ್ಯನಾಮಗಳಿರುವವೋ ಅವುಗಳ ನಿರ್ವಚನವನ್ನು ನಿನ್ನಿಂದ ಕೇಳಿ ಅರಿತುಕೊಳ್ಳ ಬೇಕೆಂದು ಬಯಸುತ್ತಿದ್ದೇನೆ, ಪ್ರಭುವೆ, ನಿನ್ನನ್ನು ಬಿಟ್ಟರೆ ಮತ್ತೆಯಾರೂ ಈ ನಾಮಗಳ ನಿರ್ವಚನವನ್ನು ಹೇಳಲಾರರಷ್ಟೆ?

ಇಂತೆಂದ ಅರ್ಜುನನಿಗೆ ಭಗವಂತನು ಹೇಳಿದನೇನೆಂದರೆ: ಅರ್ಜುನನೆ, ಋಗ್ವೇದದಲ್ಲಿಯೂ ಯಜುರ್ವೇದದಲ್ಲಿಯೂ ಅಥರ್ವಸಾಮವೇದಗಳಲ್ಲಿಯೂ ಪುರಾಣಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಜ್ಯೋತಿಷದಲ್ಲಿಯೂ ಸಾಂಖ್ಯದಲ್ಲಿಯೂ ಯೋಗಶಾಸ್ತ್ರದಲ್ಲಿಯೂ ಆಯುರ್ವೇದದಲ್ಲಿಯೂ ಮಹರ್ಷಿಗಳು ನನ್ನ ಅನೇಕನಾಮಗಳನ್ನು ಹೇಳಿರುತ್ತಾರೆ. ಅವುಗಳೊಳಗೆ ಕೆಲವು ನನ್ನ ಗುಣವನ್ನು ಹೇಳುವವು, ಮತ್ತೆ ಕೆಲವು ಕರ್ಮವನ್ನು ತಿಳಿಸುವವು. ಎಲೈ ನಿರ್ದುಷ್ಟನಾದ

---

* ಸಂಪುಟ 37; ಸಂಚಿಕೆ 3; ನವೆಂಬರ್ 1967

ಅರ್ಜುನನೆ, ಕರ್ಮಜನಾಮಗಳ ನಿರ್ವಚನವನ್ನು ಹೇಳುವೆನು, ಪರಿಶುದ್ಧಚಿತ್ತನಾಗಿ ಕೇಳು. ನೀನು ನನ್ನ ಅರ್ಧಾಂಶವೆಂದು ಋಷಿಗಳು ಸ್ಮೃತಿಗಳಲ್ಲಿ ಹೇಳಿರುವರಲ್ಲವೆ? ಮಹಾಯಶಸ್ವಿಗಳಾದ ದೇಹಿಗಳಿಗೆ ಪರಮಾತ್ಮನಾಗಿರುವ, ವಿಶ್ವಸ್ವರೂಪನೂ ನಿರ್ಗುಣನೂ ಗುಣಾತ್ಮನೂ ಆಗಿರುವ ನಾರಾಯಣನಿಗೆ ನಮಸ್ಕಾರ! ಆತನ ಪ್ರಸಾದದಿಂದಲೇ ಬ್ರಹ್ಮನು ಹುಟ್ಟಿರುವನು, ಕ್ರೋಧದಿಂದ ರುದ್ರನು ಹುಟ್ಟಿರು ತ್ತಾನೆ. ಸ್ಥಾವರಜಂಗಮವೆಲ್ಲಕ್ಕೂ ಯಾವನು ಯೋನಿಯಾಗಿರುತ್ತಾನೋ, ಸಾತ್ತ್ವಿಕ ಶ್ರೇಷ್ಠನೆ, ಯಾವನು ಅಷ್ಟಾದಶಗುಣದಿಂದ ಕೂಡಿರುವ ಸತ್ತ್ವವಾಗಿರು ತ್ತಾನೋ, ಆತನೇ ನನಗೆ ಪರಾಪ್ರಕೃತಿಯು, ದ್ಯಾವಾಪೃಥಿವಿಗಳೂ ಆತನೇ, ಆ ಪ್ರಕೃತಿಯೇ ಯೋಗಧಾರಿಯಾಗಿರುತ್ತದೆ, ಅದೇ ಋತವೂ ಸತ್ಯವೂ ಅಮರವೂ ಅಜಯ್ಯವೂ ಆಗಿರುತ್ತದೆ, ಲೋಕಗಳಿಗೆಲ್ಲ ಆತ್ಮನೆನಿಸಿರುತ್ತದೆ. ಆತನಿಂದಲೇ ಸೃಷ್ಟಿ, ಪ್ರಲಯ, ವಿಕಾರ– ಎಲ್ಲವೂ ಉಂಟಾಗುವವು, ಆತನೇ ತಪಸ್ಸು, ಯಜ್ಞವು, ಯಾಗಕರ್ತೃವು, ಪುರಾಣಪುರುಷನಾದ ವಿರಾಜನು, ಅವನನ್ನೇ **ಅನಿರುದ್ಧ** ಎನ್ನುತ್ತಾರೆ; ಲೋಕಗಳಿಗೆಲ್ಲ ಉತ್ಪತ್ತಿಪ್ರಲಯಕಾರಣನಾಗಿರುತ್ತಾನೆ.

ಎಲೈ ಕಮಲನೇತ್ರನೆ, ಪ್ರಜಾಪತಿಯ ರಾತ್ರಿಯು ಮುಗಿಯಲು ಅಮಿತ ತೇಜನಾದ ಆತನ ಪ್ರಸಾದದಿಂದ ಪದ್ಮವೊಂದುಂಟಾಯಿತು. ಅದರಿಂದ ಬ್ರಹ್ಮನು ತೋರಿಕೊಂಡನು. ಅವನು ಅದೇ ಪರಮಾತ್ಮನ ಪ್ರಸಾದದಿಂದ ಹುಟ್ಟಿದಾತನು. ಹಗಲು ಕ್ಷಯವಾಗಲು ಕ್ರೋಧಾವಿಷ್ಟನಾದ ಆತನ ಹಣೆಯಿಂದ ಸಂಹಾರಕಾರಕ ನಾದ ರುದ್ರನು ಹುಟ್ಟಿದನು, ಪ್ರಸಾದಕ್ರೋಧಗಳಿಂದ ಹುಟ್ಟಿದ ಈ ದೇವಶ್ರೇಷ್ಠರು ಆತನು ತೋರಿಸಿದ ಮಾರ್ಗದಲ್ಲಿ ನಡೆಯುವ ಸೃಷ್ಟಿಸಂಹಾರಕರ್ತರು. ಈ ವಿಷಯದಲ್ಲಿ ಅವರು ನಿಮಿತ್ತಮಾತ್ರರಾಗಿರುತ್ತಾರೆ, ಅವರು ಎಲ್ಲಾ ಪ್ರಾಣಿಗಳಿಗೂ ವರವನ್ನು  ಕೊಡುವವರು. ಎಲೈ ಪಾಂಡುಪುತ್ರನೆ, ಕಪರ್ದಿಯೂ ಜಟಿಲನೂ ಮುಣ್ಡನೂ ಶ್ಮಶಾನಗೃಹವಾಸಿಯೂ, ಉಗ್ರವ್ರತವನ್ನು ಆಚರಿಸುತ್ತಿರುವಾತನೂ ಆಗಿರುವ ಯೋಗಿಯಾದ ರುದ್ರನು ಪರಮದಾರುಣನು, ದಕ್ಷಯಜ್ಞವನ್ನು ಧ್ವಂಸಮಾಡಿದಾತನವನು. ಭಗನೇತ್ರವನ್ನು ಕಿತ್ತುಹಾಕಿದವನು, ಯುಗಯುಗದಲ್ಲಿಯೂ ನಾರಾಯಣಾತ್ಮಕನಾಗಿ ಪ್ರಾದುರ್ಭವಿಸುವನು. ಆ ದೇವದೇವನಾದ ಮಹೇಶ್ವರನನ್ನು ಪೂಜಿಸಿದರೆ ಪ್ರಭುವಾದ ನಾರಾಯಣನನ್ನೇ ಪೂಜಿಸಿದಂತೆ. ಎಲೈ ಪಾಂಡವನೆ,

ನಾನೇ ಎಲ್ಲಾ ಲೋಕಗಳಿಗೂ ಆತ್ಮನು: ಆದ್ದರಿಂದ ಆತ್ಮನೇ ಆಗಿರುವ ರುದ್ರನನ್ನು ನಾನು ಪೂಜಿಸುತ್ತೇನೆ. ಈಶಾನನೂ ವರದನೂ ಆದ ಶಿವನನ್ನು ನಾನು ಅರ್ಚಿಸದೆ ಇದ್ದರೆ ಯಾರೂ ಆತನನ್ನು ಪೂಜಿಸಲಾರರು. ನಾನು, ಪ್ರಮಾಣವೆಂದೆಣಿಸಿದ್ದನ್ನೇ ಜನವೂ ಅನುಸರಿಸುತ್ತದೆ; ಪ್ರಮಾಣಗಳನ್ನು ಗೌರವಿಸಬೇಕಷ್ಟೆ? ಆದ್ದರಿಂದ ಅವನನ್ನು ನಾನು ಪೂಜಿಸುತ್ತಿರುವೆನು. ಆತನನ್ನು ಅರಿತಿರುವವನೇ ನನ್ನನ್ನು ಅರಿತವನು, ಅವನನ್ನು ಅನುಸರಿಸುವಾತನೇ ನನ್ನನ್ನು ಅನುಸರಿಸಿದವನು; ರುದ್ರ, ನಾರಾಯಣ– ಇವೆರಡೂ ಇಬ್ಬಗೆಯಾಗಿರುವ ಒಂದೇ ಸತ್ತ್ವವು; ಅದೇ ಸರ್ವಕರ್ಮಗಳಲ್ಲಿಯೂ ವ್ಯಕ್ತಿಯಾಗಿ ಸಂಚರಿಸುತ್ತಿರುವದು. ನನಗೆ ಮತ್ತೊಬ್ಬರು ಯಾರೂ ವರವನ್ನು ಕೊಡಬೇಕಾದದ್ದಿಲ್ಲವಷ್ಟೆ? ಹೀಗೆಂದು ಮನಸ್ಸಿನಲ್ಲಿ ಯೋಚಿಸಿಕೊಂಡೇ ಪುರಾಣರುದ್ರನಾದ ಈಶ್ವರನನ್ನು – ನನ್ನನ್ನೇ ನಾನೇ– ಪುತ್ರಾರ್ಥವಾಗಿ ಆರಾಧಿಸಿದೆನು, ವಿಷ್ಣುವು ತನ್ನ ಆತ್ಮನನ್ನು ಹೊರತು ಮತ್ತೆ ಯಾವ ದೇವತೆಗೂ ನಮಸ್ಕರಿಸನಷ್ಟೆ? ಆದ್ದರಿಂದಲೇ ರುದ್ರನನ್ನು ನಾನು ಭಜಿಸುತ್ತಿರುವೆನು.

ಬ್ರಹ್ಮ, ರುದ್ರ, ಇಂದ್ರ– ಇವರೆಲ್ಲರ ಸಹಿತವಾಗಿ ದೇವತೆಗಳೂ ಋಷಿಗಳೂ ದೇವಶ್ರೇಷ್ಠನಾದ ನಾರಾಯಣಹರಿಯನ್ನು ಅರ್ಚಿಸುತ್ತಿರುವರು. ಮುಂದೆ ಬರಲಿರುವ, ಈಗ ಇರುವ, ಹಿಂದೆ ಆಗಿರುವ ಎಲ್ಲರಲ್ಲಿಯೂ ವಿಷ್ಣುವೇ ಅಗ್ರಣಿಯು,ಸೇವ್ಯನು, ಪೂಜ್ಯನು, ಹವ್ಯದಾತನಾದ ವಿಷ್ಣುವನ್ನು ನಮಸ್ಕರಿಸು, ಶರಣದಾತನಾದ ಆತನನ್ನೇ ನಮಸ್ಕರಿಸು, ವರದನಾದ ಆತನನ್ನೇ ನಮಸ್ಕರಿಸು, ಹವ್ಯಕವ್ಯ ಭೋಕ್ತೃವಾದ ಆತನನ್ನೇ ನಮಿಸು.

ಚತುರ್ವಿಧರಾದ ಜನರೂ ನನ್ನ ಭಕ್ತರೇ ಆಗಿರುತ್ತಾರೆ; ಅವರಲ್ಲಿ ಅನನ್ಯದೇವತರಾಗಿರುವ ಏಕಾಂತಿಗಳೇ ಶ್ರೇಷ್ಠರು. ಏಕೆಂದರೆ ಅವರಿಗೆ ನಾನೇ ಗತಿ, ಅವರು ನಿಷ್ಕಾಮರಾಗಿ ಕರ್ಮವನ್ನು ಮಾಡುತ್ತಿರುವರು. ಉಳಿದ ಮೂವರು ಶಿಷ್ಯರೂ ಫಲಕಾಮಿಗಳು. ಅವರು ಧರ್ಮದಿಂದ ಜಗುಳಿ ಬೀಳುವರೇ; ಆದರೆ ಜ್ಞಾನಿಯು ಶ್ರೇಷ್ಠನು. ಬ್ರಹ್ಮನನ್ನೂ ನೀಲಕಂಠನನ್ನೂ ಅಥವಾ ಮತ್ತುಳಿದ ಯಾವ ದೇವತೆಗಳನ್ನು ಜ್ಞಾನಿಗಳು ಅರ್ಚಿಸಿದರೂ ಪರಮಾತ್ಮನಾದ ನನ್ನನ್ನೇ ಸೇರುವರು. ಇಗೋ, ನನ್ನ ಭಕ್ತನ ವಿಷಯದಲ್ಲಿ ಈ ವಿಶೇಷವನ್ನು ನಿನಗೆ ತಿಳಿಸಿರುತ್ತೇನೆ.

ಎಲೈ ಕೌಂತೇಯನೆ, ನೀನೂ ನಾನೂ ನರನಾರಾಯಣರೆನಿಸಿರುತ್ತೇವೆ. ನಾವು ಭೂಭಾರವನ್ನು ಪರಿಹರಿಸುವುದಕ್ಕಾಗಿ ಈಗ ಮಾನುಷಶರೀರವನ್ನು ಹೊಕ್ಕಿರುವೆವು.

ನಾನು ಅಧ್ಯಾತ್ಮಯೋಗಗಳನ್ನು ಅರಿತಿರುವೆನು; ನಾನು ಯಾರು, ಎಲ್ಲಿಂದ ಬಂದಿರುವೆನು- ಎಂಬುದನ್ನೂ ಬಲ್ಲವನಾಗಿರುವೆನು. ನಿವೃತ್ತಿಲಕ್ಷಣವಾದ ಧರ್ಮವೂ ಅಭ್ಯುದಯಾರ್ಥವಾದ ಧರ್ಮವೂ ನರರಿಗೆ ಅಯನ (ಗತಿ) ಎಂದು ಖ್ಯಾತವಾಗಿರುತ್ತದೆ. ಅದು ಸನಾತನನಾದ ನಾನೇ. ಅಪ್ಪಿಗೆ ಸಾರವೆನಿಸುತ್ತದೆ, ಅಪ್ಪೇ ನರರನ್ನು ಹೆತ್ತಿರುವದು; ಅದು ನನಗೆ ಪೂರ್ವದಲ್ಲಿ ಸ್ಥಾನವಾಗಿದ್ದದ್ದರಿಂದ ನಾನು **ನಾರಾಯಣ**ನೆನಿಸಿರುವೆನು; ನಾನು –ಸೂರ್ಯನು ಕಿರಣಗಳಿಂದ ಭೂಮಿಯನ್ನೆಲ್ಲ ಮುಚ್ಚುವಂತೆ – ಜಗತ್ತೆಲ್ಲವನ್ನೂ ಮುಚ್ಚಿಕೊಂಡು ಸರ್ವಭೂತಗಳೊಳಗೆ ವಾಸಮಾಡಿಕೊಂಡಿರುವದರಿಂದ **ವಾಸುದೇವ**ನೆನಿಸಿರುತ್ತೇನೆ. ಎಲೈ ಭಾರತನೆ, ನಾನೇ ಸರ್ವಭೂತಗಳಿಗೂ ಗತಿಯು; ಜನ್ಮಮರಣನಾಗಿಯೂ ಇರುತ್ತೇನೆ; ದ್ಯಾವಾಪೃಥಿವಿಗಳನ್ನು ನಾನೇ ವ್ಯಾಪಿಸಿಕೊಂಡಿರುತ್ತೇನೆ. ನಾನು ಎಲ್ಲವನ್ನೂ ಅತಿಕ್ರಮಿಸಿರುವೆನು; ಭೂತಗಳಮೇಲೆಯೂ ಇದ್ದು ಎಲ್ಲವನ್ನೂ ಮೀರಿರುವದರಿಂದ ನಾನು **ವಿಷ್ಣು**ವೆನಿಸಿರುತ್ತೇನೆ. ದಮದಿಂದ ಸಿದ್ಧಿಯನ್ನು ಪಡೆಯಲಿಚ್ಛಿಸುವವರೂ ದ್ಯುಲೋಕ, ಭೂಲೋಕ, ಅಂತರಿಕ್ಷಲೋಕ- ಇವುಗಳಲ್ಲಿ ಸಿದ್ಧಿಯನ್ನು ಬಯಸುವವರು ನನ್ನನ್ನು ಭಜಿಸುತ್ತಾರೆ; ಆದ್ದರಿಂದ ನಾನು **ದಾಮೋದರ**ನು, ಅನ್ನ, ವೇದ, ಅಪ್ಪು, ಅಮೃತ ಇವಕ್ಕೆ 'ಪೃಶ್ನಿ'ಎಂದು ಹೆಸರು. ಇವು ಯಾವಾಗಲೂ ನನ್ನ ಗರ್ಭವಾಗಿರುವದರಿಂದ ನಾನು **ಪೃಶ್ನಿಗರ್ಭ**ನು. ಋಷಿಗಳು ನನ್ನನ್ನು ಕುರಿತು ಹೀಗೆನ್ನುತ್ತಾರೆ: 'ಏಕತದ್ವಿತರು ಕೆಡವಿದ್ದರಿಂದ ಭಾವಿಯೊಳಕ್ಕೆ ಬಿದ್ದ ತ್ರಿತನನ್ನು ಕಾಪಾಡು!' ಎಂದು ಭಾವಿಯೊಳಗಿಂದ ಪೃಶ್ನಿಗರ್ಭನೆಂಬ ಹೆಸರಿನಿಂದ ನನ್ನನ್ನು ಕೂಗಿಕರೆದದ್ದರಿಂದ ಆ ಬ್ರಹ್ಮನ ಪುತ್ರನು ಮೇಲಕ್ಕೆ ಎದ್ದನು. ಲೋಕಗಳನ್ನು ತಪಿಸುತ್ತಿರುವ ಸೂರ್ಯನ, ಅಗ್ನಿಯ ಮತ್ತು ಚಂದ್ರನ ಕಿರಣಗಳು ನನ್ನ ಕೇಶಗಳೆನಿಸುವವು; ಅವುಗಳಿಂದ ಸಂಚರಿಸುವದರಿಂದ ನಾನು **ಕೇಶವ**ನು ಎಂದು ಸರ್ವಜ್ಞರಾದ ಋಷಿವರ್ಯರು ಹೇಳುತ್ತಾರೆ. ಹೀಗೆ **'ಕೇಶವ'**ನೆಂಬ ನನ್ನ ನಾಮವು ದೇವತೆಗಳಿಗೂ ಮಹಾತ್ಮರಾದ ಋಷಿಗಳಿಗೂ ವರಪ್ರದವಾಗಿರುತ್ತದೆ. ಅಗ್ನಿಯು ಸೋಮನೊಡನೆ ಸಂಯುಕ್ತನಾಗಿ

ಏಕಯೋನಿತ್ವವನ್ನು ಹೊಂದಿರುತ್ತಾನೆ; ಆದ್ದರಿಂದ ಚರಾಚರವಾದ ಜಗತ್ತೆಲ್ಲವೂ ಅಗ್ನಿಷೋಮಮಯವಾಗಿರುತ್ತದೆ. ಇದಲ್ಲದೆ ಪುರಾಣದಲ್ಲಿ ಹೀಗೆಂದಿರುತ್ತದೆ: "ಅಗ್ನಿಷೋಮರು ಏಕಯೋನ್ಯಾತ್ಮರಾಗಿರುತ್ತಾರೆ; ದೇವತೆಗಳೂ ಅಗ್ನಿಮುಖರಾಗಿರುತ್ತಾರೆ. ಹೀಗೆ ಅವರಿಬ್ಬರೂ ಏಕಯೋನಿಗಳಾಗಿರುವದರಿಂದಲೇ ಪರಸ್ಪರವಾಗಿ ಭೋಕ್ತೃ ಭೋಗ್ಯಭಾವವನ್ನು ಹೊಂದಿರುತ್ತಾರೆ. ಲೋಕಗಳನ್ನು ಧರಿಸಿ ಕೊಂಡಿರುತ್ತಾರೆ."

* * * * *

## 10. ಶ್ರೀ ಕೃಷ್ಣಾರ್ಜುನಸಂವಾದ*

## (1)

ಅರ್ಜುನನು ಹೀಗೆಂದು ಕೇಳಿದನು: 'ಎಲೈ ಮಧುಸೂದನನೆ, ಅಗ್ನೀಷೋಮರು ಪೂರ್ವದಲ್ಲಿ ಏಕಯೋನಿಗಳಾದದ್ದು ಹೇಗೆ? ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿರುತ್ತದೆ. ಇದನ್ನು ಕತ್ತರಿಸು.'

ಇದಕ್ಕೆ ಶ್ರೀಭಗವಂತನು ಕೊಟ್ಟ ಉತ್ತರವೇನೆಂದರೆ: ಎಲೈ ಪಾಂಡುನಂದನನೆ, ಹಿಂದೆ ನನ್ನ ತೇಜಸ್ಸಿನಿಂದ ಜಗತ್ತು ಹೇಗೆ ಉಂಟಾಯಿತೆಂಬುದನ್ನು ಹೇಳುವೆನು ಕೇಳು: ಸಾವಿರ ಚತುರ್ಯುಗಗಳು ಮುಗಿದು ಕೊನೆಯಲ್ಲಿ ಪ್ರಲಯಕಾಲವು ಬಂದೊದಗಲಾಗಿ, ಅವ್ಯಕ್ತದಲ್ಲಿ ಸರ್ವಸ್ಥಾವರಜಂಗಮ ಭೂತಗಳು ಲಯವಾಗಿ ಪೃಥಿವಿ, ವಾಯು, ಅಗ್ನಿ- ಇವು ಯಾವವೂ ಇಲ್ಲದೆ ತಮಸ್ಸುಂಟಾಗಿ ಲೋಕವೆಲ್ಲವೂ ಜಲಸಾಗರವೊಂದೇ ಆಗಲು; ಅಪ್ಪು ಎಂದೇ ಬ್ರಹ್ಮವೆಂಬ ಹೆಸರಿನ ಅದ್ವಿತೀಯವೊಂದೇ ಇರುತ್ತಿರಲು, ರಾತ್ರಿಯಲ್ಲದೆ ಹಗಲಲ್ಲದೆ, ಸತ್ತಲ್ಲದೆ, ಅಸತ್ತಲ್ಲದೆ, ವ್ಯಕ್ತವಲ್ಲದೆ ಅವ್ಯಕ್ತವೂ ಅಲ್ಲದೆ ಇರುತ್ತಿರುವಲ್ಲಿ; ಇಂತೀ ಸ್ಥಿತಿಯಲ್ಲಿ ನಾರಾಯಣಗುಣಗಳಿಗೆ ಆಶ್ರಯವಾದ, ಅಜರವಾದ, ಅಮರವಾದ, ಅನಿಂದ್ರಿಯವಾದ, ಅಗ್ರಾಹ್ಯವಾದ, ಅಸಂಭವವಾದ, ಸತ್ಯವಾದ, ಅಹಿಂಸ್ರವಾದ, ಚಿಂತಾಮಣಿ

---

* ಸಂಪುಟ 37; ಸಂಚಿಕೆ 4; ಡಿಸೆಂಬರ್ 1967

ಯಂತಿರುವ, ವಿವಿಧವಾದ ಪ್ರವೃತ್ತಿವಿಶೇಷಗಳುಳ್ಳ, ಅವೈರವಾದ, ಅಕ್ಷಯವಾದ, ಅಮರವಾದ, ಅಜರವಾದ, ಅಮೂರ್ತಿಯಾದ, ಸರ್ವವ್ಯಾಪಿಯಾದ, ಸರ್ವಕರ್ತೃವಾದ, ಶಾಶ್ವತವಾದ ತಮಸ್ಸಿನಿಂದ ಅವ್ಯಯನಾದ ಹರಿಯು ತೋರಿಕೊಂಡನು. ಈ ವಿಷಯಕ್ಕೆ ಶ್ರುತಿ ಪ್ರಮಾಣವೂ ಇದೆ:

**ನಾಸೀದಹೋ ನ ರಾತ್ರಿರಾಸೀನ್ನ ಸದಾಸೀನ್ನಾಸದಾಸೀತ್।**
**ತಮ ಏವ ಪುರಸ್ತಾದಭವತ್ ವಿಶ್ವರೂಪಮ್। ಸಾ ವಿಶ್ವರೂಪಸ್ಯ ರಜನೀ ಹಿ।**

(ಪ್ರಲಯ ಕಾಲದಲ್ಲಿ ಹಗಲೂ, ರಾತ್ರಿಯೂ ಇರಲಿಲ್ಲ; ಸತ್ತೂ, ಅಸತ್ತೂ ಇರಲಿಲ್ಲ. ಕೇವಲ ತಮಸ್ಸು. ಅದು ಸರ್ವರೂಪವಾಗಿ ವಿಶ್ವರೂಪನ ರಾತ್ರಿಕಾಲ- ಹೀಗೆ ಶ್ರುತ್ಯರ್ಥವಿದೆ.)

ಇದರ ಅರ್ಥವನ್ನು ಮತ್ತೆ ವಿವರಿಸಲಾಗುವದು: ಈಗ ತಮಸ್ಸಿನಿಂದ ಹುಟ್ಟಿದ ಪುರುಷನು ಬ್ರಹ್ಮಯೋನಿಯಿಂದ ಪ್ರಾದುರ್ಭೂತನಾಗಲು ಆ ಪುರುಷನು ಪ್ರಜೆಗಳನ್ನು ಸೃಷ್ಟಿಸಬೇಕೆಂದು ತನ್ನ ನೇತ್ರಗಳಿಂದ ಅಗ್ನೀಷೋಮರನ್ನು ಹುಟ್ಟಿಸಿದನು. ಆ ಬಳಿಕ ಭೂತಸರ್ಗಗಳು ಸೃಷ್ಟಿಯಾದ ಬಳಿಕ ಪ್ರಜಾಸೃಷ್ಟಿಕ್ರಮದಿಂದ ಬ್ರಹ್ಮವೂ ಕ್ಷತ್ರವೂ ಉಂಟಾದವು. ಸೋಮವೇ ಬ್ರಹ್ಮ, ಬ್ರಹ್ಮವೇ ಬ್ರಾಹ್ಮಣರು; ಅಗ್ನಿಯೇ ಕ್ಷತ್ರವು. ಕ್ಷತ್ರಕ್ಕಿಂತಲೂ ಬ್ರಹ್ಮವು ಪ್ರಬಲವು. ಹೇಗೆಂದರೆ ಇದು ಲೋಕಕ್ಕೆಲ್ಲ ಪ್ರತ್ಯಕ್ಷವಾಗಿರುತ್ತದೆ. ಬ್ರಾಹ್ಮಣನಿಗಿಂತ ಹೆಚ್ಚಿನ ಪ್ರಾಣಿಯು ಹಿಂದೆ ಹುಟ್ಟಿರುವದೇ ಇಲ್ಲ. ಬ್ರಾಹ್ಮಣನ ಮುಖದಲ್ಲಿ ಯಾವನು ಹೋಮಮಾಡುತ್ತಾನೋ ಅವನು ದೀಪ್ತವಾಗಿರುವ ಅಗ್ನಿಯಲ್ಲಿ ಹೋಮಮಾಡಿದವನಾಗುತ್ತಾನೆ; ಆದ್ದರಿಂದಲೇ ಹೀಗೆಂದು ಹೇಳುತ್ತಿರುವೆನು. ಬ್ರಹ್ಮನು ಭೂತಸರ್ಗವನ್ನು ಮಾಡಿ ಭೂತಗಳನ್ನು ಪ್ರತಿಷ್ಠಾಪನೆಮಾಡಿ ಮೂರುಲೋಕಗಳನ್ನೂ ಧರಿಸುತ್ತಿರುವನು. ಈ ಅಭಿಪ್ರಾಯವನ್ನು ಹೇಳುವ ಮಂತ್ರವೂ ಇದೆ: 'ತ್ವಮಗ್ನೇ ಯಜ್ಞಾನಾಂ ಹೋತಾ ವಿಶ್ವೇಷಾಂ ಹಿತೋ ದೇವಾನಾಂ ಮಾನುಷಾಣಾಂ ಚ ಜಗತ ಇತಿ ॥' (ಎಲೈ ಅಗ್ನಿಯೆ, ನೀನು ಯಜ್ಞಗಳ ಹೋತೃ; ಎಲ್ಲಾ ದೇವತೆಗಳ ಮನುಷ್ಯರ ಮತ್ತು ಜಗತ್ತಿನ ಹಿತವನ್ನು ಬಯಸುವಾತನು). ಈ ವಿಷಯಕ್ಕೆ (ಶ್ರುತಿ) ನಿದರ್ಶನವೂ ಇದೆ: 'ವಿಶ್ವೇಷಾಮಗ್ನೇ ಯಜ್ಞಾನಾಂ ತ್ವಂ ಹೋತೇತಿ ತ್ವಂ ಹಿತೋ

ದೇವೈರ್ಮನುಷ್ಯೈರ್ಜಗತ ಇತಿ' (ಎಲೈ ಅಗ್ನಿಯೆ, ಎಲ್ಲಾ ಯಜ್ಞಗಳಿಗೂ ನೀನು ಹೋತೃ. ದೇವತೆಗಳಿಂದಲೂ ಮನುಷ್ಯರಿಂದಲೂ ಕೂಡಿದ ಜಗತ್ತಿಗೆ ನೀನೇ ಹಿತಕಾರಿ). ಅಗ್ನಿಯೇ ಅಲ್ಲವೆ, ಯಜ್ಞಗಳ ಹೋತೃ, ಕರ್ತೃ? ಆ ಅಗ್ನಿಯು ಬ್ರಾಹ್ಮಣನೇ, ಏಕೆಂದರೆ ಮಂತ್ರಗಳಿಲ್ಲದೆ ಹವನವಿರುವದಿಲ್ಲ; ಪುರುಷನಿಲ್ಲದೆ ತಪಸ್ಸು ಸಂಭವಿಸದು. ಹವಿರ್ಯುಕ್ತಮಂತ್ರಗಳಿಂದ ದೇವತೆಗಳ, ಮನುಷ್ಯರ ಮತ್ತು ಋಷಿಗಳ ಪೂಜೆಯಾಗುತ್ತದೆ. ಆದ್ದರಿಂದ ಅಗ್ನಿಯೆ, ನೀನು ಹೋತೃವೆಂದು ನಿಯುಕ್ತನಾಗಿರುವೆ. ಮನುಷ್ಯರಲ್ಲಿ ಹೋತ್ರಧಿಕಾರವುಳ್ಳವರು ಯಾರೆಂದರೆ ಬ್ರಾಹ್ಮಣರೇ; ಬ್ರಾಹ್ಮಣನಿಗೇ ಅಲ್ಲವೆ, ಯಾಜನವು ವಿಹಿತವಾಗಿರುತ್ತದೆ? ಕ್ಷತ್ರ, ವೈಶ್ಯ– ಎಂಬ ದ್ವಿಜರಿಗೆ ವಿಹಿತವಾಗಿಲ್ಲ. ಆದ್ದರಿಂದ ಅಗ್ನಿರೂಪರಾದ ಬ್ರಾಹ್ಮಣರೇ ಯಜ್ಞಗಳನ್ನು ನಿರ್ವಹಿಸುತ್ತಾರೆ. ಆ ಯಜ್ಞಗಳು ದೇವತೆಗಳನ್ನು ತೃಪ್ತಿಗೊಳಿಸುತ್ತವೆ; ದೇವತೆಗಳು ಪೃಥಿವಿಯನ್ನು ತೃಪ್ತಿಗೊಳಿಸುವರು; **ಶತಪಥಬ್ರಾಹ್ಮಣ**ದಲ್ಲಿಯೂ ಬ್ರಾಹ್ಮಣಮುಖದ ವಿಷಯವು ಬಂದಿರುತ್ತದೆ: ಯಾವವಿವೇಕಿಯು ಬ್ರಾಹ್ಮಣ ಮುಖದಿಂದ ಹೋಮ ಮಾಡುತ್ತಾನೋ, ಅವನು ದೀಪ್ತವಾದ ಅಗ್ನಿಯಲ್ಲಿ ಹೋಮಮಾಡಿದವನಾಗುತ್ತಾನೆ; ಹೀಗೂ ಅಗ್ನಿರೂಪರಾದ ಬ್ರಾಹ್ಮಣವಿದ್ವಾಂಸರು ಅಗ್ನಿಯನ್ನು ಆರಾಧಿಸಿದವರಾಗುತ್ತಾರೆ. ಅಗ್ನಿಯು ವಿಷ್ಣುವು, ಅವನು ಸರ್ವಭೂತ ಗಳಲ್ಲಿಯೂ ಒಳಹೊಕ್ಕು ಪ್ರಾಣಗಳನ್ನು ಧಾರಣೆಮಾಡುತ್ತಿರುತ್ತಾನೆ, ಮತ್ತು ಈ ವಿಷಯಕ್ಕೆ **ಸನುತ್ಕುಮಾರನು** ಗಾನಮಾಡಿದ ಶ್ಲೋಕಗಳೂ ಉಂಟು: "ಬ್ರಹ್ಮನು ಮೊದಲು ಸೃಷ್ಟಿಯನ್ನು ಮಾಡಿದನು. ಯಾರಿಗೆ ಬ್ರಹ್ಮವೇ ಉತ್ಪತ್ತಿಸ್ಥಾನವೋ ಅವರು ಅಮರರಾಗಿ ಬ್ರಹ್ಮಘೋಷಗಳಿಂದ ಸ್ವರ್ಗಲೋಕಕ್ಕೆ ಹೋಗುವರು. ಬ್ರಾಹ್ಮಣರ ಬುದ್ಧಿಯೂ ವಾಕ್ಯವೂ ಕರ್ಮವೂ ಶ್ರದ್ಧೆಯೂ ತಪಸ್ಸೂ ವಚನಾಮೃತವೂ– ಇವು ಪೃಥ್ವಿಯನ್ನೂ ಸ್ವರ್ಗವನ್ನೂ ಧಾರಣೆಮಾಡುತ್ತವೆ. ಸತ್ಯಕ್ಕಿಂತ ಹೆಚ್ಚಿನ ಧರ್ಮವಿಲ್ಲ, ಮಾತೃಸಮನಾದ ಗುರುವಿಲ್ಲ. ಈ ಲೋಕದ ಮತ್ತು ಪರಲೋಕದ ಅಭ್ಯುದಯಕ್ಕೆ ಬ್ರಾಹ್ಮಣನಿಗಿಂತ ಹೆಚ್ಚಿನದಾದ ಕಾರಣವು ಮತ್ತೊಂದಿಲ್ಲ. ಯಾರ ರಾಷ್ಟ್ರದಲ್ಲಿ ಬ್ರಾಹ್ಮಣರಿಗೆ ಯಾವ ವೃತ್ತಿಯೂ ಇರುವದಿಲ್ಲವೋ ಅವರ ರಾಜ್ಯದಲ್ಲಿ ವಾಹನಗಳಾದ ಎತ್ತು, ಕುದುರೆ, ಮತ್ತೊಬ್ಬರಿಗೆ ಕೊಡುವದಕ್ಕಾಗಿ ಕಡೆಯುವ ಹಾಲುಮೊಸರು– ಇವು ಯಾವವೂ ಇರುವದಿಲ್ಲ. ಅವರು

ಮರ್ಯಾದಾಭ್ರಷ್ಟರಾಗಿ ದಸ್ಯುಗಳಾಗುವರು." ವೇದ, ಪುರಾಣಗಳು, ಇತಿಹಾಸ– ಇವುಗಳ ಪ್ರಾಮಾಣ್ಯದಿಂದ ಬ್ರಾಹ್ಮಣರು ನಾರಾಯಣ ಮುಖದಿಂದ ಉತ್ಪನ್ನರಾಗಿರುವರು. ಅವರು ಸರ್ವಾತ್ಮರೂ, ಸರ್ವಕರ್ತೃಗಳೂ ಸರ್ವಭಾವ ಸ್ವರೂಪರೂ ಆಗಿರುತ್ತಾರೆ. ವಾಕ್ಸಂಯಮಕಾಲದಲ್ಲಿ ಹಿತನೂ ವರಪ್ರದಾತೃವೂ ದೇವದೇವನೂ ಆದ ಬ್ರಹ್ಮನಿಂದ ಅವರು ಮೊದಲು ಹುಟ್ಟಿದರು; ಬ್ರಾಹ್ಮಣರಿಂದ ಮಿಕ್ಕ ವರ್ಣಗಳು ಹುಟ್ಟಿದವು. ಹೀಗೆ ಸುರಾಸುರರಿಗಿಂತಲೂ ಬ್ರಾಹ್ಮಣರು ಶ್ರೇಷ್ಠರು. ಪೂರ್ವದಲ್ಲಿ ಬ್ರಹ್ಮರೂಪಿಯಾಗಿ ನಾನೇ ಸುರರು, ಅಸುರರು, ಮಹರ್ಷಿಗಳು, ಭೂತವಿಶೇಷಗಳು– ಇವೆರೆಲ್ಲರನ್ನೂ ಸೃಷ್ಟಿಸಿ ಸ್ಥಾಪನೆಮಾಡಿ ನಿಗ್ರಹವನ್ನು ಮಾಡಿರುತ್ತೇನೆ.

* * * * *

# 10. ಶ್ರೀ ಕೃಷ್ಣಾರ್ಜುನಸಂವಾದ*
# (2)

**ಭಗವಂತನು ಇಂತೆಂದನು :**

ಅಹಲ್ಯೆಯನ್ನು ಕೆಣಕಿದ ನಿಮಿತ್ತದಿಂದ ಗೌತಮಶಾಪದಿಂದ ಇಂದ್ರನು ಹರಿಶ್ಮಶ್ರುವಾದನು. ವಿಶ್ವಾಮಿತ್ರರ ಶಾಪದಿಂದ ಇಂದ್ರನು ವೃಷಣಗಳನ್ನು ಕಳೆದುಕೊಂಡು ಟಗರಿನ ವೃಷಣವನ್ನು ಪಡೆದನು. ಅಶ್ವಿನೀದೇವತೆಗಳಿಗೆ ಭಾಗವನ್ನು ಕೊಡಬಾರದೆಂದು ವಜ್ರಾಯುಧವನ್ನೆತ್ತಿದಕಾರಣ ಇಂದ್ರನಿಗೆ ಚ್ಯವನರ್ಷಿಯಿಂದ ತೋಳುಗಳು ಹಾಗೆಯೇ ನಿಲ್ಲಿಸಲ್ಪಟ್ಟವು. ಯಜ್ಞವಿಘ್ನದಿಂದ ಸಿಟ್ಟಿಗೆದ್ದ ದಕ್ಷನು ಹೆಚ್ಚಿನ ತಪಸ್ಸನ್ನು ಮಾಡಿ ರುದ್ರನಿಗೆ ಹಣೆಯಲ್ಲಿ ಮತ್ತೊಂದು ಕಣ್ಣಿನ ಆಕೃತಿಯನ್ನು ನಿರ್ಮಿಸಿದನು. ತ್ರಿಪುರಗಳನ್ನು ನಾಶಮಾಡುವದಕ್ಕೆಂದು ದೀಕ್ಷೆಯನ್ನು ಕೈಕೊಂಡ ರುದ್ರನಮೇಲೆ ಶುಕ್ರಾಚಾರ್ಯನು ಜಟೆಗಳನ್ನು ಕಿತ್ತು ಪ್ರಯೋಗಿಸಿದಮೇಲೆ ಅವುಗಳಿಂದ ಹುಟ್ಟಿದ ಹಾವುಗಳಿಂದ ಪೀಡಿತನಾದ ರುದ್ರನ ಕಂಠವು ನೀಲವರ್ಣ

---

* ಸಂಪುಟ 37; ಸಂಚಿಕೆ 5; ಜನವರಿ 1968

ವಾಯಿತು. ಹಿಂದಿನ ಸ್ವಾಯಂಭುವ ಮನ್ವಂತರದಲ್ಲಿ ನಾರಾಯಣನು ಹಸ್ತಗ್ರಹಣ ಮಾಡಿದ್ದರಿಂದಲೂ ಅವನಿಗೆ ನೀಲಕಂಠತ್ವವುಂಟಾಯಿತು. ಅಮೃತೋತ್ಪತ್ತಿಯ ಕಾಲದಲ್ಲಿ ಆಂಗಿರಸ ಬೃಹಸ್ಪತಿಯು ಪುರಶ್ಚರಣಮಾಡುವಲ್ಲಿ ಆಚಮನ ಮಾಡಿದ ನೀರು ಸ್ವಚ್ಛವಾಗಿರಲಿಲ್ಲ; ಆಗ ಬೃಹಸ್ಪತಿಯು ಕುಪಿತನಾಗಿ 'ನಾನು ಆಚಮನ ಮಾಡುವಾಗ, ಕಲುಷೀಭೂತವಾಗಿ ನಿರ್ಮಲವಾಗದೆ ಇದ್ದಕಾರಣ ಇನ್ನು ಮೇಲೆ ಮೀನು, ಮೊಸಳೆ, ಆಮೆ– ಮುಂತಾದ ಪ್ರಾಣಿಗಳಿಂದ ನೀನು ಕಲುಷಿತವಾಗು!' ಎಂದನು; ಅಂದಿನಿಂದ ನೀರೆಲ್ಲವೂ ಜಲಜಂತುಗಳಿಂದ ಸಂಕೀರ್ಣವಾಯಿತು.

ವಿಶ್ವರೂಪನಾದ ತ್ವಷ್ಟೃವಿನ ಮಗನು ದೇವತೆಗಳಿಗೆ ಪುರೋಹಿತನಾಗಿದ್ದನು. ಅವನು ಪ್ರತ್ಯಕ್ಷವಾಗಿ ದೇವತೆಗಳಿಗೂ ಪರೋಕ್ಷವಾಗಿ ಅಸುರರಿಗೂ ಭಾಗವನ್ನು ಕೊಡುತ್ತಿದ್ದನು. ಹೀಗಿರುವಲ್ಲಿ ಹಿರಣ್ಯಕಶಿಪುವೇ ಮೊದಲಾದ ಅಸುರರು ವಿಶ್ವರೂಪನ ತಾಯಿಯಾದ ಸ್ವಸೃವಿನ ಬಳಿಗೆಬಂದು ತಾಯೆ, ವಿಶ್ವರೂಪನೂ ತ್ರಿಶಿರಸನೂ ಆಗಿರುವ ನಿನ್ನ ಮಗನಾದ ತ್ವಾಷ್ಟ್ರನು ದೇವತೆಗಳ ಪುರೋಹಿತನಾಗಿ, ಪ್ರತ್ಯಕ್ಷವಾಗಿ ದೇವತೆಗಳಿಗೂ ಪರೋಕ್ಷವಾಗಿ ನಮಗೂ ಭಾಗವನ್ನು ಕೊಡುತ್ತಿದಾನೆ; ಇದರಿಂದ ದೇವತೆಗಳು ವೃದ್ಧಿಯನ್ನು ಪಡೆಯುತ್ತಿದಾರೆ. ನಾವು ಕ್ಷೀಣರಾಗುತ್ತಿದೇವೆ. ಇವನನ್ನು ಕರೆದು ಅವನು ನಮ್ಮ ಕಡೆಗೆ ಒಲಿಯುವಂತೆ ಮಾಡು – ಎಂದು ಬೇಡಿಕೊಂಡರು. ಒಮ್ಮೆ ನಂದನವನಕ್ಕೆ ವಿಶ್ವರೂಪನು ಬಂದಾಗ ತಾಯಿಯು 'ಮಗನೆ, ಪರಪಕ್ಷವು ವೃದ್ಧಿಯಾಗುವಂತೆಯೂ ಸೋದರಮಾವನ ಪಕ್ಷವು ನಾಶವಾಗುವಂತೆಯೂ ಏಕೆ ಮಾಡುತ್ತಿರುವೆ? ಹೀಗೆ ಮಾಡದಿರು' ಎಂದಳು. ಆ ವಿಶ್ವರೂಪನು ಮಾತೃವಚನವನ್ನು ಮೀರಬಾರದೆಂದುಕೊಂಡು ಹಿರಣ್ಯಕಶಿಪುವಿನ ಬಳಿಗೆ ಬಂದನು. ಹಿರಣ್ಯಗರ್ಭನ ಮಗನಾದ ವಸಿಷ್ಠರ್ಷಿಯಿಂದ ಹಿರಣ್ಯಕಶಿಪುವಿಗೆ ಶಾಪವು ತಟ್ಟಿತು. 'ನೀನು ಮತ್ತೊಬ್ಬ ಹೋತೃವನ್ನು ವರಣ ಮಾಡಿರುವೆಯಾದ್ದರಿಂದ ನಿನ್ನ ಯಜ್ಞವು ಸಮಾಪ್ತವಾಗದೆ ಇರಲಿ; ನಿನಗೆ ಅಪೂರ್ವವಾದ ಪ್ರಾಣಿಯಿಂದ ಮರಣವೊದಗಲಿ!' ಎಂದು ವಸಿಷ್ಠನು ಶಪಿಸಿದ್ದನು. ಆ ಶಾಪವನ್ನು ಹೊಂದಿದ ಹಿರಣ್ಯಕಶಿಪುವು ಹಾಗೆಯೇ ವಧೆಯನ್ನು ಪಡೆದನು. ಹೀಗಿರಲು ವಿಶ್ವರೂಪನು ತಾಯಿಯ ಪಕ್ಷವನ್ನು ವೃದ್ಧಿಗೊಳಿಸಬೇಕೆಂದು ಉಗ್ರವಾದ ತಪಸ್ಸನ್ನು ಮಾಡಿದನು. ಅವನ ವ್ರತಭಂಗಕ್ಕಾಗಿ ಇಂದ್ರನು ಅಪ್ಸರಃಸ್ತ್ರೀಯರನ್ನು ನಿಯೋಜಿಸಿದನು. ಅವರ ದರ್ಶನದಿಂದ

ಚಂಚಲಚಿತ್ತನಾದ ತ್ವಾಷ್ಟ್ರನು ಅವರಲ್ಲಿಯೇ ಆಸಕ್ತನಾದನು. ಇವನು ಸಕ್ತನಾಗಿದಾನೆಂಬುದನ್ನು ತಿಳಿದು ಅಪ್ಸರಸ್ತ್ರೀಯರು 'ನಾವು ಹೋಗುತ್ತೇವೆ' ಎಂದರು. ಅವನು 'ಎಲ್ಲಿಗೆ ಹೋಗುವಿರಿ? ನನ್ನೊಡನೆಯೇ ಇರಿ. ನಿಮಗೆ ಒಳ್ಳೆಯದಾಗಲಿ!' ಎನ್ನಲು 'ನಾವು ದೇವಸ್ತ್ರೀಯರು, ನಮಗೆ ಇಂದ್ರನೇ ವರದನು: ಆತನೇ ನಮಗೆ ಬೇಕು' ಎಂದರು. ಆಗ ವಿಶ್ವರೂಪನು ಇಂದೇ ಸೇಂದ್ರದೇವತೆಗಳು ಇಲ್ಲವಾಗುವರು!' ಎಂದು ಮಂತ್ರಗಳನ್ನು ಜಪಿಸಿದನು. ಆ ಮಂತ್ರಗಳಿಂದ ತ್ರಿಶಿರನು ವೃದ್ಧಿಯಾದನು. ಸರ್ವಲೋಕಗಳಲ್ಲಿಯೂ ಕರ್ಮಠರಾದ ದ್ವಿಜರು ಹೋಮಮಾಡಿದ ಸೋಮವನ್ನು ಕುಡಿಯುತ್ತಿದ್ದನು; ಒಂದು ಬಾಯಿಯಿಂದ ಅನ್ನವನ್ನು ಉಣ್ಣುತ್ತಿದ್ದನು; ಮತ್ತೊಂದರಿಂದ ಸೇಂದ್ರದೇವತೆಗಳನ್ನು ತಿನ್ನುತ್ತಿದ್ದನು.

ಆಗ ಇಂದ್ರನು ಸೋಮಪಾನದಿಂದ ಸಂತುಷ್ಟನಾಗಿ ಅವನು ವಿವೃದ್ಧಿಯನ್ನು ಹೊಂದುತ್ತಿರುವದನ್ನು ಕಂಡು ದೇವತೆಗಳೊಡನೆ ಚಿಂತಾಕ್ರಾಂತನಾದನು. ಆ ದೇವತೆಗಳು ಇಂದ್ರಸಹಿತರಾಗಿ ಬ್ರಹ್ಮನ ಬಳಿಗೆ ಬಂದರು. "ವಿಶ್ವರೂಪನು ಎಲ್ಲಾ ಯಜ್ಞಗಳಲ್ಲಿಯೂ ಹುತವಾದ ಸೋಮವನ್ನು ಪಾನಮಾಡುತ್ತಿರುತ್ತಾನೆ; ನಮಗೆ ಭಾಗವಿಲ್ಲವಾಗಿದೆ, ಅಸುರರ ಪಕ್ಷವು ವೃದ್ಧಿಯನ್ನೈದುತ್ತಿದೆ, ನಾವು ಕ್ಷಯಿಸುತ್ತಿದೇವೆ. ಆದ್ದರಿಂದ ಇನ್ನು ಮುಂದೆ ನಮಗೆ ಹೇಗೆ ಶ್ರೇಯಸ್ಸಾಗಬೇಕೋ ಹಾಗೆ ದಯವಿಟ್ಟು ಮಾಡಬೇಕು" ಎಂದು ಬೇಡಿಕೊಂಡರು. ಬ್ರಹ್ಮನು ಅವರಿಗೆ ಇಂತೆಂದು ಉತ್ತರವಿತ್ತನು. "ಭಾರ್ಗವದಧೀಚಿ ಋಷಿಯು ತಪಸ್ಸುಮಾಡುತ್ತಿದಾನೆ. ಅವನು ಶರೀರತ್ಯಾಗವನ್ನು ಮಾಡುವಂತೆ ಮಾಡಿರಿ, ಅವನ ಮೂಳೆಗಳಿಂದ ವಜ್ರಾಯುಧ ವನ್ನು ಮಾಡಿಕೊಳ್ಳಿರಿ."

* * * * *

# 10. ಶ್ರೀ ಕೃಷ್ಣಾರ್ಜುನಸಂವಾದ*

## (3)

ಬಳಿಕ ದೇವತೆಗಳು ಭಗವಂತನಾದ ದಧೀಚನೆಂಬ ಋಷಿಯು ತಪಸ್ಸು ಮಾಡುತ್ತಿದ್ದಲ್ಲಿಗೆ ಬಂದರು. ಇಂದ್ರನೇ ಮೊದಲಾದ ದೇವತೆಗಳು ಆತನ ಬಳಿಗೆ ವಿನಯದಿಂದ ಬಂದು 'ಪೂಜ್ಯರೆ, ತಮ್ಮ ತಪಸ್ಸು ಚೆನ್ನಾಗಿ ನಡೆಯುತ್ತಿದೆಯೆ, ಅದಕ್ಕೆ ಯಾವ ಬಾಧೆಯೂ ಇಲ್ಲವಷ್ಟೆ?'ಎಂದು ಕೇಳಿದರು.

ಅದಕ್ಕೆ ದಧೀಚನು 'ನೀವುಗಳು ಬಂದದ್ದು ಒಳ್ಳೆಯದಾಯಿತು. ನಾನು ಏನುಮಾಡಬೇಕೋ ಹೇಳಿರಿ. ನಿಮ್ಮ ಇಷ್ಟದಂತೆ ನಡೆದುಕೊಳ್ಳುವೆನು' ಎಂದನು. ಆಗ ಅವರು 'ಲೋಕಹಿತಕ್ಕಾಗಿ ತಾವು ತಮ್ಮ ದೇಹವನ್ನು ತ್ಯಜಿಸಬೇಕು' ಎಂದರು.

ಅದಕ್ಕೆ ದಧೀಚನು ಮನಸ್ಸಿನಲ್ಲಿ ಸ್ವಲ್ಪವೂ ತಳಮಳಿಸದೆ ಸುಖದುಃಖಗಳ ವಿಷಯಕ್ಕೆ ಸಮನಾಗಿ ವರ್ತಿಸುತ್ತಿದ್ದ ಮಹಾಯೋಗಿಯಾದ್ದರಿಂದ ಆತ್ಮವನ್ನು ಸಮಾಧಿಯಲ್ಲಿಟ್ಟುಕೊಂಡು ಶರೀರತ್ಯಾಗವನ್ನು ಮಾಡಿಬಿಟ್ಟನು. ಅವನ ಪರಮಾತ್ಮನು ಶರೀರಸಂಬಂಧವನ್ನು ಬಿಡಲಾಗಿ ಬ್ರಹ್ಮನು ಅವನ ಮೂಳೆಗಳನ್ನು ಸಂಗ್ರಹಿಸಿಕೊಂಡು ವಜ್ರಾಯುಧವನ್ನು ಮಾಡಿದನು. ಆ ಅಭೇದ್ಯವೂ ಅಪ್ರದೃಷ್ಯವೂ ಆದ ವಜ್ರಾಯುಧವು ವಿಷ್ಣುವನ್ನು ಹೊತ್ತಿತು. ಅದರಿಂದ ಇಂದ್ರನು ವಿಶ್ವರೂಪನನ್ನು ಕೊಂದನು: ಅವನ ಶಿರಸ್ಸುಗಳನ್ನು ಕತ್ತರಿಸಿದನು. ಇದಾದ ಬಳಿಕ ವಿಶ್ವರೂಪನ ಶರೀರವನ್ನು ಮಥನಮಾಡಿ ಬ್ರಹ್ಮನು ನಿರ್ಮಿಸಿದ್ದ ಶತ್ರುವಾದ ವೃತ್ರಾಸುರನನ್ನು ಇಂದ್ರನು ವಧಿಸಿದನು.

ಹೀಗೆ ಎರಡು ಬಗೆಯಿಂದ ಬ್ರಹ್ಮಹತ್ಯೆಯು ತನ್ನನ್ನು ಮುಸುಕಲು ಇಂದ್ರನು ಭಯದಿಂದ ದೇವರಾಜ್ಯವನ್ನು ತ್ಯಜಿಸಿದನು. ಮಾನಸಸರಸ್ಸಿನಲ್ಲಿದ್ದ ತಣ್ಣನೆಯ ಕಮಲನಾಳವನ್ನು ಸೇರಿಕೊಂಡನು. ಅಲ್ಲಿ ತನ್ನ ಈಶಿತ್ವಮಹಿಮೆಯಿಂದ ಅಣುಮಾತ್ರನಾಗಿ ಕಮಲನಾಳದ ಒಳಗಿನ ನಾರಿನ ಗ್ರಂಥಿಯನ್ನು ಹೊಕ್ಕನು, ಹೀಗೆ ಬ್ರಹ್ಮಹತ್ಯೆಯ ಅಂಜಿಕೆಯಿಂದ ಮೂರು ಲೋಕದೊಡೆಯನಾದ ಇಂದ್ರನು

---

* ಸಂಪುಟ 37; ಸಂಚಿಕೆ 6; ಫೆಬ್ರವರಿ 1968

ಕಣ್ಮರೆಯಾಗಲು ಜಗತ್ತಿಗೆ ಒಡೆಯರಿಲ್ಲದಂತಾಯಿತು. ದೇವತೆಗಳನ್ನು ರಜಸ್ಸೂ ತಮಸ್ಸೂ ಸೇರಿಕೊಂಡವು, ಮಹರ್ಷಿಗಳ ಮಂತ್ರಗಳ ಪ್ರವೃತ್ತಿಯಿಲ್ಲವಾಯಿತು; ರಕ್ಕಸರು ಉದ್ಭವಿಸಿದರು; ವೇದವು ನಷ್ಟವಾಯಿತು. ಇಂದ್ರನಿಲ್ಲದ್ದರಿಂದ ದುರ್ಬಲವಾದ ಲೋಕಗಳ ಮೇಲೆ ಯಾರಾದರೂ ಸುಲಭವಾಗಿ ಬೀಳಬಹುದಾಯಿತು.

ಆ ಬಳಿಕ ದೇವತೆಗಳೂ ಋಷಿಗಳೂ ಆಯುಸ್ಸಿನ ಮಗನಾದ ನಹುಷನನ್ನು ದೇವರಾಜ್ಯದಲ್ಲಿ ಅಭಿಷೇಕಮಾಡಿದರು. ನಹುಷನು ಹಣೆಯಲ್ಲಿ ಜ್ವಲಿಸುತ್ತಿದ್ದ ಐನೂರು ಜ್ಯೋತಿಗಳಿಂದ ಎಲ್ಲಾ ಜ್ಯೋತಿಗಳನ್ನೂ ಮಂಕುಗೊಳಿಸುತ್ತಾ ಸ್ವರ್ಗವನ್ನು ಆಳುತ್ತಿದ್ದನು. ಆಗ ಎಲ್ಲರೂ ತಮ್ಮ ಸ್ವಾಭಾವಿಕಸ್ಥಿತಿಯನ್ನು ಪಡೆದುಕೊಂಡು ಸ್ವಸ್ಥರೂ ಹರ್ಷಯುಕ್ತರೂ ಆದರು.

ಬಳಿಕ ನಹುಷನು "ಇಂದ್ರನು ಅನುಭವಿಸುತ್ತಿದ್ದ ಭೋಗವೆಲ್ಲವೂ ನನ್ನ ವಶವಾಯಿತು. ಆದರೆ ಶಚೀದೇವಿಯು ಮಾತ್ರ ನನಗೆ ಲಭಿಸಿರುವದಿಲ್ಲ" ಎಂದುಕೊಂಡು ಆಕೆಯ ಬಳಿಗೆ ಬಂದು 'ಎಲೌ ಸೌಭಾಗ್ಯವತಿಯೆ, ನಾನು ದೇವತೆಗಳಿಗೆ ಇಂದ್ರನಾಗಿರುವೆನು, ನನ್ನ ಸೇವೆಯನ್ನು ಮಾಡು' ಎಂದನು. ಆಗ ಶಚಿಯು ನೀನು 'ಸ್ವಭಾವದಿಂದಲೇ ಧರ್ಮವತ್ಸಲನು, ಸೋಮವಂಶದಲ್ಲಿ ಜನಿಸಿರುತ್ತೀಯೆ; ಆದ್ದರಿಂದ ಪರಪತ್ನಿಯಮೇಲೆ ಬಲಾತ್ಕಾರ ಮಾಡಬಾರದು' ಎಂದಳು. ಆಗ ನಹುಷನು "ನಾನು ಈಗ ಇಂದ್ರನ ಸ್ಥಾನದಲ್ಲಿರುತ್ತೇನೆ. ಆದ್ದರಿಂದ ಇಂದ್ರರಾಜ್ಯದಲ್ಲಿ ಶ್ರೇಷ್ಠವಸ್ತುಗಳೆಲ್ಲ ನನ್ನವೇ; ಇದರಲ್ಲಿ ಅಧರ್ಮವೇನೂ ಇಲ್ಲ. ನೀನು ಇಂದ್ರನ ಉಪಭೋಗ್ಯವಸ್ತುವಲ್ಲವೆ?" ಎಂದನು. ಆಗ ಆಕೆಯು "ನಾನು ಮಾಡುತ್ತಿರುವ ವ್ರತವೊಂದು ಇನ್ನೂ ಮುಗಿದಿಲ್ಲ; ಅದರ ಪರಿಸಮಾಪ್ತಿಯಾದ ಬಳಿಕ ನಿನ್ನ ಬಳಿಗೆ ಕೆಲವು ದಿನಗಳೊಳಗೇ ಬರುವೆನು" ಎನ್ನಲು ನಹುಷನು ಹಿಂತೆರಳಿದನು.

ಬಳಿಕ ಶಚಿಯು ದುಃಖತಪ್ತಳಾಗಿ ಪತಿಯ ದರ್ಶನಕ್ಕಾಗಿ ಹಾತುವರಿಯುತ್ತಾ ನಹುಷನ ಅಂಜಿಕೆಯಿಂದ ಬೃಹಸ್ಪತಿಯ ಬಳಿಗೆ ಬಂದಳು. ಆಕೆಯು ಅತ್ಯಂತವಾಗಿ ತಳಮಳಗೊಂಡಿರುವದನ್ನು ಆತನು ಕಂಡು ಧ್ಯಾನಪರನಾಗಿ ಪತಿಕಾರ್ಯತತ್ಪರಳಾಗಿರುವಳೆಂದರಿತುಕೊಂಡು "ಇದೇ ವ್ರತದಿಂದ ನೀನು ತಪಸ್ಸಿನಿಂದೊಡಗೂಡಿ ವರದೆಯಾದ **ಉಪಶ್ರುತಿ**ಯನ್ನು ಆವಾಹನೆಮಾಡು, ಆಗ ಆಕೆಯು ನಿನಗೆ ಇಂದ್ರನ ದರ್ಶನವನ್ನು ಮಾಡಿಸುವಳು" ಎಂದನು.

# 10. ಶ್ರೀ ಕೃಷ್ಣಾರ್ಜುನಸಂವಾದ*

## (4)

ಬಳಿಕ ಆ ಶಚೀದೇವಿಯು ಹೆಚ್ಚಿನ ನಿಯಮದಲ್ಲಿದ್ದುಕೊಂಡು ವರದೆಯಾದ ಉಪಶ್ರುತಿದೇವಿಯನ್ನು ಮಂತ್ರಗಳಿಂದ ಆಹ್ವಾನಮಾಡಿದಳು. ಆ ಉಪಶ್ರುತಿಯು ಶಚಿಯ ಬಳಿಗೆ ಬಂದು 'ಇಗೊ, ನಿನ್ನ ಆಹ್ವಾನದಂತೆ ಬಂದಿರುತ್ತೇನೆ, ನಿನಗೇನು ಆಗಬೇಕು?' ಎಂದಳು. ಶಚಿಯು ಆಕೆಯನ್ನು ತಲೆಬಾಗಿ ನಮಸ್ಕರಿಸಿ 'ಭಗವತಿಯೆ, ನನ್ನ ಭರ್ತೃವನ್ನು ದಯವಿಟ್ಟು ತೋರಿಸು; ನೀನು ಸತ್ಯರೂಪಳೂ ಋತರೂಪಳೂ ಆಗಿರುವೆಯಲ್ಲವೆ?' ಎಂದು ಬೇಡಿಕೊಂಡಳು.

ಉಪಶ್ರುತಿಯು ಈಕೆಯನ್ನು ಮಾನಸಸರೋವರಕ್ಕೆ ಕೊಂಡೊಯ್ದು ಕಮಲನಾಳದಲ್ಲಿದ್ದ ಇಂದ್ರನನ್ನು ತೋರಿಸಿದಳು. ಆಗ ಕಂದಿಕುಂದಿರುವ ಪತ್ನಿಯನ್ನು ಕಂಡು, ಇಂದ್ರನು 'ಅಯ್ಯೋ, ನನಗೆ ಇನ್ನೊಂದು ದುಃಖವು ಬಂದೊದಗಿರುತ್ತದೆ. ಈಕೆಯು ನನ್ನನ್ನು ಕಾಣದೆ ಹುಡುಕಿಕೊಂಡು ಇಲ್ಲಿಗೆ ಬಂದಿರುತ್ತಾಳಲ್ಲ!' ಎಂದುಕೊಂಡು ಆಕೆಯನ್ನು ಕುರಿತು 'ನಿನ್ನ ಸ್ಥಿತಿ ಹೇಗಿದೆ?' ಎಂದು ಕೇಳಿದನು. ಆಕೆಯು 'ನಹುಷನು ನನ್ನನ್ನು ಪತ್ನಿಯಾಗೆಂದು ಕರೆದಿರುತ್ತಾನೆ, ಅದಕ್ಕೆ ನಾನು ಅವಧಿಯನ್ನು ಕೇಳಿಕೊಂಡಿರುತ್ತೇನೆ' ಎಂದಳು. ಅದಕ್ಕೆ ಇಂದ್ರನು ನಡೆ, ನಹುಷನಿಗೆ ಹೀಗೆಂದು ಹೇಳು: 'ಋಷಿಗಳು ಹೊರುವ ಅಪೂರ್ವಯಾನದಿಂದ ನನ್ನನ್ನು ಕರೆದುಕೊಂಡುಹೋಗು; ನಾನು ಈವರೆಗೆ ಎಷ್ಟೋ ದೊಡ್ಡದೊಡ್ಡ ವಾಹನಗಳನ್ನು ಹತ್ತಿರುವೆನು; ನೀನು ಅವಕ್ಕಿಂತ ಬೇರೆಯಾಗಿರುವ ಯಾನದಿಂದಲೇ ನನ್ನ ಬಳಿಗೆ ಬರಬೇಕು.' ಹೀಗೆನ್ನಲು ಆಕೆಯು ಹರ್ಷದಿಂದ ಹೊರಟುಹೋದಳು. ಇಂದ್ರನು ಮತ್ತೆ ಕಮಲನಾಳವನ್ನೇ ಸೇರಿಕೊಂಡನು.

ಬಳಿಕ ನಹುಷನು ಇಂದ್ರಾಣಿಯಿದ್ದಲ್ಲಿಗೆ ಬಂದು 'ನೀನು ಹೇಳಿದ ಕಾಲಾವಧಿಯು ಮುಗಿಯಿತು' ಎಂದನು. ಆಕೆಯು ಇಂದ್ರನು ಹೇಳಿದ ಮಾತನ್ನು ಹೇಳಲು ಹಾಗೇ ಆಗಲೆಂದು ಮಹರ್ಷಿಗಳು ಹೊತ್ತ ವಾಹನವನ್ನೇರಿ ಶಚಿಯ

---

* ಸಂಪುಟ 37; ಸಂಚಿಕೆ 7; ಮಾರ್ಚ್ 1968

ಬಳಿಗೆ ನಹುಷನು ಹೊರಟನು. ಆಗ ಮೈತ್ರಾವರುಣಿಯೂ ಕುಂಭಯೋನಿಯೂ ಆದ ಅಗಸ್ತ್ಯ ಋಷಿಶ್ರೇಷ್ಠನು ನಹುಷನು ಮಹರ್ಷಿಗಳನ್ನು ಧಿಕ್ಕರಿಸುತ್ತಿದ್ದದ್ದನ್ನು ಕಂಡು, ಕಾಲುಗಳಿಂದ ತನ್ನನ್ನು ಸ್ಪರ್ಶಿಸಿದ ಅ ನಹುಷನನ್ನು ಕುರಿತು "ಅಕಾರ್ಯದಲ್ಲಿ ಪ್ರವೃತ್ತನಾದ ಪಾಪಿಯೆ, ಭೂಮಿಯಮೇಲೆ ಬೀಳು! ಎಲ್ಲಿಯವರೆಗೂ ಬೆಟ್ಟಗಳೂ ಇರುವವೋ ಅಲ್ಲಿಯವರೆಗೆ ಸರ್ಪವಾಗಿರು" ಎಂದು ಶಪಿಸಿದನು. ಆಗ ನಹುಷನು ಆ ಮಹರ್ಷಿಯು ಮಾತಾಡುತ್ತಿದ್ದಂತೆಯೇ ಆ ಯಾನದಿಂದ ಕೆಳಕ್ಕೆ ಉರುಳಿದನು.

ಆ ಬಳಿಕ ತ್ರೈಲೋಕ್ಯವು ಮತ್ತೆ ಇಂದ್ರರಹಿತವಾಯಿತು. ಆಗ ದೇವತೆಗಳೂ ಋಷಿಗಳೂ ವಿಷ್ಣುಭಗವಂತನನ್ನು ಇಂದ್ರಪ್ರಾಪ್ತಿಗಾಗಿ ಶರಣುಹೊಕ್ಕು 'ಭಗವಂತನೆ, ಬ್ರಹ್ಮಹತ್ಯೆಯಿಂದ ತಿರಸ್ಕೃತನಾಗಿರುವ ಇಂದ್ರನನ್ನು ಕಾಪಾಡಬೇಕು' ಎಂದು ಬೇಡಿಕೊಂಡರು. ಆಗ ವರದನಾದ ಆ ಸ್ವಾಮಿಯು 'ಅಶ್ವಮೇಧವೆಂಬ ವೈಷ್ಣವ ಯಜ್ಞವನ್ನು ಇಂದ್ರನು ಅನುಷ್ಠಾನಮಾಡಲಿ! ಅದರಿಂದ ಅವನಿಗೆ ಅವನ ಸ್ಥಾನವು ಪ್ರಾಪ್ತವಾಗುವದು' ಎಂದನು. ದೇವತೆಗಳೂ ಋಷಿಗಳೂ ಇಂದ್ರನನ್ನು ಕಾಣದೆ, 'ಸೌಭಾಗ್ಯವತಿಯೆ, ಇಂದ್ರನನ್ನು ಕರೆದುಕೊಂಡು ಬಾ' ಎಂದರು. ಶಚಿಯು ಮತ್ತೆ ಅದೇ ಸರೋವರಕ್ಕೆ ಹೋಗಲು ಇಂದ್ರನು ಅಲ್ಲಿಂದೆದ್ದು ಬೃಹಸ್ಪತಿಯ ಬಳಿಗೆ ಬಂದನು. ಬೃಹಸ್ಪತಿಯು ಅಶ್ವಮೇಧಮಹಾಕ್ರತುವನ್ನು ಇಂದ್ರನಿಗಾಗಿ ಏರ್ಪಡಿಸಿದನು. ಆ ಕ್ರತುವಿಗೆ ಕೃಷ್ಣಸಾರಂಗವರ್ಣದ ಅಶ್ವವನ್ನು ಮೇಧ್ಯವಾಗಿ ಮಾಡಿಕೊಂಡು ಅದೇ ಅಶ್ವವನ್ನೇರಿ ದೇವತೆಗಳೊಡೆಯನಾದ ಇಂದ್ರನು ತನ್ನ ಸ್ಥಾನಕ್ಕೆ ಬರುವಂತೆ ಬೃಹಸ್ಪತಿಯು ಮಾಡಿದನು.

ಬಳಿಕ ಆ ದೇವರಾಜನು ದೇವತೆಗಳಿಂದಲೂ ಋಷಿಗಳಿಂದಲೂ ಸ್ತುತಿಗೈಸಿಕೊಳ್ಳುತ್ತಾ ಸ್ವರ್ಗವನ್ನು ಸೇರಿ ನಿಷ್ಕಲ್ಮಷನಾದನು; ಬ್ರಹ್ಮವಧೆಯ ದೋಷವನ್ನು ಸ್ತ್ರೀಯರು, ಅಗ್ನಿ, ವನಸ್ಪತಿಗಳು, ಗೋಗಳು– ಇವುಗಳಲ್ಲಿ ಹಂಚಿಟ್ಟನು. ಹೀಗೆ ಇಂದ್ರನು ಬ್ರಹ್ಮತೇಜಸ್ಸಿನ ಪ್ರಭಾವದ ಹೆಚ್ಚಿಗೆಯಿಂದ ಶತ್ರುವನ್ನು ವಧಿಸಿ ತನ್ನ ಸ್ಥಾನವನ್ನು ಸೇರಿದನು.

ದೇವತೆಗಳೂ ಋಷಿಗಳೂ ನಹುಷನ ಶಾಪಮೋಕ್ಷಕ್ಕಾಗಿ ಅಗಸ್ತ್ಯನನ್ನು

ಪ್ರಾರ್ಥಿಸಿಕೊಳ್ಳಲು ನಹುಷನ ಕುಲದಲ್ಲಿ ಹುಟ್ಟಿದ ಶ್ರೀಮಂತನೂ ಧರ್ಮರಾಜನೂ ಆದ ಯುಧಿಷ್ಠಿರನು ಅವನ ಪ್ರಶ್ನೆಗಳಿಗೆ ಉತ್ತರವನ್ನು ಯಾವಾಗ ಕೊಡುವನೋ ಆಗ ಭೀಮನೂ ನಹುಷನೂ ಬಿಡುಗಡೆಯನ್ನು ಹೊಂದುವರು– ಎಂದು ಅಗಸ್ತ್ಯನು ಉತ್ತರವನ್ನು ಕೊಟ್ಟನು.

* * * * *

## 10. ಶ್ರೀ ಕೃಷ್ಣಾರ್ಜುನಸಂವಾದ*

## (5)

ಶ್ರೀಭಗವಂತನು ಮತ್ತೂ ಹೇಳಿದನೇನೆಂದರೆ, ಪೂರ್ವದಲ್ಲಿ ಭರದ್ವಾಜ ಮಹರ್ಷಿಯು ಆಕಾಶಗಂಗೆಯ ಬಳಿಗೆ ಬಂದು ಆಚಮನಮಾಡಿದನು. ಅಲ್ಲಿಗೆ ಮೂರು ಹೆಜ್ಜೆಯಿಂದ ಲೋಕವನ್ನೆಲ್ಲ ಅಳೆದಿದ್ದ ವಿಷ್ಣುವು ಬಂದನು. ಅವನ ಎದೆಗೆ ನೀರಿನಿಂದ ಒದ್ದೆಯಾಗಿದ್ದ ಕೈಯಿಂದ ಭರದ್ವಾಜನು ಹೊಡೆದಿದ್ದರಿಂದ ಅವನ ಎದೆಯಲ್ಲಿ ಗುರುತಾಯಿತು. ಭೃಗುಮಹರ್ಷಿಯ ಶಾಪದಿಂದ ಅಗ್ನಿಯು ಸರ್ವಭಕ್ಷಕನಾದನು. ಅದಿತಿಯು ದೇವತೆಗಳಿಗೆ ಅನ್ನವನ್ನು ಅಟ್ಟಳು; ಇದನ್ನು ಉಂಡರೆ ಅವರು ಅಸುರರನ್ನು ಗೆಲ್ಲುವರು ಎಂಬುದು ಆಕೆಯ ಆಶಯ. ವ್ರತಚರ್ಯೆಯ ಸಮಾಪ್ತಿಕಾಲಕ್ಕೆ ಅಲ್ಲಿಗೆ ಬುಧನು ಬಂದು ಭಿಕ್ಷೆಯನ್ನು ಕೊಡು ಎಂದು ಕೇಳಿಕೊಂಡನು. ಇದನ್ನು ಮೊದಲು ದೇವತೆಗಳು ಭಕ್ಷಿಸಬೇಕು, ಮಿಕ್ಕವರಲ್ಲ – ಎಂದು ಅದಿತಿಯು ಭಿಕ್ಷೆಯನ್ನು ಅವನಿಗೆ ಹಾಕಲಿಲ್ಲ. ಆಕೆಯು ಭಿಕ್ಷೆಯಿಲ್ಲವೆಂದದ್ದರ ರೋಷದಿಂದ ಬ್ರಾಹ್ಮಣನಾದ ಬುಧನು ಅದಿತಿಯ ಉದರದಲ್ಲಿ ವ್ಯಥೆಯುಂಟಾಗಲಿ! ಅಂಡನೆಂಬ ಹೆಸರಿನ ವಿವಸ್ವಂತನೂ ಮುಂದಿನ ಜನ್ಮದಲ್ಲಿ ಅದಿತಿಯ ಉದರದಲ್ಲಿ ವಧೆಯಾಗಲಿ! ಎಂದು ಶಪಿಸಿದನು. ತಾಯಿಯಾದ ಅದಿತಿಯ ಉದರದಲ್ಲಿ ಆ ಅಂಡವು ನಾಶಿತವಾಯಿತು. ಮೃತವಾದ ಅಂಡದಿಂದ ಪ್ರಕಟನಾದ್ದರಿಂದ ವಿವಸ್ವಂತನು ಶ್ರಾದ್ಧದೇವನಾದ **ಮಾರ್ತಾಂಡ**ನಾದನು.

---

* ಸಂಪುಟ 37; ಸಂಚಿಕೆ 8; ಏಪ್ರಿಲ್ 1968

ದಕ್ಷಪ್ರಜಾಪತಿಗೆ ಅರುವತ್ತುಜನ ಹೆಣ್ಣುಮಕ್ಕಳಿದ್ದರು. ಅವನು ಅವರುಗಳಲ್ಲಿ ಹದಿಮೂವರನ್ನು ಕಶ್ಯಪನಿಗೆ ಕೊಟ್ಟನು; ಹತ್ತುಮಂದಿಯನ್ನು ಧರ್ಮನಿಗೆ, ಹತ್ತುಮಂದಿಯನ್ನು ಮನುವಿಗೆ, ಇಪ್ಪತ್ತೇಳು ಮಂದಿಯನ್ನು ಚಂದ್ರನಿಗೆ ಕೊಟ್ಟನು. ಸಮಾನರಾದ ಅವರೆಲ್ಲರಿಗೂ ನಕ್ಷತ್ರರೆಂಬ ಹೆಸರು. ಚಂದ್ರನಿಗೆ ಅವರೊಳಗೆ ರೋಹಿಣಿಯಲ್ಲಿ ಹೆಚ್ಚಿನ ಪ್ರೀತಿಯುಂಟಾಯಿತು. ಉಳಿದ ಪತ್ನಿಯರು ಈರ್ಷ್ಯೆಯಿಂದ ತಂದೆಯ ಬಳಿಗೆ ಹೋಗಿ 'ಭಗವಂತನೆ; ನಾವೆಲ್ಲರೂ ಸಮಾನ ಪ್ರಭಾವವುಳ್ಳವರಾಗಿದ್ದರೂ ಚಂದ್ರನು ರೋಹಿಣಿಯಲ್ಲಿ ಹೆಚ್ಚು ಪ್ರೇಮವುಳ್ಳವ ನಾಗಿರುತ್ತಾನೆ' ಎನ್ನಲು ಅವನು ಚಂದ್ರನಿಗೆ ಕ್ಷಯರೋಗವುಂಟಾಗಲಿ!– ಎಂದು ಶಪಿಸಿದನು. ಆ ಶಾಪದಿಂದ ಚಂದ್ರನಿಗೆ ರೋಗವುಂಟಾಯಿತು, ಆಗ ಅವನು ದಕ್ಷನ ಬಳಿಗೆ ಹೋಗಲು ಅವನು 'ನೀನು ಸಮವರ್ತಿಯಾಗಿಲ್ಲದ್ದರಿಂದ ಹೀಗಾಗಿದೆ' ಎಂದು ಉತ್ತರವಿತ್ತನು. ಅಲ್ಲಿದ್ದ ಋಷಿಗಳು 'ಪಶ್ಚಿಮಸಮುದ್ರಕ್ಕೆ ಹೊಗಿ ಹಿರಣ್ಯಸರಸ್ಸಿನಲ್ಲಿ ಸ್ನಾನವನ್ನು ಮಾಡು' ಎಂದು ಹೇಳಲು ಅದರಂತೆ ಅವನು ಅಲ್ಲಿಗೆ ಹೋಗಿ ಹಿರಣ್ಯಸರಸ್ತೀರ್ಥದಲ್ಲಿ ಸ್ನಾನಮಾಡಿ ದಕ್ಷಶಾಪದಿಂದ ಬಿಡುಗಡೆಹೊಂದಿದನು; ಅಲ್ಲಿ ಚಂದ್ರನು ಭಾಸವನ್ನು ಹೊಂದಿದ ಕಾರಣ ಅಂದಿನಿಂದ ಆ ತೀರ್ಥವು **ಪ್ರಭಾಸ**ವೆಂಬ ಹೆಸರಿನಿಂದ ವಿಖ್ಯಾತವಾಯಿತು. ಆ ಶಾಪದಿಂದ ಈಗಲೂ ಚಂದ್ರನು ಕೃಷ್ಣಪಕ್ಷದಲ್ಲಿ ಅಮಾವಾಸ್ಯೆಯವರೆಗೆ ಕ್ಷಯವಾಗುತ್ತಿರುತ್ತಾನೆ. ಶುಕ್ಲಪಕ್ಷದಲ್ಲಿ ಹುಣ್ಣಿಮೆಯವರೆಗೆ ಬೆಳೆಯುತ್ತಿರುತ್ತಾನೆ: ಅವನ ಶರೀರವು ಮೇಘರೇಖೆಯಿಂದ ಮುಚ್ಚಿಕೊಂಡಿರುವಂತೆ ಕಾಣಿಸುತ್ತಿರುತ್ತದೆ. ಅವನಿಗೆ ಮೋಡದಂತೆ ಬಣ್ಣವಿರುತ್ತದೆ. ಅವನಲ್ಲಿರುವ ಮೊಲದ ಚಿಹ್ನವು ವಿಮಲವಾಗಿ ಕಾಣಿಸುತ್ತದೆ.

ಸ್ಥೂಲಶಿರಸ್ಸೆಂಬ ಮಹರ್ಷಿಯು ಮೇರುಪರ್ವತದ ಈಶಾನ್ಯದಿಗ್ಭಾಗದಲ್ಲಿ ತಪಸ್ಸುಮಾಡುತ್ತಿದ್ದನು; ಅವನು ಹೀಗೆ ತಪಸ್ಸುಮಾಡುತ್ತಿರುವಲ್ಲಿ ಎಲ್ಲಾ ಬಗೆಯ ಸುಗಂಧವನ್ನೂ ಕೊಚ್ಚಿಕೊಂಡುಬರುವ ಶುಚಿಯಾದ ಗಾಳಿಯು ಬೀಸುತ್ತಾ ಬಂದು ಮೈಗೆ ಸೋಕಿತು. ತಪಸ್ಸಿನಿಂದ ತಪ್ತವಾಗಿದ್ದ ಶರೀರವುಳ್ಳವನಾಗಿ ಬಡಕಲಾಗಿದ್ದ ಆತನು ಗಾಳಿಯು ಸೋಕಲಾಗಿ ಮನಸ್ಸಿನಲ್ಲಿ ಬಹುಸಂತುಷ್ಟನಾದನು. ಹೀಗೆ ಆತನು ಗಾಳಿಯ ಬೀಸಣಿಗೆಯಿಂದ ಪರಿತುಷ್ಟನಾಗಲು ಕೂಡಲೆ ಅಲ್ಲಿದ್ದ ವನಸ್ಪತಿಗಳು

ಹೂಬಿಟ್ಟು ಶೋಭಿಸಿದವಂತೆ, ಅವನು 'ನೀವು ಎಲ್ಲಾ ಕಾಲದಲ್ಲಿಯೂ ಹೂ ಬಿಡದಂತಾಗಲಿ!' ಎಂದು ಅವಕ್ಕೆ ಶಾಪವನ್ನು ಕೊಟ್ಟನು.

ಹಿಂದಕ್ಕೆ ಒಮ್ಮೆ ನಾರಾಯಣನು ಲೋಕಹಿತಕ್ಕಾಗಿ ವಡವಾಮುಖನೆಂಬ ಮಹರ್ಷಿಯಾದನು. ಮೇರುಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದ ಆತನು ಸಮುದ್ರವನ್ನು ಆಹ್ವಾನಿಸಲು ಸಮುದ್ರವು ಬರಲಿಲ್ಲ: ಆಗ ಅದನ್ನು ಸಹಿಸದೆ ಅವನು ತನ್ನ ಶರೀರದ ಉಷ್ಣದಿಂದ ಸಮುದ್ರದ ನೀರು ಸ್ತಿಮಿತವಾಗುವಂತೆ ಮಾಡಿದನು; ಬೆವರಿನ ಇಳಿನೀರಿನಂತೆ ಅದರ ನೀರು ಉಪ್ಪಾಯಿತು. ಕೂಡಲೆ ಅವನು 'ಸಮುದ್ರವೆ, ನಿನ್ನ ನೀರು ಕುಡಿಯುವದಕ್ಕೆ ಅಯೋಗ್ಯವಾಗಲಿ, ವಡವಾಮುಖನೆಂಬವನು ಮತ್ತೆ ಮತ್ತೆ ಪಾನಮಾಡಿದಮೇಲೆ ಸಿಹಿಯಾಗುವದು' ಎಂದನು. ಅದರಂತೆ ಈಗಲೂ ವಡವಾಮುಖವು ಸಮುದ್ರದ ನೀರನ್ನು ಕುಡಿಯುತ್ತಿರುತ್ತದೆ.

ಹಿಮವತ್ಪರ್ವತನ ಮಗಳಾದ ಉಮೆಯೆಂಬ ಕನ್ಯೆಯನ್ನು ರುದ್ರನು ಕಾಮಿಸಿದನು. ಭೃಗುಮಹರ್ಷಿಯೂ ಹಿಮವಂತನ ಬಳಿಗೆ ಬಂದು 'ಈ ಕನ್ಯೆಯನ್ನು ನನಗೆ ಕೊಡು' ಎಂದು ಕೇಳಿದನು. ಹಿಮವಂತನು 'ರುದ್ರನೇ ಇವಳಿಗೆ ವರನೆಂದು ಗೊತ್ತಾಗಿದೆ' ಎನ್ನಲು, ಭೃಗುವು 'ಕನ್ಯೆಯನ್ನು ವರಿಸಬೇಕೆಂಬ ಭಾವನೆಯಿಂದ ಬಂದ ನನ್ನನ್ನು ನೀನು ತಿರಸ್ಕರಿಸಿರುವದರಿಂದ ನಿನ್ನಲ್ಲಿ ಇನ್ನುಮೇಲೆ ರತ್ನಗಳು ಇರದಂತಾಗಲಿ!' ಎಂದು ಹೇಳಿದನು. ಈಗಲೂ ಆ ಋಷಿವಚನವು ಸಾರ್ಥಕವಾಗಿರುತ್ತದೆ. ಅಂತೂ ಇಂಥ ಮಹಿಮೆಯು ಬ್ರಾಹ್ಮಣರದು!

ಕ್ಷತ್ರಿಯಜಾತಿಯವರುಕೂಡ ಬ್ರಾಹ್ಮಣರ ಕೃಪೆಯಿಂದಲೇ ಶಾಶ್ವತವಾದ ಅವ್ಯಯವಾದ ಪೃಥ್ವಿಯನ್ನು ಪತ್ನಿಯಂತೆ ಭೋಗಿಸುತ್ತಿರುವರು. ಅಗ್ನಿ ಮತ್ತು ಸೋಮರೂಪದ ಬ್ರಹ್ಮವಿದೆಯಲ್ಲ, ಅದರಿಂದಲೇ ಜಗತ್ತು ನಿಂತಿರುತ್ತದೆ. ಈ ವಿಷಯದಲ್ಲಿ ಈ ವಚನವಿದೆ. 'ಸೂರ್ಯಚಂದ್ರರು (ಅಗ್ನಿ ಮತ್ತು ಸೋಮ್ಮ ಇವರು) ನನ್ನ ಕಣ್ಣು, ಅವರ ಕಿರಣಗಳು ನನ್ನ ಕೇಶವೆನ್ನುವರು. ಸೂರ್ಯನೂ ಚಂದ್ರನೂ ಜಗತ್ತಿಗೆ ತಾಪವನ್ನೂ, ಮೋದವನ್ನೂ ಉಂಟುಮಾಡುತ್ತಾ ಬೇರೆ ಬೇರೆಯಾಗಿ ಉದಿಸುತ್ತಿರುವರು.'

* * * * *

# 10. ಶ್ರೀ ಕೃಷ್ಣಾರ್ಜುನಸಂವಾದ*

## (6)

ಶ್ರೀ ಭಗವಂತನು ಮತ್ತೂ ಇಂತೆಂದನು: ಈಗ ನಾನು ನನ್ನ ನಾಮಗಳ ನಿರ್ವಚನವನ್ನು ಹೇಳುವೆನು. ಏಕಾಗ್ರವಾದ ಮನಸ್ಸಿನಿಂದ ಕೇಳು, ಜಗತ್ತಿಗೆ ಮೋದವನ್ನೂ ರತವನ್ನೂ ಮಾಡುತ್ತಿರುವ ಕಾರಣದಿಂದ ಚಂದ್ರನೂ ಸೂರ್ಯನೂ ಹರ್ಷವನ್ನುಂಟುಮಾಡುತ್ತಿರುವರು. ಪಾಂಡುನಂದನನೆ, ಅಗ್ನೀಷೋಮರು ಮಾಡುತ್ತಿರುವ ಈ ಕರ್ಮಗಳಿಂದ ನಾನು ಲೋಕಭಾವನನೂ ವರದಾಯಕನೂ ಆದ ಈಶ್ವರನಾಗಿರುವದರಿಂದ **'ಹೃಷೀಕೇಶ'**ನೆನಿಸಿರುತ್ತೇನೆ. 'ಇಡೋಪಹೂತ' ಇತ್ಯಾದಿ ಮಂತ್ರದಿಂದ ಆವಾಹನೆಮಾಡಲು ನನ್ನ ಭಾಗವನ್ನು ಹರಣಮಾಡುವದರಿಂದಲೂ ನನ್ನ ವರ್ಣವೂ ಹರಿತವಾಗಿರುವದರಿಂದಲೂ ನನ್ನನ್ನು **'ಹರಿ'**ಎನ್ನುವರು. ಪ್ರಾಣಿಗಳ ಸಾರವು ಧಾಮವು, ಋತವೂ ಆಗಿರುತ್ತದೆ. ಆದ್ದರಿಂದ ವಿಪ್ರರು ನನ್ನನ್ನು **'ಋತಧಾಮ'** ಎನ್ನುವರು. ಹಿಂದೆ ಕಾಣದಂತೆ ಆಗಿ ಗುಹೆಯನ್ನು ಸೇರಿದ್ದ (ಗೌಃ) ಭೂಮಿಯನ್ನು (ಅವಿದಮ್) ಪಡೆದುಕೊಂಡು ತಂದೆನು; ಆದ್ದರಿಂದ ದೇವತೆಗಳು ನನ್ನನ್ನು **'ಗೋವಿಂದ'**ನೆಂದು ಕರೆದರು. ಹೋಮಹೀನವಾದ ಪ್ರಾಣಿಯು **'ಶಿಪಿ'**ಎನಿಸುತ್ತದೆ; ಅದರಲ್ಲಿಯೂ ನಾನು ಪ್ರವೇಶಿಸಿರುವದರಿಂದ **'ಶಿಪಿವಿಷ್ಟ'**ನೆನಿಸಿರುತ್ತೇನೆ. ಯಾಸ್ಕಋಷಿಯು ಏಕಾಗ್ರಚಿತ್ತದಿಂದ ನನ್ನನ್ನು 'ಶಿಪಿವಿಷ್ಟನೆಂಬ'ನಾಮದಿಂದ ಅನೇಕ ಯಜ್ಞಗಳಲ್ಲಿ ಆಹ್ವಾನ ಮಾಡಿರುತ್ತಾನೆ: ಆದ್ದರಿಂದಲೂ ನಾನು **'ಶಿಪಿವಿಷ್ಟ'**ನೆಂಬ ಗುಣನಾಮವನ್ನು ಧರಿಸಿರುತ್ತೇನೆ. ಉದಾರಬುದ್ಧಿಯಾದ ಯಾಸ್ಕನು ನನ್ನನ್ನು ಶಿಪಿವಿಷ್ಟನೆಂದು ಸ್ತುತಿಸಿದ್ದರಿಂದ ಪಾತಾಲವನ್ನು ಹೊಕ್ಕು ಅದೃಶ್ಯವಾಗಿದ್ದ ನಿರುಕ್ತವನ್ನು ಮತ್ತೆ ಪಡೆದುಕೊಂಡನು.

ಎಲ್ಲಾ ಪ್ರಾಣಿಗಳಲ್ಲಿಯೂ ಕ್ಷೇತ್ರಜ್ಞನಾಗಿರುವ ನಾನು ಹಿಂದೆ ಹುಟ್ಟಲಿಲ್ಲ, ಈಗ ಹುಟ್ಟಿರುವದಿಲ್ಲ, ಮುಂದೆ ಹುಟ್ಟುವದೂ ಇಲ್ಲ; ಆದ್ದರಿಂದ **'ಅಜ'** ಎನಿಸಿರುತ್ತೇನೆ. ನಾನು ಎಂದಿಗೂ ಅಲ್ಪವಾದ ಅಥವಾ ಅಶ್ಲೀಲವಾದ ವಾಕ್ಕನ್ನು

---

* ಸಂಪುಟ 37; ಸಂಚಿಕೆ 9; ಮೇ 1968

ಆಡಿದವನಲ್ಲ. ಸತ್ಯರೂಪಳಾದ ಬ್ರಹ್ಮಪುತ್ರಿಯಾದ ಸರಸ್ವತೀದೇವಿಯೇ ನನ್ನ ವಾಣಿ; ಸತ್ತನ್ನೂ ಅಸತ್ತನ್ನೂ ನಾನು ನನ್ನಲ್ಲಿ ಪ್ರವೇಶಮಾಡಿಕೊಂಡಿರುತ್ತೇನೆ. ಆದ್ದರಿಂದ ಕಮಲರೂಪವಾದ ಬ್ರಹ್ಮಲೋಕದಲ್ಲಿರುವ ಋಷಿಗಳು ನನ್ನನ್ನು **'ಸತ್ಯ'** ಎನ್ನುತ್ತಿರುವರು. ನಾನು ಎಂದಿಗೂ ಸತ್ತ್ವದಿಂದ ಜಾರಿದವನಲ್ಲ, ಸತ್ತ್ವವು ನನ್ನಿಂದಲೇ ಆದದ್ದು ಎಂದು ತಿಳಿ. ಧನಂಜಯನೆ, ನನ್ನ ಈ ಅವತಾರ ದಲ್ಲಿಯೂ ಆ ಹಿಂದಿನ ನನ್ನ ಸತ್ತ್ವವೇ ಇರುತ್ತದೆ. ಸತ್ತ್ವದ ನಿಮಿತ್ತದಿಂದಲೇ ನಾನು ನಿಷ್ಕಲ್ಮಷವಾಗಿ ನಿಷ್ಕಾಮಕರ್ಮಯುಕ್ತನಾಗಿರುವೆನು. ಸಾತ್ತ್ವತತಂತ್ರದ ಜ್ಞಾನದಿಂದ ನನ್ನ ಸ್ವರೂಪವು ನಿಶ್ಚಿತವಾಗುವದು. ಆದ್ದರಿಂದ ನಾನು **ಸಾತ್ತ್ವತನು**. ನಾನು ವಿಶಾಲವಾದ ಕರಿಯ ಕಬ್ಬಿಣದ ನೇಗಿಲಿನ ತುದಿಯಾಗಿ ಭೂಮಿಯನ್ನು ಉಳುವೆನು. ನನ್ನ ವರ್ಣವೂ ಕಪ್ಪಾಗಿದೆ. ಆದ್ದರಿಂದ ನಾನು **ಕೃಷ್ಣನು**. ಭೂಮಿಯು ಜಲದಿಂದಲೂ, ಆಕಾಶವು ವಾಯುವಿನಿಂದಲೂ, ವಾಯುವು ತೇಜಸ್ಸಿನಿಂದಲೂ, ಸಂಯುಕ್ತವಾಗಿರುವದು ನನ್ನಿಂದಲೇ. ಇದರಿಂದ (ಹೀಗೆ ಪಂಚಭೂತಗಳ ಪರಸ್ಪರ ಮಿಲನದಲ್ಲಿ ಅಸಾಮರ್ಥ್ಯವು ಹೋಗಿರುವದರಿಂದ ಎಂದರೆ ಮೇಲನಮಾಡುವ ಸಾಮರ್ಥ್ಯವಿರುವದರಿಂದ) ನನಗೆ **ವೈಕುಂಠ**ನೆಂಬ ಹೆಸರು ಬಂದಿದೆ.

ಪೃಥ್ವಿಯೂ ಆಕಾಶವೂ ವಿಶ್ವತೋಮುಖವಾಗಿರುವದು ಪ್ರಸಿದ್ಧವಷ್ಟೆ? ಅವರೆಡನ್ನೂ ಧಾರಣಮಾಡುವವನಾಗಿರುವದರಿಂದ (ಅಧಃ- ಪೃಥ್ವಿ- ಅಕ್ಷ- ಆಕಾಶ, ಜ.- ಇವನ್ನು ಧಾರಣಮಾಡಿರುವವನು ಎಂಬ ಕಾರಣದಿಂದ) ನನ್ನನ್ನು **ಅಧೋಕ್ಷಜ**ನೆನ್ನುವರು. ವೇದಾರ್ಥವನ್ನು ವಿಚಾರಮಾಡಬಲ್ಲ ವೇದವಿದ್ವಾಂಸರು ಪ್ರಾಗ್ವಂಶ(ವೆಂಬ ಯಜ್ಞಶಾಲಾಭಾಗ)ದಲ್ಲಿ ಕುಳಿತು- ನನ್ನ ಮಹಿಮೆಯನ್ನು ಗಾನಮಾಡುವರು; ಆದ್ದರಿಂದಲೂ ನಾನು **ಅಧೋಕ್ಷಜ**ನು, ನನ್ನ ಅನುಗ್ರಹದಿಂದ ಜೀವನು ಅಧೋಗತಿಗೆ ಬೀಳದೆ ಇರುವದರಿಂದಲೂ ನನ್ನನ್ನು **ಅಧೋಕ್ಷಜ**ನೆಂದು ಮತ್ತೆ ಕೆಲವರು ಕರೆಯುತ್ತಿರುವರು. ಅಧೋಕ್ಷಜನೆಂಬ ಶಬ್ದವು ಬೇರೆಬೇರೆಯ ಪದಗಳಿಂದೊಡಗೂಡಿ (ಅ=ಲಯಸ್ಥಾನ, ಧೋಕ್ಷ- ಸ್ಥಿತಿಸ್ಥಾನ, ಜ=ಜನ್ಮಸ್ಥಾನ) ಉತ್ಪತ್ತಿಸ್ಥಿತಿಲಯುಗಳಿಗೆ ನಾರಾಯಣನೊಬ್ಬನೇ ಸ್ಥಾನವಾಗಿರುವದರಿಂದ ನಾರಾಯಣನೊಬ್ಬನಲ್ಲದೆ ಮತ್ತೆ ಯಾರೂ **ಅಧೋಕ್ಷಜನಿಲ್ಲ**. ಘೃತವು ಅಗ್ನಿರೂಪವಾದ ನನ್ನ ಅರ್ಚಿಸ್ಸನ್ನೂ (ಜ್ವಾಲೆಯನ್ನೂ) ಎಬ್ಬಿಸುವದಾಗಿರು ತ್ತದೆ; ಆದ್ದರಿಂದ ವೇದವನ್ನು ಬಲ್ಲವರು ನನ್ನನ್ನು **'ಘೃತಾರ್ಚಿ'** ಎನ್ನುವರು.

# 10. ಶ್ರೀ ಕೃಷ್ಣಾರ್ಜುನಸಂವಾದ*

## (7)

ಶ್ರೀಭಗವಂತನು ಮತ್ತೂ ಇಂತೆಂದನು: ಶರೀರದಲ್ಲಿ ಮೂರು ಧಾತುಗಳಿರುವವಷ್ಟೆ? ಅವು ಕರ್ಮಜವೆನಿಸಿರುವವು. ಪಿತ್ತ, ಶ್ಲೇಷ್ಮ, ವಾಯು– ಇವು ಮೂರು ಧಾತುಗಳಿಂದಾಗಿರುವದು ಈ ಸಂಘಾತವು; ಇವುಗಳೇ ಪ್ರಾಣಿಯನ್ನು ಧರಿಸಿರುತ್ತವೆ; ಇವು ಕ್ಷಯವಾದರೆ ಪ್ರಾಣಿಯೂ ಕ್ಷೀಣವಾಗುವನು. ಆದ್ದರಿಂದ ಆಯುರ್ವೇದವನ್ನು ಬಲ್ಲವರು ನನ್ನನ್ನು **ತ್ರಿಧಾತು**ವೆಂದು ಕರೆಯುತ್ತಾರೆ. ಎಲೈ ಭಾರತನೆ, ಲೋಕದಲ್ಲಿ ಪೂಜ್ಯವಾದ ಧರ್ಮವು ವೃಷವೆಂದು ಪ್ರಸಿದ್ಧವಾಗಿರುತ್ತದೆ. ವೈದಿಕನಿಘಂಟುವಿನಲ್ಲಿ ವೃಷವೆಂದರೆ ಧರ್ಮವೆಂದು ತಿಳಿಸಿರುತ್ತದೆ. ಆದ್ದರಿಂದ ಉತ್ತಮವಾದ **ವೃಷ**ವೇ ನಾನು– ಎಂದು ತಿಳಿ; ಕಪಿ ಎಂದರೆ ಶ್ರೇಷ್ಠವಾದ ವರಾಹವು: ಧರ್ಮವನ್ನು ವೃಷವೆನ್ನುವರು; ಆದ್ದರಿಂದ ಕಾಶ್ಯಪಪ್ರಜಾಪತಿಯು ನನ್ನನ್ನು **ವೃಷಾಕಪಿ** ಎಂದು ಕರೆದಿರುತ್ತಾನೆ.

ಸುರಾಸುರರುಗಳು ಯಾರೂ ನನ್ನ ಆದಿಯನ್ನಾಗಲಿ ಮಧ್ಯವನ್ನಾಗಲಿ ಅಂತ್ಯವನ್ನಾಗಲಿ ಅರಿಯದೆ ಇರುವರು. ಆದ್ದರಿಂದ ವಿಭುವೂ ಈಶ್ವರನೂ ಲೋಕಸಾಕ್ಷಿಯೂ ಆದ ನನ್ನನ್ನು **ಅನಾದ್ಯನು,ಅಮಧ್ಯನು, ಅನಂತನು**– ಎನ್ನುವರು. ಧನಂಜಯನೆ, ಪವಿತ್ರವಾಗಿರುವ ಶ್ರವಣಯೋಗ್ಯವಾದ ವಚನಗಳನ್ನೇ ನಾನು ಕೇಳುವೆನು: ಕೆಟ್ಟ ಮಾತುಗಳನ್ನು ಕೇಳುವದೇ ಇಲ್ಲ. ಆದ್ದರಿಂದ **ಶುಚಿಶ್ರವಸ್ಸು** ಎನ್ನುವರು. ಒಂದೇ ಕೋಡಿನ ವರಾಹರೂಪದಿಂದ ಈ ಭೂಮಿಯನ್ನು ಎತ್ತಿತಂದು ಜಗತ್ತಿಗೆ ಆನಂದವನ್ನುಂಟುಮಾಡಿದೆನು; ಆದ್ದರಿಂದ **ಏಕಶೃಂಗನು**. ಹಾಗೆಯೇ ವರಾಹರೂಪದಲ್ಲಿ ನಾನು ಮೂರು ಹೆಗಲುಗಳುಳ್ಳವನಾಗಿದ್ದೆನಾಗಿ ನಾನು **ತ್ರಿಕಕುದ**ನೆಂದು ವಿಖ್ಯಾತನಾದೆನು. ಕಾಪಿಲದರ್ಶನಚಿಂತಕರು **ವಿರಿಂಚ**ನೆಂದು ಕರೆಯುವ, ಚೇತನವನ್ನು ಕೊಟ್ಟು ಸರ್ವಲೋಕಗಳನ್ನೂ ಉಂಟುಮಾಡಿದ ಪ್ರಜಾಪತಿಯೇ ನಾನು. ತತ್ತ್ವವನ್ನು ನಿಶ್ಚಯಿಸಿರುವ ಸಾಂಖ್ಯರು ವಿದ್ಯಾಶಕ್ತಿಸಹಿತನಾಗಿ ಆದಿತ್ಯನಲ್ಲಿರುವ **ಸನಾತನ**ಪುರುಷನೇ ನಾನೆಂದು ಹೇಳುತ್ತಿರುವರು. ಕಾಂತಿಯುಕ್ತ

---

* ಸಂಪುಟ 37; ಸಂಚಿಕೆ 10; ಜೂನ್ 1968

ನಾಗಿರುವ **ಹಿರಣ್ಯಗರ್ಭ**ನೆಂದು ವೇದದಲ್ಲಿ ಸ್ತುತಿಯನ್ನು ಹೊಂದಿ ನಿತ್ಯವೂ ಯೋಗಿಗಳು ಪೂಜಿಸುತ್ತಿರುವದರಿಂದ ಹಿರಣ್ಯಗರ್ಭನೆಂದೇ ಭೂಲೋಕದಲ್ಲಿ ಕರೆಯಿಸಿಕೊಳ್ಳುತ್ತಿರುವೆನು. ಇಪ್ಪತ್ತೊಂದು ಸಾವಿರ ಋಕ್ಕುಗಳಿಂದ ಮಾಡಿದ **ಋಗ್ವೇದ**ವೇ ನಾನೆಂದು ಹೇಳುತ್ತಾರೆ; ಸಹಸ್ರಶಾಖೆಗಳುಳ್ಳ **ಸಾಮವೇದ**ವೂ ನಾನೆಂದು ವೇದವಿದರು ಹೇಳುತ್ತಿರುವರು. ಆರಣ್ಯಕದಲ್ಲಿ ವಿಪ್ರರು ನನ್ನನ್ನು ಗಾನಮಾಡುತ್ತಿರುವರು: ನನ್ನ ಭಕ್ತರಾದ ಅಂಥವರು ದುರ್ಲಭರಾಗಿರುತ್ತಾರೆ. ನೂರೊಂದು ಶಾಖೆಗಳುಳ್ಳ ಯಜುರ್ವೇದದಲ್ಲಿಯೂ ನನ್ನನ್ನೇ ಸ್ತುತಿಸಿರುತ್ತದೆ. ಅಥರ್ವವೇದವಿದರಾದ ಬ್ರಾಹ್ಮಣರು ನನ್ನನ್ನು ಕೃತ್ಯಗಳಿಂದೊಡಗೂಡಿದ **ಪಂಚಕಲ್ಪಾತ್ಮಕ ವೇದರೂಪ**ನೆನ್ನುವರು. ವೇದಗಳಲ್ಲಿರುವ ಶಾಖಾಭೇದಗಳು, ಶಾಖೆಗಳಲ್ಲಿರುವ ಗೀತಿಗಳೂ ಸ್ವರವರ್ಣಸಮುಚ್ಚಾರಣೆಗಳು– ಇವೆಲ್ಲವನ್ನೂ ನಾನೇ ಮಾಡಿರುವೆನೆಂದು ತಿಳಿ.

ಎಲೈ ಪಾರ್ಥನೆ, ವರಪ್ರದನಾದ **ಹಯಗ್ರೀವ**ನು ಪ್ರಕಟನಾಗುತ್ತಿರವನಲ್ಲವೆ? ಉತ್ತರಭಾಗದಲ್ಲಿರುವ **ಕ್ರಮವಿಭಾಗ ಮತ್ತು ಅಕ್ಷರವಿಭಾಗ**– ಇವನ್ನು ಅರಿತಿರುವವನು ನಾನೇ. ಮಹಾತ್ಮನಾದ ಪಾಂಚಾಲನು– ವಾಮದೇವನಿಗೆ ತೋರಿಸಿಕೊಟ್ಟ ಮಾರ್ಗದಿಂದ ನನ್ನನ್ನು ಆರಾಧಿಸಿ ಸನಾತನಪುರುಷನಾದ ನನ್ನ ಪ್ರಸಾದದಿಂದ ವೇದದ ಕ್ರಮವಿಭಾಗವನ್ನು ಪಡೆದುಕೊಂಡನು. ಬಾಭ್ರವ್ಯಗೋತ್ರದಲ್ಲಿ ಜನಿಸಿದ ಆ ಗಾಲವನು ನಾರಾಯಣನಿಂದ ವರವನ್ನೂ ಅನುತ್ತಮವಾದ ಯೋಗವನ್ನೂ ಪಡೆದುಕೊಂಡು ಕ್ರಮವಿಭಾಗವನ್ನೂ 'ಶಿಕ್ಷೆ'ಎಂಬ ವೇದಾಂಗವನ್ನೂ ರಚಿಸಿ ಕ್ರಮವಿಭಾಗದಲ್ಲಿ ಪಾರಂಗತನಾಗಿದ್ದನು. ಪುಂಡರೀಕಕುಲದಲ್ಲಿ ಉತ್ಪನ್ನನಾದ ಪ್ರತಾಪಿಯಾದ ಬ್ರಹ್ಮದತ್ತರಾಜನು ಏಳು ಜನ್ಮಗಳಲ್ಲಿ ಜನ್ಮಮರಣಗಳಿಂದಾಗುವ ದುಃಖವನ್ನು ಮತ್ತೆಮತ್ತೆ ನೆನೆನೆನೆದು ವಿರಕ್ತನಾಗಿ ಯೋಗಸಂಪತ್ತನ್ನು ಪಡೆದುಕೊಂಡನು. ಕುರಶ್ರೇಷ್ಠನಾದ ಪ್ರಾರ್ಥನೆ, ಪೂರ್ವದಲ್ಲಿ ಕಾರಣಾಂತರದಿಂದ ಧರ್ಮನ ಪುತ್ರನಾದೆನು. ಆದ್ದರಿಂದ ನನ್ನನ್ನು **ಧರ್ಮಜ**ನೆನ್ನುವರು.

ಹಿಂದಕ್ಕೆ ನರನಾರಾಯಣರು ಧರ್ಮಮಯವಾದ ರಥವನ್ನೇರಿ ಗಂಧಮಾದನ ಪರ್ವತದಲ್ಲಿ ಅಕ್ಷಯವಾದ ತಪಸ್ಸನ್ನು ಮಾಡಿದರು. ಅದೇ ಕಾಲದಲ್ಲಿ ದಕ್ಷಯಜ್ಞವಾಯಿತು. ಎಲೈ ಭಾರತನೆ, ದಕ್ಷನು ರುದ್ರನಿಗೆ ಭಾಗವನ್ನು

ಕೊಡಲಿಲ್ಲ. ಅದರಿಂದ ರುದ್ರನು ದಧೀಚಿವಚನವನ್ನು ಕೇಳಿ ಯಜ್ಞವನ್ನು ನಾಶಗೊಳಿಸಿದನು; ಕೋಪದಿಂದ ಪ್ರಜ್ವಲಿಸುವ ತ್ರಿಶೂಲವನ್ನು ಪ್ರಯೋಗಿಸಿದನು. ಆ ಶೂಲವು ವಿಸ್ತೃತವಾದ ದಕ್ಷನ ಯಜ್ಞವನ್ನು ಬೂದಿಯಾಗುವಂತೆ ಸುಟ್ಟು ಬದರಿಕಾಶ್ರಮದ ಬಳಿಗೆ ವೇಗದಿಂದ ಬಂದು, ನಾರಾಯಣನ ತಲೆಯ ಮೇಲೆ ಬಿದ್ದಿತು. ಪಾರ್ಥನೆ, ಆದರ ತೇಜಸ್ಸಿನಿಂದ ನಾರಾಯಣನಾದ ನನ್ನ ಕೇಶಗಳು ಮುಂಜದ ವರ್ಣವಾದವು. ಆದ್ದರಿಂದ ನಾನು **ಮುಂಜಕೇಶ** ನೆನಿಸಿದೆನು. ಆ ಶೂಲವು ಮಹಾತ್ಮನಾದ ನಾರಾಯಣನ ಹುಂಕಾರದಿಂದ ಪ್ರತಿಹತವಾಗಿ ಶಂಕರನ ಕೈಗೆ ಹೋಗಿ ಸೇರಿತು. ಆಗ ರುದ್ರನು ತಪಸ್ಸುಮಾಡುತ್ತಿದ್ದ ಆ ಇಬ್ಬರು ಋಷಿಗಳ ಬಳಿಗೆ ಬಂದನು. ಆಗ ಮಹಾತ್ಮನಾದ ನಾರಾಯಣನು ಇವನ ಕತ್ತನ್ನು ಕೈಯಿಂದ ಹಿಸುಕಿದನು; ಅದರಿಂದ ರುದ್ರನಿಗೆ **ಶಿತಿಕಂಠ**ನೆಂಬ ಹೆಸರಾಯಿತು.

ಆಗ ನರನು ರುದ್ರನ ವಿನಾಶಕ್ಕಾಗಿ ಒಂದು ನೊಸೆಹುಲ್ಲಿನ ಕಡ್ಡಿಯನ್ನು ಅಭಿಮಂತ್ರಿಸಿದನು; ಅದು ಒಂದು ದೊಡ್ಡ ಗಂಡುಕೊಡಲಿಯಾಯಿತು. ಅದನ್ನು ಅವನು ಎಸೆಯಲು ರುದ್ರನು ಅದನ್ನು ತುಂಡುಮಾಡಿದನು. ಹಾಗೆ ಆ ಪರಶುವು ತುಂಡಾದ್ದರಿಂದ ನನಗೆ **ಖಂಡಪರಶು**ವೆಂಬ ಹೆಸರಾಯಿತು.

* * * * *

## 10. ಶ್ರೀ ಕೃಷ್ಣಾರ್ಜುನಸಂವಾದ*
## (8)

ಅರ್ಜುನನಿಂತೆಂದನು: ವಾರ್ಷ್ಣೇಯನೆ, ತ್ರೈಲೋಕ್ಯದ ನಾಶಕಾರಕವಾದ ಈ ಯುದ್ಧದಲ್ಲಿ ಯಾರು ಗೆದ್ದರು? ಜನಾರ್ದನನೆ, ಇದನ್ನು ನನಗೆ ಹೇಳು.

ಶ್ರೀ ಭಗವಂತನು ಉತ್ತರವನ್ನು ಕೊಟ್ಟದ್ದೇನೆಂದರೆ: ರುದ್ರನಾರಾಯಣಾತ್ಮರಾದ ಅವರಿಬ್ಬರೂ ಒಬ್ಬರನ್ನೊಬ್ಬರು ಸೇರಿ ಯುದ್ಧಮಾಡುತ್ತಿರಲು ಎಲ್ಲಾ ಲೋಕದ ನಿವಾಸಿಗಳೂ ಇದ್ದಕ್ಕಿದ್ದ ಹಾಗೆಯೇ ಉದ್ವಿಗ್ನರಾದರು. ಅಗ್ನಿಯು ಯಜ್ಞಗಳಲ್ಲಿ

---

* ಸಂಪುಟ 37; ಸಂಚಿಕೆ 11; ಜುಲೈ 1968

ಸುಹುತವಾದ ಹವಿಸ್ಸನ್ನು ಗ್ರಹಿಸಲಿಲ್ಲ. ಭಾವಿತಾತ್ಮರಾದ ಋಷಿಗಳಿಗೆ ವೇದಗಳು ಹೊಳೆಯದಾದವು. ದೇವತೆಗಳಲ್ಲಿ ರಜಸ್ಸು ತಮಸ್ಸುಗಳು ಆವಿಷ್ಟವಾದವು, ಭೂಮಿಯು ನಡುಗಿತು, ಆಕಾಶವು ಅಲುಗಾಡಿತು, ಗ್ರಹನಕ್ಷತ್ರಾದಿ ತೇಜಸ್ಸುಗಳು ಕಾಂತಿಹೀನವಾದವು. ಬ್ರಹ್ಮನೂ ಆಸನದಿಂದ ಜಾರಿಬಿದ್ದನು, ಸಮುದ್ರವು ಒಣಗಿತು, ಹಿಮವತ್ಪರ್ವತವು ಒಡೆದು ಸೀಳಿಕೊಂಡಿತು.

ಹೀಗೆ ಉತ್ಪಾತಗಳು ಆಗುತ್ತಿರಲು, ಎಲೈ ಪಾಂಡುನಂದನನೆ, ಬ್ರಹ್ಮದೇವನು ದೇವಗಣಗಳಿಂದಲೂ ಮಹಾತ್ಮರಾದ ಋಷಿಗಳಿಂದಲೂ ಕೂಡಿಕೊಂಡು ಪರಿವೃತನಾಗಿ ಆ ಪ್ರದೇಶಕ್ಕೆ ಬೇಗನೆ ಬಂದನು. ನಿರುಕ್ತಗಮ್ಯನಾದ ಆ ಚತುರ್ಮುಖನು ಬದ್ಧಾಂಜಲಿಯಾಗಿ ರುದ್ರನನ್ನು ಕುರಿತು ಲೋಕಗಳ ನಿವಾಸಿಗಳಿಗೆ ಶುಭವಾಗಲಿ! ಎಲೈ ವಿಶ್ವೇಶನೆ, ಜಗತ್ತಿನ ಹಿತವನ್ನು ಬಯಸಿ ಆಯುಧಗಳನ್ನು ಕೆಳಗಿಡು. ಅಕ್ಷರ, ಅವ್ಯಕ್ತ, ಲೋಕಗಳನ್ನುಂಟುಮಾಡುವ ಈಶ್ವರನು, ಕೂಟಸ್ಥವು, ನಿರ್ದ್ವಂದ್ವವು, ಕರ್ತೃ ಮತ್ತು ಅಕರ್ತೃ- ಎಂದು ಯಾವದನ್ನು ಎನ್ನುವರೋ, ಹೊರತೋರಿಕೊಂಡ ಅದರ ಒಂದು ಶುಭಮೂರ್ತಿಯಿದು; ಧರ್ಮನ ಕುಲದಲ್ಲಿ ಹುಟ್ಟಿದ ನರ, ನಾರಾಯಣ- ಎಂಬೀ ಇಬ್ಬರು ಮಹಾತಪಸ್ಸಿನಿಂದ ಕೂಡಿಕೊಂಡಿರುವ ದೇವಶ್ರೇಷ್ಠರಿವರು. ಮಹಾವ್ರತವನ್ನು ಕೈಕೊಂಡಿರುವವರು, ನಾನು ಒಂದಾನೊಂದು ಕಾರಣದಿಂದ ಆತನ ಪ್ರಸಾದದಿಂದ ಹುಟ್ಟಿದವನು, ಅಪ್ಪ, ನೀನೂ ಹಿಂದಿನ ಸೃಷ್ಟಿಯಲ್ಲಿ ಆತನ ಕ್ರೋಧದಿಂದ ಜನಿಸಿದ ಸನಾತನನು. ಎಲೈ ವರದನೆ, ನನ್ನನ್ನೂ ದೇವತೆಗಳನ್ನೂ ಮಹರ್ಷಿಗಳನ್ನೂ ಒಡಗೊಂಡು ಬೇಗನೆ ಈತನನ್ನು ಪ್ರಸನ್ನನಾಗುವಂತೆ ಮಾಡು! ದೇವಲೋಕಕ್ಕೆ ಶಾಂತಿ ಯುಂಟಾಗಲಿ!

ಹೀಗೆಂದು ಬ್ರಹ್ಮನು ಹೇಳಲು ರುದ್ರನು ಕ್ರೋಧಾಗ್ನಿಯನ್ನು ಬಿಟ್ಟುಬಿಟ್ಟನು. ಬಳಿಕ ದೇವನೂ ಪ್ರಭುವೂ ಆದ ನಾರಾಯಣದೇವನನ್ನು ಪ್ರಸನ್ನನಾಗಿ ಮಾಡಿದನು. ಆದ್ಯನೂ ವರೇಣ್ಯನೂ ವರದಾಯಕನೂ ಆದ ಆ ಪ್ರಭುವಿಗೆ ಶರಣುಹೋದನು. ಆಗ ವರದನೂ ಜಿತಕ್ರೋಧನೂ ಜಿತೇಂದ್ರಿಯನೂ ಆದ ಆ ದೇವನು ಸುಪ್ರೀತನಾಗಿ ರುದ್ರನಿಗೆ ಹೊಂದಿಕೊಂಡನು. ಋಷಿಗಳಿಂದ,

ಬ್ರಹ್ಮನಿಂದ ಮತ್ತು ದೇವತೆಗಳಿಂದ ಬಹಳವಾಗಿ ಪೂಜಿತನಾಗಿ ಜಗದೀಶ್ವರನಾಗಿರುವ ಹರಿಯು ಈಶಾನದೇವನನ್ನು ಕುರಿತು ಇಂತೆಂದನು.

'ಯಾವನು ನಿನ್ನನ್ನು ಅರಿತಿರುವನೋ ಅವನು ನನ್ನನ್ನು ಅರಿತಿರುತ್ತಾನೆ. ಯಾವನು ನಿನ್ನನ್ನು ಅನುಸರಿಸಿರುವನೋ, ಅವನು ನನ್ನನ್ನು ಅನುಸರಿಸಿರುತ್ತಾನೆ. ನಮ್ಮಿಬ್ಬರಲ್ಲಿ ಯಾವ ಅಂತರವೂ ಇರುವದಿಲ್ಲ. ಈ ವಿಷಯದಲ್ಲಿ ನಿನಗೆ ಅನ್ಯಥಾಬುದ್ಧಿಯುಂಟಾಗದೆ ಇರಬೇಕು. ಇಂದಿನಿಂದ **ಈ ಶೂಲದ ಚಿಹ್ನವು ನನ್ನ ಎದೆಯಲ್ಲಿ ಶ್ರೀವತ್ಸವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವದು;** ಮತ್ತು ನನ್ನ ಕೈಯ ಗುರುತಿನಿಂದ ಕೂಡಿರುವ ನೀನೂ **ಶ್ರೀಕಂಠನಾಗಿರುವೆ.**

ಶ್ರೀಕೃಷ್ಣಭಗವಂತನು ಮತ್ತೂ ಹೇಳಿದನೇನೆಂದರೆ: ಹೀಗೆ ಈ ಎರಡು ಚಿಹ್ನೆಗಳನ್ನು ತಮ್ಮ ತಮ್ಮ ಶರೀರದಲ್ಲಿ ಮಾಡಿಕೊಂಡು, ನಿರುಪಮವಾದ ಸಖ್ಯಮೈತ್ರಿಯನ್ನು ಇಟ್ಟುಕೊಂಡು ರುದ್ರನೊಡನೆ ಆ ಋಷಿಗಳಿಬ್ಬರೂ ದೇವತೆಗಳನ್ನು ಸ್ವಸ್ಥಾನಗಳಿಗೆ ಕಳುಹಿಸಿಕೊಟ್ಟು ತಪಸ್ಸನ್ನು ಮಾಡುತ್ತಿದ್ದರು.

ಎಲೈ ಪಾರ್ಥನೆ, ಯುದ್ಧದಲ್ಲಿ ಯಾರಿಗೆ ಹೇಗೆ ಜಯವಾಯಿತೆಂಬುದನ್ನು ನಿನಗೆ ಹೇಳಿರುತ್ತೇನೆ; ನನ್ನ ಗುಹ್ಯನಾಮಗಳನ್ನೂ ಅವುಗಳ ಅರ್ಥವನ್ನೂ ಋಷಿಗಳು ಹೇಳಿರುವಂತೆ ವಿವರಿಸಿರುತ್ತೇನೆ. ಹೀಗೆ ಬಹುವಿಧರೂಪಗಳಿಂದ ನಾನು ಈ ಭೂಮಿಯಮೇಲೂ ಬ್ರಹ್ಮಲೋಕದಲ್ಲಿಯೂ ಸನಾತನವಾದ ಗೋಲೋಕದಲ್ಲಿಯೂ ಸಂಚರಿಸುತ್ತಿರುವೆನು. ನಾನು ನಿನ್ನನ್ನು ರಕ್ಷಿಸಿದ್ದರಿಂದ ಯುದ್ಧದಲ್ಲಿ ಮಹಾವಿಜಯವು ಪ್ರಾಪ್ತವಾಯಿತು, ಯುದ್ಧವು ಬಂದೊದಗಿದಾಗ, ನಿನ್ನ ಮುಂದುಗಡೆಯಲ್ಲಿ ಹೋಗುತ್ತಿದ್ದನಲ್ಲ, ಆತನೇ ದೇವದೇವನಾದ ರುದ್ರನೆಂದು ತಿಳಿ. ಆತನೇ 'ಕಾಲನೆನಿಸುವನು' 'ಕ್ರೋಧದಿಂದ ಹುಟ್ಟಿದವನು' ಎಂದು ನಾನು ಹೇಳಿದ್ದು. ನೀನು ಶತ್ರುಗಳನ್ನು ಕೊಂದೆಯಲ್ಲವೆ, ಅವರನ್ನು ಆತನೇ ಕೊಂದಿದ್ದನು. ಅಪ್ರಮೇಯಪ್ರಭಾವನೂ ದೇವದೇವನೂ ಉಮಾಪತಿಯೂ ವಿಶ್ವೇಶ್ವರನೂ ಅಕ್ಷರನೂ ಪಾಪರಹಿತನೂ ಆದ ಆ ದೇವನನ್ನು ನಮಸ್ಕರಿಸು! ಕ್ರೋಧದಿಂದ ಹುಟ್ಟಿದವನು ಎಂದು ಮತ್ತೆ ಮತ್ತೆ ಹೇಳಿರುವೆನಲ್ಲ, ಆತನ ಪ್ರಭಾವವನ್ನೇ ನಿನಗೆ ಹೇಳಿರುತ್ತೇನೆ.

* * * * *

# 11. ನಾರದ ನರನಾರಾಯಣರ ಸಂವಾದ*

## (1)

ಶೌನಕನಿಂತೆಂದನು: ಸೂತನಂದನನೆ, ನೀನು ಹೇಳಿದ ಈ ಮಹಾ ಆಖ್ಯಾನವನ್ನು ಕೇಳಿ ಮುನಿಗಳೆಲ್ಲರೂ ಪರಮವಿಸ್ಮಯವನ್ನು ಹೊಂದಿರುತ್ತಾರೆ, ಸಕಲ ಋಷ್ಯಾಶ್ರಮಗಳನ್ನು ದರ್ಶನಮಾಡಿಕೊಂಡರೂ ಸಕಲತೀರ್ಥಗಳಲ್ಲಿಯೂ ಅವಗಾಹನಸ್ನಾನವನ್ನು ಮಾಡಿದರೂ, ಎಲೈ ಸೂತಪುತ್ರನೆ, ನಾರಾಯಣಕಥೆಯನ್ನು ಕೇಳಿದ ಫಲವುಂಟಾಗಲಾರದು. ಸರ್ವಪಾಪಗಳಿಂದಲೂ ಬಿಡುಗಡೆಮಾಡುವ ಈ ಪುಣ್ಯವಾದ ನಾರಾಯಣಕಥೆಯನ್ನು ಮೊದಲಿನಿಂದ ಕೇಳಿ ಪವಿತ್ರಾಂಗರಾಗಿರುವೆವು. ಸರ್ವಲೋಕನಮಸ್ಕೃತನಾದ ನಾರಾಯಣಭಗವಂತನು ಬ್ರಹ್ಮನು ಮೊದಲಾಗಿ ಯಾವ ದೇವತೆಗಳಿಗೂ ಋಷಿಗಳಿಗೂ ದರ್ಶನವನ್ನು ಕೊಡುವದು ಕಷ್ಟ. ಇಂಥ ನಾರಾಯಣದೇವನನ್ನು, ಶ್ರೀಹರಿಯನ್ನು ನಾರದನು ಕಂಡನಲ್ಲವೆ? ಅದು ಆ ದೇವನ ಅನುಜ್ಞೆಯಿಂದಲೇ ಸಂಭವಿಸಿತು. ಅನಿರುದ್ಧ ವಿಗ್ರಹದಿಂದ ಇರುತ್ತಿದ್ದ ಆ ಜಗನ್ನಾಥನನ್ನು ಕಂಡು, ದೇವಶ್ರೇಷ್ಠರಾದ ನರನಾರಾಯಣರ ಬಳಿಗೆ ಆತನು ಮತ್ತೆ ಹೋಗಲು ಕಾರಣವೇನು? ಇದನ್ನು ನನಗೆ ಹೇಳು.

ಸೌತಿಯಿಂತೆಂದನು: ಎಲೈ ಶೌನಕನೆ, ಜನಮೇಜಯನು ಆ ಯಜ್ಞವನ್ನು ಮಾಡುತ್ತಿರುವಲ್ಲಿ, ಬೇರೆಯ ಕರ್ಮಗಳೂ ವಿಧಿವತ್ತಾಗಿ ನಡೆಯುತ್ತಿರಲು ಆ ರಾಜೇಂದ್ರನು ವೇದನಿಧಿಯೂ ಪ್ರಭುವೂ ತನ್ನ ಪಿತಾಮಹನ ಪಿತಾಮಹನೂ ಆದ ಕೃಷ್ಣದ್ವೈಪಾಯನಋಷಿಯನ್ನು ಹೀಗೆಂದು ವಿನಯದಿಂದ ಕೇಳಿದನು.

ಶ್ವೇತದ್ವೀಪದಿಂದ ಹಿಂತಿರುಗಿದ ದೇವರ್ಷಿಯಾದ ನಾರದನು ಭಗವಂತನ ವಾಕ್ಯವನ್ನು ಸ್ಮರಿಸುತ್ತಾ ಮುಂದೆ ಏನುಮಾಡಿದನು? ಬದರ್ಯಾಶ್ರಮಕ್ಕೆ ಬಂದು ಆ ಋಷಿಗಳಿಬ್ಬರನ್ನು ಸೇರಿದ ಬಳಿಕ ಎಷ್ಟುಕಾಲದವರೆಗೆ ಅಲ್ಲಿದ್ದನು? ಆತನು ಕೇಳಿದ ಕಥೆ ಯಾವದು? ಬ್ರಾಹ್ಮಣೋತ್ತಮನೆ, ಲಕ್ಷಶ್ಲೋಕಗಳಿಂದೊಡಗೂಡಿದ ಮಹಾಭಾರತಾಖ್ಯಾನವೆಂಬ ಜ್ಞಾನಸಮುದ್ರವನ್ನು ಬುದ್ಧಿ ಎಂಬ ಕಡೆಗೋಲಿನಿಂದ ಕಡೆದು – ಮೊಸರಿನಿಂದ ಬೆಣ್ಣೆಯನ್ನೂ, ಮಲಯಾಚಲದಿಂದ ಚಂದನವನ್ನೂ,

* ಸಂಪುಟ 37; ಸಂಚಿಕೆ 12; ಆಗಸ್ಟ್ 1968

ವೇದಗಳಿಂದ ಆರಣ್ಯಕವನ್ನೂ ಓಷಧಿಗಳಿಂದ ಅಮೃತವನ್ನೂ ತೆಗೆದಂತೆ– ಈ ಕಥಾಮೃತವನ್ನು ತೆಗೆದಿರುತ್ತದೆ. ತಪೋನಿಧಿಯೆ, ನಾರಾಯಣನ ಕಥೆಯನ್ನು ಹೇಳಿದೆಯಲ್ಲ, ಅದು ಈ ಗ್ರಂಥಕ್ಕೆಲ್ಲ ಸಾರವಾಗಿರುತ್ತದೆ. ಆತನೇ ಈಶ್ವರನು, ಭಗವಂತನು, ದೇವನು; ಆತನೇ ಸರ್ವಭೂತಾತ್ಮರನ್ನೂ ಉಂಟುಮಾಡುವಾತನು. ಎಲೈ ದ್ವಿಜಸತ್ತಮನೆ, ನಾರಾಯಣತೇಜಸ್ಸೆಂಬುದು ಎಂಥ ಅದ್ಭುತವಾದದ್ದು! ಅದನ್ನು ಕಾಣುವದೇ ದುರ್ಲಭ. ಕಲ್ಪಾಂತದಲ್ಲಿ ಬ್ರಹ್ಮನೇ ಮೊದಲಾಗಿ ಎಲ್ಲಾ ದೇವತೆಗಳೂ ಋಷಿಗಳೂ ಗಂಧರ್ವರೂ ಸ್ಥಾವರಜಂಗಮಗಳೆಲ್ಲವೂ ಅದರಲ್ಲಿ ಪ್ರವಿಷ್ಟವಾಗುವವು. ಅದಕ್ಕಿಂತ ಹೆಚ್ಚು ಪಾವನವಾದದ್ದು ಈ ಲೋಕದಲ್ಲಾಗಲಿ ಸ್ವರ್ಗದಲ್ಲಾಗಲಿ ಇಲ್ಲವೆಂದೇ ನನ್ನ ಭಾವನೆ. ಸರ್ವಋಷ್ಯಾಶ್ರಮಗಳನ್ನೂ ದರ್ಶನಮಾಡುವದೂ ಸರ್ವತೀರ್ಥಗಳಲ್ಲಿಯೂ ಅವಗಾಹನಸ್ನಾನವನ್ನು ಮಾಡುವದೂ ನಾರಾಯಣನ ಕಥಾಶ್ರವಣದಿಂದಾಗುವ ಫಲವನ್ನು ಕೊಡಲಾರದು– ವಿಶ್ವೇಶ್ವರನಾದ ಆ ದೇವನ ಸರ್ವಪಾಪಪ್ರಣಾಶಕವಾದ ಈ ಕಥೆಯನ್ನು ಮೊದಲಿನಿಂದಲೂ ಕೇಳಿ ಸರ್ವಪ್ರಕಾರದಿಂದಲೂ ಪವಿತ್ರರಾದೆವು. ಆರ್ಯನಾದ ಧನಂಜಯನು ವಾಸುದೇವನ ಸಹಾಯದಿಂದ ಉತ್ತಮಜಯವನ್ನು ಹೊಂದಿದನಲ್ಲ, ಅದೇನೂ ಆಶ್ಚರ್ಯವಲ್ಲ. ತ್ರೈಲೋಕ್ಯನಾಥನಾದ ವಿಷ್ಣುವು ಅವನಿಗೆ ಹಾಗೆ ಸಹಾಯವನ್ನು ಮಾಡುತ್ತಿರುವಲ್ಲಿ ಅವನಿಗೆ ಮೂರು ಲೋಕಗಳಲ್ಲಿಯೂ ದುರ್ಲಭವಾದದ್ದು ಯಾವದುತಾನೆ ಇದ್ದೀತು? ಎಲೈ ಬ್ರಾಹ್ಮಣೋತ್ತಮನೆ, ಜನಾರ್ದನನೇ ತಮ್ಮ ಹಿತವನ್ನೂ ಶ್ರೇಯಸ್ಸನ್ನೂ ನೋಡಿಕೊಳ್ಳುತ್ತಿದ್ದದ್ದರಿಂದ ನಮ್ಮ ಪೂರ್ವಜರೆಲ್ಲರೂ ಧನ್ಯರಾದರು.

ತಪಸ್ಸಿನಿಂದಲೇ ಲೋಕಪೂಜಿತನಾದ ಆ ಭಗವಂತನು ದರ್ಶನವನ್ನು ಕೊಟ್ಟಾನು. ಅಂಥ ಶ್ರೀವತ್ಸಾಂಕವಿಭೂಷಿತನಾದ ಹರಿಯನ್ನು ಸಾಕ್ಷಾತ್ತಾಗಿ ನಮ್ಮ ಪೂರ್ವಜರು ಕಂಡರಲ್ಲ! ಅವರಿಗಿಂತಲೂ ಬ್ರಹ್ಮಪುತ್ರನಾದ ನಾರದನು ಹೆಚ್ಚು ಧನ್ಯನು. ಅವ್ಯಯನಾದ ಆ ನಾರದನು, ಸಾಮಾನ್ಯ ತೇಜಸ್ವಿಯಾದ ಋಷಿಯೇನೂ ಅಲ್ಲವೆಂದು ನನ್ನ ಭಾವನೆ; ಶ್ವೇತದ್ವೀಪಕ್ಕೆ ಹೋಗಿ ಶ್ರೀಹರಿಯನ್ನೇ ಕಂಡನಲ್ಲ! ಆತನ ದರ್ಶನವು ಆ ಭಗವಂತನ ಅನುಗ್ರಹದಿಂದಲೇ ಆಯಿತೆಂಬುದು ವ್ಯಕ್ತವು. ಅನಿರುದ್ಧ ವಿಗ್ರಹದಿಂದ ಇರುತ್ತಿದ್ದ ಆ ದೇವನನ್ನು ಕಂಡಬಳಿಕ ನರನಾರಾಯಣ

ರನ್ನು ನೋಡುವೆನೆಂದು ಬದರಿಕಾಶ್ರಮಕ್ಕೆ ನಾರದನು ಮತ್ತೆ ಹೋದನಷ್ಟೆ? ಮುನಿಯೆ, ಅದಕ್ಕೆ ಕಾರಣವೇನಿರಬಹುದು? ಶ್ವೇತದ್ವೀಪದಿಂದ ನಿವೃತ್ತನಾದ ಬ್ರಹ್ಮನ ಪುತ್ರನಾದ ನಾರದನು ಬದರಿಯೆಂಬ ಆಶ್ರಮವನ್ನು ಸೇರಿ ಆ ಇಬ್ಬರು ಋಷಿಗಳನ್ನು ಕಂಡು ಎಷ್ಟು ಕಾಲದವರೆಗೆ ಅಲ್ಲಿ ಇದ್ದನು? ಮತ್ತು ಯಾವ ಪ್ರಶ್ನೆಗಳನ್ನು ಕೇಳಿದನು? ಆ ಮಹಾತ್ಮನು ಶ್ವೇತದ್ವೀಪದಿಂದ ಬಂದ ಬಳಿಕ ಮಹಾತ್ಮರಾದ ನರನಾರಾಯಣ ಋಷಿಗಳು ಏನೆಂದರು? ಇದೆಲ್ಲವನ್ನೂ ಇದ್ದದ್ದು ಇದ್ದಂತೆ ನನಗೆ ಹೇಳುವನಾಗು!

* * * * *

## 11. ನಾರದನು ನರನಾರಾಯಣರನ್ನು ಕಂಡದ್ದು (2)

ವೈಶಂಪಾಯನನಿಂತೆಂದನು: ಅಮಿತತೇಜಸ್ವಿಯಾದ ಆ ವ್ಯಾಸಭಗವಂತನಿಗೆ ನಮಸ್ಕಾರ! ಆತನ ಪ್ರಸಾದದಿಂದಲೇ ಈ ನಾರಾಯಣವೃತ್ತಾಂತವನ್ನು ಹೇಳುತ್ತಿರುವೆನು. ರಾಜನೆ, ಶ್ವೇತಮಹಾದ್ವೀಪಕ್ಕೆ ಹೋಗಿ ಅವ್ಯಯನಾದ ಶ್ರೀಹರಿಯನ್ನು ಕಂಡು ಹಿಂತಿರುಗಿದ ನಾರದನು ವೇಗದಿಂದ ಮೇರುಪರ್ವತಕ್ಕೆ ಬಂದನು. ಪರಮಾತ್ಮನು ಹೇಳಿದ ಕಾರ್ಯಭಾರವನ್ನು ಹೃದಯದಲ್ಲಿಟ್ಟು ಕೊಂಡಿದ್ದನು. ಅರಸನೆ, ಬಳಿಕ ಆ ಮುನಿಗೆ 'ಇಷ್ಟು ದೂರ ಹೋಗಿ ಕ್ಷೇಮದಿಂದ ಇಲ್ಲಿಗೆ ಬಂದೆನಲ್ಲ!' ಎಂದು ಆಶ್ಚರ್ಯವಾಯಿತು.

ಮೇರುಪರ್ವತದಿಂದ ಗಂಧಮಾದನಪರ್ವತಕ್ಕೆ ಹಾರಿದನು; ಆಕಾಶ ಮಾರ್ಗದಿಂದ ಶೀಘ್ರಗತಿಯಿಂದ ನಡೆಯುತ್ತಾ ಬೇಗನೆ ವಿಶಾಲವಾದ ಬದರಿಗೆ ಇಳಿದನು. ಆಮೇಲೆ ಮಹಾತಪಸ್ಸನ್ನು ಮಾಡುತ್ತಾ ಮಹಾವ್ರತದಲ್ಲಿದ್ದುಕೊಂಡು ಆತ್ಮನಿಷ್ಠರಾಗಿರುವ ಆ ಪುರಾಣರ್ಷಿಗಳಿಬ್ಬರನ್ನೂ ಕಂಡನು. ಅವರು ಲೋಕವನ್ನೆಲ್ಲ ಬೆಳಗುವ ಸೂರ್ಯನಿಗಿಂತಲೂ ತೇಜಸ್ಸಿನಲ್ಲಿ ಅಧಿಕರಾಗಿದ್ದರು; ಆ ಪೂಜ್ಯರು

* ಸಂಪುಟ 38; ಸಂಚಿಕೆ 1; ಸೆಪ್ಟೆಂಬರ್ 1968

ಶ್ರೀವತ್ಸಲಾಂಛನರಾಗಿದ್ದರು; ಜಟಾಮಂಡಲವನ್ನು ಧರಿಸಿದ್ದರು. ಅವರ ಹಸ್ತದಲ್ಲಿ ಹಂಸದ ಚಿಹ್ನವೂ ಅಂಗಾಲಿನಲ್ಲಿ ಚಕ್ರಚಿಹ್ನೆಯೂ ಇದ್ದವು. ಅಗಲವಾದ ಎದೆ, ನೀಳವಾದ ತೋಳುಗಳು, ನಾಲ್ಕು ಅಂಡಬೀಜಗಳು, ಅರುವತ್ತು ಹಲ್ಲುಗಳು, ಎಂಟು ಕೋರೆದಾಡೆಗಳು, ಘನಗಂಭೀರಧ್ವನಿ, ಸುಂದರವಾದ ಮುಖ, ವಿಶಾಲ ವಾದ ಹಣೆ, ಸುಂದರ ಹುಬ್ಬು, ದವಡೆ, ಮೂಗು, ಛತ್ರಿಯಂತೆ ಇದ್ದ ಶಿರಸ್ಸುಗಳು– ಇಂಥ ಲಕ್ಷಣವುಳ್ಳವರಾಗಿದ್ದರು, ಆ ಪುರುಷರು.

ಅವರಿಬ್ಬರನ್ನೂ ಕಂಡು ನಾರದರ್ಷಿಯು ಹರ್ಷಾನ್ವಿತನಾದನು; ಅವರೂ ಆತನನ್ನು ನಮಸ್ಕರಿಸಿ ಸ್ವಾಗತಿಸಿದಬಳಿಕ 'ಆರೋಗ್ಯವೆ?" ಎಂದು ಕೇಳಿದರು. ಆ ಪುರುಷೋತ್ತಮರನ್ನು ಕಂಡು ತನ್ನ ಮನಸ್ಸಿನಲ್ಲಿಯೇ, 'ಎಲ್ಲಾ ಪ್ರಾಣಿಗಳೂ ನಮಸ್ಕರಿಸುತ್ತಿರಲು ಆ ಸಭೆಯಲ್ಲಿದ್ದರಲ್ಲ, ಅವರಂತೆಯೇ ಈ ಋಷಿಶ್ರೇಷ್ಠರೂ ಇರುತ್ತಾರೆ' ಎಂದುಕೊಂಡು ಅವರಿಬ್ಬರಿಗೂ ಪ್ರದಕ್ಷಿಣೆಯನ್ನು ಮಾಡಿ ಮಂಗಲಕರವಾದ ಕುಶಾಸನದಲ್ಲಿ ಅವರ ಮುಂದೆ ಕುಳಿತನು. ಎಲೈ ನೃಪನೆ, ಶಮದಮೋಪೇತರಾದ ಆ ಋಷಿಗಳು ಪೂರ್ವಾಹ್ಣದ ವಿಹಿತಕರ್ಮವನ್ನು ಮಾಡಿ ಪೀಠಗಳ ಮೇಲೆ ಕುಳಿತುಕೊಂಡರು. ಅವರು ಮೂವರೂ ಅಲ್ಲಿ ಕುಳಿತಿರುವಲ್ಲಿ ಆಜ್ಯಾಹುತಿಯಿಂದ ಮಹಾಜ್ವಾಲೆಯೆದ್ದ ಅಗ್ನಿಗಳಿಂದ ಯಜ್ಞಶಾಲೆಯು ಹೇಗೆ ಶೋಭಿಸುವದೊ ಹಾಗೆಯೇ ಆ ಪ್ರದೇಶವು ಶೋಭಿಸುತ್ತಿತ್ತು.

ಆಗ ನಾರಾಯಣನು ಆತಿಥ್ಯವನ್ನು ಸ್ವೀಕರಿಸಿ ಸುಖೋಪವಿಷ್ಟನಾಗಿ ವಿಶ್ರಮಿಸಿಕೊಳ್ಳುತ್ತಿದ್ದ ನಾರದನನ್ನು ಕುರಿತು ಈ ವಾಕ್ಯವನ್ನು ನುಡಿದನು: "ನಮ್ಮಿಬ್ಬರಿಗೂ ಪರಪ್ರಕೃತಿಯಾಗಿರುವ ಪರಮಾತ್ಮನೂ ಸನಾತನನೂ ಆದ ಆ ಭಗವಂತನನ್ನು ನೀನು ಶ್ವೇತದ್ವೀಪದಲ್ಲಿ ಕಂಡೆಯ?"

ಅದಕ್ಕೆ ನಾರದನಿಂತೆಂದನು: ಶ್ರೀಮಂತನೂ ವಿಶ್ವರೂಪಧರನೂ ಅವ್ಯಯನೂ ಆದ ಆ ಪುರುಷನನ್ನು ಕಂಡೆನು. ಎಲ್ಲಾ ಲೋಕಗಳೂ ದೇವತೆಗಳು, ಋಷಿಗಳೊಡನೆ ಅಲ್ಲಿರುತ್ತಿದ್ದರು. ಸನಾತನರಾದ ನಿಮ್ಮಿಬ್ಬರನ್ನು ಕಾಣುತ್ತಿರುವ ಈ ಕಾಲದಲ್ಲಿಯೂ ಆತನೇ ನನಗೆ ಕಾಣಿಸುತ್ತಿದ್ದಾನೆ. ಅವ್ಯಕ್ತರೂಪಧಾರಿಯಾದ ಆ ಹರಿಯು ಆಗ ಯಾವ ಲಕ್ಷಣಗಳಿಂದ ಕೂಡಿರುತ್ತಿದ್ದನೋ ವ್ಯಕ್ತರೂಪಧರರಾದ

ನೀವಿಬ್ಬರೂ ಅದೇ ಲಕ್ಷಣಗಳಿಂದ ಕೂಡಿರುತ್ತೀರಿ. ಆ ದೇವನ ಪಾರ್ಶ್ವದಲ್ಲಿ ನಿಮ್ಮಿಬ್ಬರನ್ನೂ ನಾನು ಕಂಡೆನು. ಆತನಿಗೆ ತೇಜಸ್ಸಿನಿಂದ, ಯಶಸ್ಸಿನಿಂದ, ಶ್ರೀಯಿಂದ ಧರ್ಮಾತ್ಮಜರಾದ ನೀವಿಬ್ಬರಲ್ಲದೆ ಮತ್ತೆ ಯಾವನು ಸದೃಶ್ಯನಾದಾನು? ಆ ಭಗವಂತನು ನನಗೆ ಸಂಪೂರ್ಣಧರ್ಮವನ್ನೂ ಕ್ಷೇತ್ರಜ್ಞತತ್ತ್ವವನ್ನೂ ತನ್ನ ಹಿಂದಿನ ಪ್ರಾದುರ್ಭಾವಗಳನ್ನೂ ಇನ್ನುಮುಂದೆ ಆಗುವ ಪ್ರಾದುರ್ಭಾವಗಳನ್ನೂ ತಿಳಿಸಿದನು. ಅಲ್ಲಿದ್ದ ಶ್ವೇತಪುರುಷನು ಪಂಚೇಂದ್ರಿಯಗಳಿಲ್ಲದವರೂ ಜ್ಞಾನಿಗಳೂ ಆ ಪುರುಷೋತ್ತಮನಲ್ಲಿ ಭಕ್ತಿಯುಳ್ಳವರೂ ಆಗಿರುತ್ತಿದ್ದರು. ಅವರು ಆ ದೇವನನ್ನು ನಿತ್ಯವೂ ಪೂಜಿಸುತ್ತಿರುವವರು; ಆತನೂ ಅವರೊಡನೆ ಕ್ರೀಡಿಸುತ್ತಿರುವನು. ಪರಮಾತ್ಮನೂ ದ್ವಿಜಪ್ರಿಯನೂ ಆದ ಆ ಭಗವಂತನಿಗೆ ಭಕ್ತರು ಅತ್ಯಂತಪ್ರಿಯರಲ್ಲವೆ? ವಿಶ್ವಪಾಲಕನಾದ ಸರ್ವವ್ಯಾಪಿಯಾದ ಭಗವಂತನು, ಭಕ್ತವತ್ಸಲನಾದ ಆ ಮಾಧವನು, ಅವರೊಡನೆ ಯಾವಾಗಲೂ ಕ್ರೀಡಿಸುತ್ತಿರುತ್ತಾನೆ. ಭಾಗವತ ಪ್ರಿಯನಲ್ಲವೆ, ಆತನು? ಆತನೇ ಕರ್ತನು, ಕಾರಣವು, ಕಾರ್ಯವು. ಅತ್ಯಂತ ಬಲಕಾಂತಿಗಳಿಂದೊಡಗೂಡಿರುತ್ತಾನೆ. ಆ ಮಹಾಯಶಸ್ವಿಯೇ ಹೇತು, ಆಜ್ಞೆ, ವಿಧಾನ, ತತ್ತ್ವ. ಆತನು ತನ್ನನ್ನು ತಾನೇ ತಪಸ್ಸಿನಲ್ಲಿಟ್ಟುಕೊಂಡು ಶ್ವೇತದ್ವೀಪದ ಆಚೆಗೂ ಇರುವ ಸ್ವಯಂಪ್ರಕಾಶದಿಂದ ಪ್ರಕಾಶಿಸುತ್ತಿರುವ ತೇಜಸ್ಸೆನಿಸಿರುತ್ತಾನೆ. ಆ ಭಾವಿತಾತ್ಮನು ಮೂರು ಲೋಕಗಳಲ್ಲಿಯೂ ಶಾಂತಿಯನ್ನು ವಿಸ್ತರಿಸಿರುತ್ತಾನೆ. ಮಂಗಲಬುದ್ಧಿಯಿಂದ ನೈಷ್ಠಿಕವ್ರತವನ್ನು ಆಶ್ರಯಿಸಿಕೊಂಡಿರುತ್ತಾನೆ. ಅಲ್ಲಿ ಸೂರ್ಯನು ತಪಿಸುವದಿಲ್ಲ, ಚಂದ್ರನು ಬೆಳಗುವದಿಲ್ಲ, ಆತನು ಒಂಟಿಗಾಲಿನ ಮೇಲೆ ನಿಂತು ತೋಳುಗಳನ್ನೆತ್ತಿಕೊಂಡು ಉತ್ತರದಿಕ್ಕಿಗೆ ಮುಖವನ್ನು ತಿರುಗಿಸಿ ಕೊಂಡಿರುತ್ತಾನೆ. ಆತನು ಸಾಂಗವೇದಗಳನ್ನು ಆವೃತ್ತಿಮಾಡುತ್ತಾ ಸುದುಶ್ಚರವಾದ ತಪಸ್ಸನ್ನು ಮಾಡುತ್ತಿದ್ದನು. ಬ್ರಹ್ಮನು, ಋಷಿಗಳು, ಸಾಕ್ಷಾತ್ ಪಶುಪತಿ, ಉಳಿದ ದೇವತಾಶ್ರೇಷ್ಠರು, ದೈತ್ಯದಾನವರಾಕ್ಷಸರು, ನಾಗರು, ಸುಪರ್ಣರು, ಗಂಧರ್ವರು, ಸಿದ್ಧರು. ರಾಜರ್ಷಿಗಳು– ಇವರೆಲ್ಲ ಯಾವಯಾವ ಹವ್ಯಕವ್ಯಗಳನ್ನು ವಿಧಿಯುಕ್ತ ವಾಗಿ ಅರ್ಪಿಸುತ್ತಿರುವರೋ ಅದೆಲ್ಲವೂ ಆ ದೇವನ ಪಾದತಲಕ್ಕೆ ಬಂದು ತಲುಪುತ್ತಿರುವದು. ಏಕಾಂತದಿಂದ ಭಗವಂತನಲ್ಲಿಯೇ ನೆಟ್ಟಬುದ್ಧಿಯಿಂದ ಭಕ್ತರು ಯಾವ ಕ್ರಿಯೆಗಳನ್ನು ಮಾಡುವರೋ ಅವನ್ನೆಲ್ಲ ಆ ದೇವನು ತಾನೇ ಶಿರಸ್ಸಿನಮೇಲೆ

ಧರಿಸುತ್ತಿರುವನು. ಇಂಥ ಜ್ಞಾನಿಮಹಾತ್ಮನಿಗಿಂತ ಆತನಿಗೆ ಪ್ರಿಯತರನಾಗಿರುವವನು ಮೂರು ಲೋಕದಲ್ಲಿಯೂ ಮತ್ತೊಬ್ಬನಿಲ್ಲವೇ ಇಲ್ಲ; ಆದ್ದರಿಂದ ನಾನು ಅವನ ಏಕಾಂತಭಕ್ತನಾದೆನು. ಆತನು ಕಳುಹಿಸಿದ್ದರಿಂದಲೇ ಇಲ್ಲಿಗೂ ಬಂದಿರುವೆನು. ಹೀಗೆಂದು ಭಗವಂತನಾದ ಆ ದೇವನು ತಾನೇ ಹೇಳಿರುತ್ತಾನೆ; ಆದ್ದರಿಂದ ನಿಮ್ಮೊಡನೆ ಯಾವಾಗಲೂ ಅವನಲ್ಲಿಯೇ ತಾತ್ಪರ್ಯದಿಂದ ಇದ್ದುಕೊಂಡಿರುವೆನು.

* * * * *

# 11. ನರನಾರಾಯಣರು ನಾರದನಿಗೆ ವಾಸುದೇವ ಮಹಿಮೆಯನ್ನು ಹೇಳಿದ್ದು *

## (3)

ನರನಾರಾಯಣರಿಂತೆಂದರು: ನೀನು ಧನ್ಯನಾದೆ, ಅನುಗೃಹೀತನಾದೆ, ಆ ಪ್ರಭುವನ್ನೇ ಕಂಡೆಯಲ್ಲ! ಪದ್ಮಯೋನಿಯಾದ ಬ್ರಹ್ಮನು ಕೂಡ ಆತನನ್ನು ನೋಡಿಲ್ಲವಷ್ಟೆ! ಎಲೈ ನಾರದನೆ, ಪುರುಷೋತ್ತಮನಾದ ಆ ಭಗವಂತನ ದರ್ಶನವು ದೊರಕುವದು ಬಹಳ ಕಷ್ಟ. ನಾವು ಈಗ ಹೇಳಿರುವದು ಸತ್ಯವಚನವು. ಆತನಿಗೆ ಭಕ್ತನಿಗಿಂತ ಪ್ರಿಯತರನಾದವನು ಮತ್ತೆ ಯಾವನೂ ಇರುವದಿಲ್ಲ. ಆದ್ದರಿಂದಲೇ ಎಲೈ ದ್ವಿಜೋತ್ತಮನೆ, ಆತನು ತನ್ನನ್ನು ತಾನೇ ನಿನಗೆ ಕಾಣಿಸಿಕೊಂಡನು. ದ್ವಿಜೋತ್ತಮನೆ, ತಪಸ್ಸನ್ನು ಮಾಡುತ್ತಿರುವ ಆ ಪರಮಾತ್ಮನ ಸ್ಥಾನವನ್ನು ನಾವಿಬ್ಬರಲ್ಲದೆ ಮತ್ತೆ ಯಾವನೂ ಸೇರಲಾರನು. ಸಾವಿರ ಸೂರ್ಯರ ತೇಜಸ್ಸು ಎಷ್ಟೋ ಅಷ್ಟೇ ಆ ಸ್ಥಾನದ ತೇಜಸ್ಸು; ಆತನು ಅದರಿಂದಲೇ ವಿರಾಜಿಸುತ್ತಿರುವನು. ಎಲೈ ವಿಪ್ರನೆ, ವಿಶ್ವವಿಧಾತನಾದ ಆ ದೇವನಿಂದಲೇ, ಭೂಮಿಯಲ್ಲಿರುವ ಕ್ಷಮೆಯು ಉದಯಿಸಿರುವದು ಕಾಣಯ್ಯ, ಕ್ಷಮಾವಂತರಲ್ಲಿ ಶ್ರೇಷ್ಠನೆ! ಸರ್ವಭೂತಗಳಿಗೂ ಹಿತವನ್ನು ಕೋರುವ ಆತನಿಂದಲೇ ರಸವು ಉತ್ಪನ್ನವಾಗಿರುವದು; ಆ ರಸದಿಂದ

---

* ಸಂಪುಟ 38; ಸಂಚಿಕೆ 2; ಅಕ್ಟೋಬರ್ 1968

ಕೂಡಿರುವದರಿಂದಲೇ ಅಬ್ರೂಪವಾದ ಭೂತವು ದ್ರವವಾಗಿರುತ್ತದೆ. ಆತನಿಂದಲೇ ರೂಪಗುಣಾತ್ಮಕವಾದ ತೇಜಸ್ಸುಂಟಾಗಿರುತ್ತದೆ. ಸೂರ್ಯನು ಆ ತೇಜಸ್ಸಿನಿಂದ ಯುಕ್ತನಾಗಿರುವನು, ಅದರಿಂದಲೇ ಲೋಕದಲ್ಲಿ ಅವನು ವಿರಾಜಿಸುತ್ತಿರುವನು. ಆ ಪುರುಷೋತ್ತಮನಾದ ದೇವನಿಂದಲೇ ಸ್ಪರ್ಶವು ಹುಟ್ಟಿರುತ್ತದೆ; ಅದರಿಂದ ವಾಯುವು ಯುಕ್ತನಾಗಿ ಲೋಕಗಳಲ್ಲೆಲ್ಲ ಬೀಸುತ್ತಿರುವನು. ಸರ್ವಲೋಕೇಶ್ವರನಾದ ಆ ಪ್ರಭುವನಿಂದಲೇ ಶಬ್ದವು ಎದ್ದುಕೊಂಡಿರುತ್ತದೆ; ಅದರಿಂದ ಯುಕ್ತವಾಗಿರುವದರಿಂದ ಆಕಾಶವು ಆವರಣರಹಿತವಾಗಿರುತ್ತದೆ. ಆ ದೇವನಿಂದಲೇ ಸರ್ವಪ್ರಾಣಿಗಳಲ್ಲಿಯೂ ಇರುವ ಮನಸ್ಸು ಉಂಟಾಗಿರುವದು; ಅದರಿಂದೊಡಗೂಡಿದ ಚಂದ್ರನು ಪ್ರಕಾಶಗುಣವನ್ನು ಧರಿಸಿರುತ್ತಾನೆ.

ಆ ಭಗವಂತನು ಹವ್ಯಕವ್ಯಗಳನ್ನು ಸ್ವೀಕರಿಸುತ್ತ ವಿದ್ಯಾಸಹಿತನಾಗಿರುವ ಸ್ಥಾನಕ್ಕೆ ವೇದವೆಂದು ಹೆಸರು. ಅದನ್ನು 'ಸದ್ಭೂತೋತ್ಪಾದಕ'ನೆನ್ನುವರು. ಪುಣ್ಯಾಪಾಪರಹಿತರಾಗಿ ನಿಷ್ಕಲ್ಮಷರಾಗಿ ಮೋಕ್ಷಮಾರ್ಗದಲ್ಲಿ ಹೋಗುವವರಿಗೆ, ಎಲೆ ದ್ವಿಜೋತ್ತಮನೆ, ಸರ್ವಲೋಕಗಳ ಕತ್ತಲೆಯನ್ನೂ ನಾಶಗೊಳಿಸುವ ಆದಿತ್ಯನು ದ್ವಾರವೆನಿಸಿರುತ್ತಾನೆ. ತಮ್ಮ ಸರ್ವಾಂಗಗಳನ್ನೂ ಆದಿತ್ಯನು ದಹಿಸಿಬಿಟ್ಟಿರುವದರಿಂದ ಅವರು ಪರಮಾಣುಭೂತರಾಗಿ ಆ ದೇವನನ್ನು ಪ್ರವೇಶಿಸುವರು. ಆಮೇಲೆ ಅದರಿಂದಲೂ ನಿರ್ಮುಕ್ತರಾಗಿ **ಅನಿರುದ್ಧತನು**ವಿನಲ್ಲಿರುವರು. ಬಳಿಕ ಮನೋಭೂತರಾಗಿ **ಪ್ರದ್ಯುಮ್ನ**ನನ್ನು ಪ್ರವೇಶಿಸುವರು. ಪ್ರದ್ಯುಮ್ನನಿಂದಲೂ ನಿರ್ಮುಕ್ತರಾಗಿ ವಿಪ್ರಶ್ರೇಷ್ಠರಾದ ಸಾಂಖ್ಯರು ಭಾಗವತರೊಡನೆ ಜೀವನಾದ **ಸಂಕರ್ಷಣ**ನನ್ನು ಹೋಗುವರು. ಆ ಬಳಿಕ ತ್ರಿಗುಣಗಳಿಲ್ಲದವರಾಗಿ ಆ ದ್ವಿಜಶ್ರೇಷ್ಠರು ನಿರ್ಗುಣಾತ್ಮಕನೂ ಕ್ಷೇತ್ರಜ್ಞನೂ ಆಗಿರುವ **ಪರಮಾತ್ಮ**ನನ್ನು ಪ್ರವೇಶಿಸುವರು. ಸರ್ವರಲ್ಲಿಯೂ ವಾಸವಾಗಿರುವ ವಾಸುದೇವನೇ ನಿಜವಾಗಿ ಕ್ಷೇತ್ರಜ್ಞನೆಂದು ತಿಳಿ. ಸಮಾಹಿತಮನಸ್ಸಿನವರೂ ನಿಯಮವಂತರೂ ಇಂದ್ರಿಯಸಂಯಮವುಳ್ಳವರೂ ಆಗಿ ಏಕಾಂತಭಾವದಿಂದ ಕೂಡಿರುವವರು ವಾಸುದೇವನನ್ನೇ ಪ್ರವೇಶಿಸುವರು.

ಎಲೈ ದ್ವಿಜೋತ್ತಮನೆ, ಧರ್ಮನ ಮನೆಯಲ್ಲಿ ಹುಟ್ಟಿರುವ ನಾವಿಬ್ಬರೂ ರಮ್ಯವಾದ ಈ ಬದರಿಕಾಶ್ರಮವನ್ನು ಆಶ್ರಯಿಸಿಕೊಂಡು ಉಗ್ರವಾದ ತಪಸ್ಸನ್ನು ಮಾಡುತ್ತಿರುವೆವು. ದ್ವಿಜನೆ, ಅದೇ ವಾಸುದೇವನ ದೇವಪ್ರಿಯವಾದ ಪ್ರಾದುರ್ಭಾವ

ಗಳು, ಮೂರು ಲೋಕಗಳಲ್ಲಿಯೂ ಆಗುತ್ತಿರುವವಷ್ಟೆ? ಅವರಿಗೆ ಸ್ವಸ್ತಿಯಾಗಲಿ!– ಎಂಬ ಕಾರಣದಿಂದ ನಾವು ಹೀಗೆ ತಪಸ್ಸುಮಾಡುತ್ತಿರುವೆವು. ಎಲೈ ದ್ವಿಜೋತ್ತಮನೆ, ಎಂದಿನಂತೆ ವಿಧಿವತ್ತಾಗಿ ಉತ್ತಮವಾದ ಸರ್ವಕೃಚ್ಛ್ರವ್ರತವನ್ನು ಆಚರಿಸುತ್ತಿದ್ದ ನಾವಿಬ್ಬರೂ, ಶ್ವೇತದ್ವೀಪದಲ್ಲಿ ನಿನ್ನನ್ನು ಕಂಡೆವು ಕಾಣಯ್ಯ. ತಪೋಧನನೆ, ಮೂರು ಲೋಕಗಳಲ್ಲಿಯೂ ಯಾವಯಾವದು ಮುಂದೆ ಆಗಲಿರುವದೋ, ಹಿಂದೆ ಆಗಿರುವದೋ, ಈಗ ಆಗುತ್ತಿರುವದೋ, ಶುಭಾಶುಭರೂಪವಾದ ಅದೆಲ್ಲವೂ ನಮಗೆ ತಿಳಿಯುತ್ತಿರುವದು. ಮಹಾಮುನಿಯೆ, ನಿನಗೆ ಎಲ್ಲವನ್ನೂ ಆ ದೇವದೇವನು ಹೇಳಿರುತ್ತಾನೆ.

ವೈಶಂಪಾಯನನಿಂತೆಂದನು: ಉಗ್ರತಪಸ್ಸಿನಲ್ಲಿದ್ದ ಅವರಿಬ್ಬರ ಈ ವಾಕ್ಯವನ್ನು ಕೇಳಿದ ನಾರದನು ಬದ್ಧಾಂಜಲಿಯಾಗಿ ನಾರಾಯಣಪರಾಯಣನಾಗಿ ನಾರಾಯಣವಿಷಯಕವಾದ ಬಹುಮಂತ್ರಗಳನ್ನು ಜಪಿಸುತ್ತಾ ನರನಾರಾಯಣರ ಆಶ್ರಮದಲ್ಲಿ ದಿವ್ಯಸಹಸ್ರವರ್ಷಗಳವರೆಗೆ ಪೂಜ್ಯನಾದ ಆ ದೇವನನ್ನೂ ಆ ನರನಾರಾಯಣರಿಬ್ಬರನ್ನೂ ಅರ್ಚಿಸುತ್ತಾ ಇದ್ದುಕೊಂಡಿದ್ದನು.

* * * * *

## 11. ವರಾಹಭಗವಂತನು ಪಿತೃಪೂಜೆಯ ಕ್ರಮವನ್ನು ಸ್ಥಾಪಿಸಿದ್ದು*

## (4)

ವೈಶಂಪಾಯನನಿಂತೆಂದನು: ಕಾಲಾಂತರದಲ್ಲಿ ಬ್ರಹ್ಮಪುತ್ರನಾದ ನಾರದನು ಯಥಾನ್ಯಾಯವಾಗಿ ದೈವಕರ್ಮವನ್ನು ಮಾಡಿ, ಆ ಬಳಿಕ ಪಿತ್ರ್ಯಕರ್ಮವನ್ನು ಮಾಡಿದನು. ಆಗ ಧರ್ಮನ ಜ್ಯೇಷ್ಠಪುತ್ರನಾದ ಪ್ರಭುವಾದ ನರನು ಆತನನ್ನು ಇಂತೆಂದು ಕೇಳಿದನು: 'ಎಲೈ ದ್ವಿಜಶ್ರೇಷ್ಠನೆ, ದೈವಕರ್ಮದಲ್ಲಿಯೂ ಪಿತ್ರ್ಯಕರ್ಮ ದಲ್ಲಿಯೂ ನೀನು ಯಾರನ್ನು ಪೂಜಿಸುತ್ತಿರುವೆ? ಎಲೈ ಮತಿವಂತರಲ್ಲಿ ಶ್ರೇಷ್ಠನಾದವನೆ, ಇದನ್ನು ನಮಗೆ ಆಗಮಾನುಸಾರವಾಗಿ ತಿಳಿಸಿಕೊಡುವನಾಗು, ನೀನು ಮಾಡುವ ಈ ಕರ್ಮವು ಯಾವದು? ಇದರ ಫಲವಾದರೂ ಏನು?'

* ಸಂಪುಟ 38; ಸಂಚಿಕೆ 3; ನವೆಂಬರ್ 1968

ಆಗ ನಾರದನಿಂತೆಂದನು: ದೈವಕರ್ಮವನ್ನು ಮಾಡಬೇಕೆಂದೂ ಅದೇ ಪರಮಯಜ್ಞವೆಂದೂ ಸನಾತನನಾದ ಪರಮಾತ್ಮನೇ ಯಜ್ಞಸ್ವರೂಪನೆಂದೂ ನೀನೇ ಪೂರ್ವದಲ್ಲಿ ಹೇಳಿರುತ್ತೀಯೆ. ಅದರಿಂದಲೇ ಪ್ರಭಾವಿತನಾಗಿ ನಾನು ನಿತ್ಯವೂ ಅವ್ಯಯನಾದ ವೈಕುಂಠಭಗವಂತನನ್ನು ಪೂಜಿಸುತ್ತಿರುವೆನು. ಆತನಿಂದಲೇ ಪೂರ್ವದಲ್ಲಿ ಲೋಕಪಿತಾಮಹನಾದ ಬ್ರಹ್ಮನು ಹುಟ್ಟಿರುತ್ತಾನೆ. ನನ್ನ ತಂದೆಯಾದ ಪರಮೇಷ್ಠಿಯನ್ನು ಆತನು ಸೃಷ್ಟಿಸಿದನು: ನಾನು ಆತನ ಸಂಕಲ್ಪದಿಂದ ಪ್ರಥಮ ಪುತ್ರನಾಗಿ ಕಲ್ಪಿತನಾಗಿರುತ್ತೇನೆ. ಎಲೈ ಸಾಧುವೆ, ನಾರಾಯಣನ ಆರಾಧನೆಯನ್ನು ಮಾಡಿದ ಬಳಿಕ ಪಿತೃಗಳನ್ನು ಪೂಜಿಸುತ್ತಿರುವೆನು. ಈ ರೀತಿಯಲ್ಲಿ ಆ ಭಗವಂತನೇ ಪಿತೃವೂ ಮಾತೃವೂ ಪಿತಾಮಹನೂ ಆಗಿರುತ್ತಾನೆ. 'ಪುತ್ರರನ್ನೇ ಪಿತೃಗಳು ಪೂಜಿಸಿದರು' ಎಂದು ಒಂದು ಶ್ರುತಿಯೂ ಇದೆ. ವೇದಜ್ಞಾನವು ಪ್ರಣಷ್ಟವಾಗಲು, ಮಕ್ಕಳಿಂದ ಮತ್ತೆ ಅಧ್ಯಾಪನಮಾಡಿಸಿಕೊಂಡು ದೇವತೆಗಳು ಅದನ್ನು ಪಡೆದು ಕೊಂಡರು. ಆದ್ದರಿಂದ ಮಂತ್ರದಾನವನ್ನು ಮಾಡಿದ ಪುತ್ರರು ಪಿತೃತ್ವವನ್ನು ಹೊಂದಿದರು.[1] ಭಾವಿತಾತ್ಮರಾದ ನಿಮಗೂ ಮೊದಲೇ ಇದು ಗೊತ್ತಿತ್ತು; ಪುತ್ರರೂ ಪಿತೃಗಳೂ ಒಬ್ಬರನ್ನೊಬ್ಬರು ಪೂಜಿಸುತ್ತಿದ್ದರು. ದೇವತೆಗಳು ಪೃಥಿವಿಯ ಮೇಲೆ ಮೂರು ಪಿಂಡಗಳನ್ನು ಕುಶಲಗಳ ಮೇಲೆ ಇಟ್ಟು ಅವುಗಳನ್ನು ಪೂಜಿಸಿದರು, ಇದಕ್ಕೆ ಕಾರಣವೇನು? ಆ ಪಿತೃಗಳಿಗೆ ಪೂರ್ವದಲ್ಲಿ 'ಪಿಂಡ'ವೆಂಬ ಹೆಸರು ಹೇಗೆ ಲಭಿಸಿತು?

ನರನಾರಾಯಣರಿಂತೆಂದರು: ಸಾಗರಪರಿವೃತವಾದ ಈ ಭೂಮಿಯು ನಷ್ಟವಾಗಲು ಭಗವಂತನಾದ ಗೋವಿಂದನು ವರಾಹರೂಪವನ್ನು ತಾಳಿ ಶೀಘ್ರವಾಗಿ ಅದನ್ನು ಮೇಲಕ್ಕೆತ್ತಿದನು. ಪುರುಷೋತ್ತಮನಾದ ಆ ಪ್ರಭುವು ಭೂಮಿಯನ್ನು ಸ್ವಸ್ಥಾನದಲ್ಲಿ ನಿಲ್ಲಿಸಿ ನೀರಿನಿಂದಲೂ ಕೆಸರಿನಿಂದಲೂ ಮೈಯೆಲ್ಲ ಬಳಿದುಕೊಂಡಿರಲು ಲೋಕಹಿತದ ಕಾರ್ಯದಲ್ಲಿ ಉದ್ಯುಕ್ತನಾದನು. ಆಹ್ನಿಕಕಾಲವು ಪ್ರಾಪ್ತವಾಗಿ ಸೂರ್ಯನು ನಡುನೆತ್ತಿಯಮೇಲೆ ಇರುತ್ತಿರಲು ಕೋರದಾಡೆಗಳಮೇಲೆ ಮೂರು ಪಿಂಡಗಳನ್ನು ಇಟ್ಟುಕೊಂಡು ಪೃಥ್ವಿಯಮೇಲೆ

---

1 ಒಮ್ಮೆ ದೇವತೆಗಳು ದೀರ್ಘಕಾಲದವರೆಗೆ ಅಸುರರೊಡನೆ ಯುದ್ಧಮಾಡುವವರಲ್ಲಿ ತೊಡಗಿದ್ದಿದ್ದರಿಂದ ವೇದವನ್ನು ಮರೆತುಬಿಟ್ಟರು. ಮತ್ತೆ ಅವರ ಪುತ್ರರಾದ ಅಗ್ನಿಷ್ವಾತ್ತಾದಿಗಳಿಂದಲೇ ಅದನ್ನು ಕಲಿತುಕೊಂಡು ಪಿತಸ್ಥಾನದಲ್ಲಿ ಪ್ರತಿಷ್ಠೆಮಾಡಿದರು.

ಕುಶಾಸ್ತರಣವನ್ನು ಮಾಡಿ ಅವುಗಳನ್ನಿಟ್ಟನು. ಆತನು ಅವುಗಳಲ್ಲಿ ತನ್ನನ್ನೇ ಉದ್ದೇಶಿಸಿ ಪಿತ್ರ್ಯಕರ್ಮವನ್ನು ಮಾಡಿದನು. ತನ್ನ ವಿಧಾನದಿಂದಲೇ ಆ ಪ್ರಭುವು ಆ ಮೂರು ಪಿಂಡಗಳನ್ನು ಸಂಕಲ್ಪಿಸಿದನು. ತನ್ನ ಶರೀರದ ಉಷ್ಣದಿಂದ ಉಂಟಾದ, ಜಿಡ್ಡಿನಿಂದ ಕೂಡಿದ್ದ ತಿಲಗಳಿಂದಲೂ ಅಪಸವ್ಯವಾಗಿ ಪಿಂಡಗಳನ್ನು ಪ್ರೋಕ್ಷಿಸಿ ಪ್ರಾಙ್ಮುಖವಾಗಿ ತಾನೇ ಪೂಜಿಸಿದನು. ಬಳಿಕ ದೇವೇಶ್ವರನಾದ ಶ್ರೀಹರಿಯು ಧರ್ಮಮರ್ಯಾದೆಯ ಸ್ಥಾಪನೆಯನ್ನು ಮಾಡುವದಕ್ಕಾಗಿ ಇಂತೆಂದನು:

ಭಗವಂತನಾದ ವೃಷಾಕಪಿಯು ಹೇಳಿದ್ದೇನೆಂದರೆ: 'ಲೋಕಸ್ರಷ್ಟವಾದ ನಾನೇ ಪಿತೃಗಳನ್ನು ಸೃಷ್ಟಿಮಾಡುವದಕ್ಕೆ ಉದ್ಯುಕ್ತನಾಗಿರುತ್ತೇನೆ. ಪಿತೃಕಾರ್ಯ ವಿಧಾನಗಳನ್ನು ಆಲೋಚಿಸುತ್ತಿರಲು ಈ ಮೂರು ಪಿಂಡಗಳು ನನ್ನ ದಾಡೆಗಳಿಂದ ದಕ್ಷಿಣದಿಕ್ಕಿಗೆ ಭೂಮಿಯಮೇಲೆ ಜಗುಳಿಬಿದ್ದಿರುತ್ತವೆ. ಆದ್ದರಿಂದ ಇವು ಪಿತೃಗಳೇ ಆಗಿರುತ್ತವೆ. ಮೂರ್ತಿಹೀನವಾದ ಈ ಮೂರು ಪಿಂಡಕಾರವಾಗಿರುತ್ತವೆ. ಇವೇ ಲೋಕದಲ್ಲಿ ಸನಾತನಪಿತೃಗಳೆಂದಾಗಿರಲಿ! ಇಲ್ಲಿ ಈ ಮೂರು ಪಿಂಡಗಳಲ್ಲಿರುವ ಪಿತೃವೂ ಪಿತಾಮಹನೂ ಪ್ರಪಿತಾಮಹನೂ ನಾನೇ ಆಗಿರುತ್ತೇನೆಂದು ತಿಳಿಯಬೇಕು. ನನಗಿಂತ ಅಧಿಕನಾದವನು ಯಾವನೂ ಇರುವದಿಲ್ಲ; ನನಗೆ ಅರ್ಚ್ಯವಾಗಿ ಮತ್ತೆ ಯಾವನಿದ್ದಾನು? ನನಗೆ ತಂದೆಯಾದರೂ ಯಾವನು! ನಾನೇ ಪಿತಾಮಹನು, ಪಿತಾಮಹನಿಗೆ ಪಿತೃವಾದವನೂ ನಾನೇ. ನಾನೇ ಕಾರಣನು' ಇಂತೆಂದು ಹೇಳಿ ದೇವದೇವನಾದ ವೃಷಾಕಪಿಯು, ವರಾಹಪರ್ವತದಲ್ಲಿ ಪಿಂಡದಾನವನ್ನು ಮಾಡಿ ತನ್ನನ್ನೇ ಪೂಜಿಸಿಕೊಂಡು ಅಲ್ಲಿಯೇ ಅಂತರ್ಹಿತನಾದನು. ಎಲೈ ವಿಪ್ರನೆ, ಇದೇ ಭಗವಂತನು ಏರ್ಪಡಿಸಿದ ಧರ್ಮಮರ್ಯಾದೆಯು. ಪಿಂಡಗಳಿಗೆ 'ಪಿತೃ' ನಾಮವು ಹೀಗೆ ಬಂದಿತು; ಆ ವೃಷಾಕಪಿಯ ವಚನದಂತೆ ಅವುಗಳು ಪೂಜೆಯನ್ನು ಪಡೆಯುತ್ತಲಿವೆ. ಯಾರು ಪಿತೃಗಳನ್ನೂ ದೇವತೆಗಳನ್ನೂ ಗುರುಗಳನ್ನೂ ಅತಿಥಿಗಳನ್ನೂ ಗೋಗಳನ್ನೂ ದ್ವಿಜಶ್ರೇಷ್ಠರನ್ನೂ ಭೂಮಾತೆಯನ್ನೂ ಮನೋವಾಕ್ಕಾಯ ಕರ್ಮಗಳಿಂದ ಪೂಜಿಸುವರೋ ಅವರು ವಿಷ್ಣುವನ್ನೇ ಪೂಜಿಸುವರು. ಆ ಭಗವಂತನು ಸರ್ವಪ್ರಾಣಿಗಳ ಶರೀರದಲ್ಲಿಯೂ ಅಂತರ್ಗತ ನಾಗಿರುತ್ತಾನೆ. ಸುಖದುಃಖಗಳಿಗೆ ಸ್ವಾಮಿಯಾದ ಶ್ರೀಹರಿಯು ಸರ್ವಭೂತ ಗಳಲ್ಲಿಯೂ ಸಮನಾಗಿರುತ್ತಾನೆ. ಆ ನಾರಾಯಣನು ಮಹಾಂತನು, ಮಹಾತ್ಮನು, ಸರ್ವಾತ್ಮನು- ಎಂದು ಶ್ರುತಿಯು ಸಾರುತ್ತಿದೆ.

* * * * *

# 11. ನಾರಾಯಣಮಹಿಮೆಯ ಆಖ್ಯಾನದ ಉಪಸಂಹಾರ*

## (5)

ವೈಶಂಪಾಯನಿಂತೆಂದನು: ಎಲೈ ಜನಮೇಜಯನೆ, ನರನಾರಾಯಣರು ಹೇಳಿದ ಈ ವಾಕ್ಯವನ್ನು ಕೇಳಿ ನಾರದನು ದೇವನಲ್ಲಿ ಅತ್ಯಂತಭಕ್ತಿವಂತನಾಗಿ ಏಕಾಂತಿಯಾದನು. ನರನಾರಾಯಣಾಶ್ರಮದಲ್ಲಿ ಸಾವಿರವರ್ಷಗಳವರೆಗೆ ವಾಸವಾಗಿದ್ದು ಭಗವತ್ಸಂಬಂಧಿಯಾದ ಆಖ್ಯಾನವನ್ನು ಕೇಳಿ, ಅವ್ಯಯನಾದ ಹರಿಯನ್ನು ಕಂಡು ತನ್ನ ಆಶ್ರಮವಿರುವ ಹಿಮಪತ್ಪರ್ವತಕ್ಕೆ ಬೇಗನೆ ಹೋದನು. ಆ ನರನಾರಾಯಣಋಷಿಗಳೂ ಅದೇ ಆಶ್ರಮದಲ್ಲಿ ಉತ್ತಮವಾದ ತಪಸ್ಸನ್ನು ಮಾಡುತ್ತಿದ್ದರು. ಅಮಿತವಿಕ್ರಮನಾದ ನೀನೂ ಪಾಂಡವಕುಲೋದ್ವಹನಾಗಿರುತ್ತೀಯೆ. ಈ ಕಥೆಯನ್ನು ಮೊದಲಿನಿಂದಲೂ ಕೇಳಿ ಪಾವನನಾಗಿರುವೆ, ಎಲೈ ರಾಜಶ್ರೇಷ್ಠನೆ, ಯಾವನು ಅವ್ಯಯವಾದ ವಿಷ್ಣುವನ್ನು ದ್ವೇಷಿಸುತ್ತಾನೋ, ಯಾವನು ದೇವಶ್ರೇಷ್ಠನಾದ ನಾರಾಯಣನನ್ನೂ ಹರಿಯನ್ನೂ ದ್ವೇಷಿಸುವನೋ, ಅವನಿಗೆ ಪರಲೋಕವೂ ಇಲ್ಲ, ಇಹಲೋಕವೂ ಇಲ್ಲ. ಅವನ ಪಿತೃಗಳು ಶಾಶ್ವತವಾಗಿ ವರ್ಷಗಟ್ಟಲೆ ನರಕದಲ್ಲಿ ಮುಳುಗಿರುವರು. ಎಲೈ ಪುರುಷಶ್ರೇಷ್ಠನೆ, ವಿಷ್ಣುವು ಆತ್ಮನೆಂದೇ ತಿಳಿಯಬೇಕು; ಇದು ವಸ್ತುಸ್ಥಿತಿ. ಗಂಧವತೀಪುತ್ರನಾದ ನಮ್ಮ ಗುರುವಾದ ವ್ಯಾಸನು ಈ ಅವ್ಯಯವಾದ ಮಾಹಾತ್ಮ್ಯವನ್ನು ನನಗೆ ಹೇಳಿದನು. ಆತನಿಂದ ತಿಳಿದು ಇದನ್ನು ನಿಮಗೆ ಹೇಳಿರುತ್ತೇನೆ.

ನಾರದನಿಗಾದರೂ ಈ ರಹಸ್ಯಸಹಿತವಾಗಿ ಸಂಗ್ರಹವಾದ ಈ ಧರ್ಮವು ಜಗನ್ನಾಥನಾದ ಸಾಕ್ಷನ್ನಾರಾಯಣನಿಂದಲೇ ಪ್ರಾಪ್ತವಾಯಿತು. ಹೀಗೆ ಈ ಮಹಾಧರ್ಮವು ನಿನಗೆ **ಹರಿಗೀತೆ**ಯಲ್ಲಿ (ಭಗವದ್ಗೀತೆಯಲ್ಲಿ) ಸಮಾಸವಿಧಿಯಿಂದ ಉಕ್ತವಾಗಿರುತ್ತದೆ. ಕೃಷ್ಣದ್ವೈಪಾಯನವ್ಯಾಸನು ನಾರಾಯಣನೆಂದೇ ತಿಳಿ. ಎಲೈ ಪುರುಷವ್ಯಾಘ್ರನೆ, ಮತ್ತೆ ಯಾವನುತಾನೆ ಮಹಾಭಾರತಕರ್ತೃವಾದಾನು? ಆ ಪ್ರಭುವಲ್ಲದೆ ಮತ್ತೆ ಯಾವನು ನಾನಾವಿಧವಾದ ಧರ್ಮಗಳನ್ನು ಹೇಳಿಯಾನು?

---

* ಸಂಪುಟ 38; ಸಂಚಿಕೆ 4; ಡಿಸೆಂಬರ್ 1968

ನೀನು ಸಂಕಲ್ಪಮಾಡಿದಂತೆ ಮಹಾಯಜ್ಞವು ನಡೆಯಲಿ! ನೀನು ಅಶ್ವಮೇಧ ಯಜ್ಞವನ್ನು ಸಂಕಲ್ಪಿಸಿರುತ್ತೀಯೆ, ಧರ್ಮಶ್ರವಣವನ್ನೂ ಮಾಡಿದೀಯೆ.

ಸೌತಿ ಇಂತೆಂದನು: ಶೌನಕನೆ, ಆ ಪಾರ್ಥಿವಶ್ರೇಷ್ಠನು ಈ ಮಹಾಖ್ಯಾನವನ್ನು ಕೇಳಿ, ಬಳಿಕ ಯಜ್ಞದ ಪರಿಸಮಾಪ್ತಿಗಾಗಿ ಸರ್ವಕ್ರಿಯೆಗಳನ್ನೂ ಆರಂಭಿಸಿದನು. ಈ ನಾರಾಯಣೀಯಾಖ್ಯಾನವನ್ನು ನೀನು ಕೇಳಿದಂತೆ ನೈಮಿಷಾರಣ್ಯವಾಸಿಗಳಿಗೆ ಹೇಳಿರುತ್ತೇನೆ. ಹಿಂದೆ ಇದನ್ನು ನಾರದನು ನಮ್ಮ ಗುರುಗಳಿಗೆ ಹೇಳಿದನು. ಆಗ ಋಷಿಗಳೂ ಪಾಂಡವರೂ ಕೃಷ್ಣಭೀಮರೂ ಅದನ್ನು ಕೇಳುತ್ತಿದ್ದರು. ಆತನೇ ಪರಮಗುರು, ಜನಪತಿ, ಭುವನಪತಿ, ವಿಶಾಲವಾದ ಧರಣಿಯನ್ನು ಧರಿಸಿದಾತನು; ವೇದಜ್ಞಾನವಿನಯಗಳ ನಿಧಿಯು. ಶಮನಿಯಮಗಳ ನಿಧಿಯು, ದ್ವಿಜರಿಗೆ ಪರಮಹಿತವನ್ನಾಚರಿಸುವಾತನು, ದೇವತೆಗಳಿಗೆ ಹಿತಕಾರಿಯಾದ ಆ ಹರಿಯೇ ನಿನಗೆ ಗತಿಯಾಗಿರಲಿ! ಅಸುರವಧೆಯನ್ನು ಮಾಡುವಾತನೂ ದುರೂಹತಪಸ್ಸುಗಳ ನಿಧಿಯೂ ಯಶಸ್ಸುಗಳಿಗೆ ಪಾತ್ರನೂ, ಮಧುಕೈಟಭರಹಂತೃವೂ ಧರ್ಮವನ್ನು ಅರಿತು ಅನುಷ್ಠಾನಮಾಡಿದವರಿಗೆ ಗತಿದಾತನೂ ಅಭಯದಾತೃವೂ ಯಜ್ಞಭಾಗವನ್ನು ಅಂಗೀಕರಿಸುವಾತನೂ ಆದ ಆತನೇ ನಿನಗೆ ಶರಣು. ಆತನು ತ್ರಿಗುಣನೂ ನಿರ್ಗುಣನೂ ಚತೂರೂಪಧರನೂ ಆಗಿದ್ದಾನೆ. ಇಷ್ಟಾಪೂರ್ತಗಳ ಫಲವನ್ನು ಸ್ವೀಕರಿಸುವಾತನು. ನಿತ್ಯವೂ ಅರ್ಚಿತನಾಗಿರುವ, ಧೈರ್ಯದಿಂದ ಚ್ಯುತನಾಗದೆ ಇರುವ ಆತನು ಋಷಿಗಳಿಗೆ ಆತ್ಮಜ್ಞಾನಜನ್ಯವಾದ ಸದ್ಗತಿಯನ್ನು ಕೊಡಲಿ! ಲೋಕಸಾಕ್ಷಿಯೂ ಅಜನೂ ಪುರಾಣಪುರುಷನೂ ಸೂರ್ಯವರ್ಣನೂ ಈಶ್ವರನೂ ಗತಿಯೂ ಆದ ಆತನನ್ನು ಏಕಮನಸ್ಕರಾಗಿ ಬಹುವಾಗಿ ನಮಸ್ಕರಿಸಿರಿ. ಏಕೆಂದರೆ ಆ ಋಷಿಗೆ ಸಲಿಲೋದ್ಭವ ದೇವನೂ ನಮಸ್ಕರಿಸುತ್ತಾನೆ. ಆತನೇ ಲೋಕಗಳಿಗೆಲ್ಲ ಕಾರಣನು. ಅಮೃತಕ್ಕೆ (ಮೋಕ್ಷಕ್ಕೆ) ಸ್ಥಾನವು; ಸೂಕ್ಷ್ಮವೂ ಪರಾಯಣವೂ ಅಚಲವೂ ಆದ ಪದವು. ಎಲೈ ಉದಾರನಾದ ಶೌನಕನೆ, ತಮ್ಮ ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವ ಸಾಂಖ್ಯಯೋಗಿಗಳು ಆತನನ್ನು ವರಿಸುತ್ತಾರೆ.

* * * * *

## 12. ಹಯಗ್ರೀವಾವತಾರ*

## (1)

ಶೌನಕನಿಂತೆಂದನು: ಆ ಭಗವಂತನಾದ ಪರಮಾತ್ಮನು ಧರ್ಮನ ಮನೆಯಲ್ಲಿ ನರನಾರಾಯಣರೂಪದಿಂದ ಜನಿಸಿದ್ದನ್ನು ಕೇಳಿದ್ದಾಯಿತು. ಎಲೈ ನಿಷ್ಪಾಪನಾದ ಬ್ರಾಹ್ಮಣೋತ್ತಮನೆ, ಮಹಾವರಾಹನಿಂದ ಪಿಂಡೋತ್ಪತ್ತಿಯು ಹೇಗಾಯಿತೆಂಬುದನ್ನೂ ಪ್ರವೃತ್ತಿಯಲ್ಲಿಯೂ ನಿವೃತ್ತಿಯಲ್ಲಿಯೂ ಯಾವಯಾವ ವಿಧಾನವು ಆತನಿಂದ ಹೇಗೆ ಕಲ್ಪಿತವಾಯಿತೋ ಅದನ್ನೂ ನೀನು ಹೇಳಿದ್ದನ್ನು 'ಶ್ರವಣ' ಮಾಡಿದೆವು. ಸಮುದ್ರದ ಉತ್ತರಪೂರ್ವ (ಈಶಾನ್ಯ) ಭಾಗದಲ್ಲಿ ಹವ್ಯಕವ್ಯಗಳನ್ನು ಭುಂಜಿಸುವ ನಾರಾಯಣನು ಹಯಗ್ರೀವಾವತಾರವನ್ನು ಮಾಡಿದ ರೀತಿಯನ್ನೂ ಆ ರೂಪವನ್ನು ಭಗವಾನ್ ಪರಮೇಷ್ಠಿಬ್ರಹ್ಮನು ಪ್ರತ್ಯಕ್ಷವಾಗಿ ಕಂಡದ್ದನ್ನೂ ತಿಳಿದದ್ದಾಯಿತು. ಮುನಿಯೆ, ಹೀಗೆ ದೇವತಾಶ್ರೇಷ್ಠನಾದ ಅಮಿತಪ್ರಕಾಶನಾದ ಹಯಗ್ರೀವನನ್ನು ಕಂಡು ಬ್ರಹ್ಮನು ಏನುಮಾಡಿದನು? ಎಲೈ ಉತ್ತಮಮತಿಯೆ, ಭಗವದವತಾರವಿಷಯಕವಾದ ಈ ತಿಳಿವಳಿಕೆಯಿಲ್ಲದೆ ಆಗಿರುವ ಸಂಶಯವನ್ನು ಪರಿಹರಿಸುವನಾಗು. ನೀನು ಆ ಮಹಾಪುರುಷನು ಮಾಡಿದ್ದನ್ನು ನಮಗೆ ಹೇಳು. ಪುಣ್ಯಕಥೆಯನ್ನು ಹೇಳಿ ನಮ್ಮನ್ನು ಈವರೆಗೆ ಪಾವನಗೊಳಿಸಿರುತ್ತೀಯೆ.

ಇದಕ್ಕೆ ಆ **ಸೂತಪುತ್ರನು ಹೇಳಿದ ಉತ್ತರವೇನೆಂದರೆ:** ವೇದತುಲ್ಯವಾದ ಈ ಪುರಾತನವೃತ್ತಾಂತವೆಲ್ಲವನ್ನೂ ನಿನಗೆ ತಿಳಿಸುವೆನು. ಇದನ್ನು ಪರೀಕ್ಷಿತಪುತ್ರನಾದ ಜನಮೇಜಯರಾಜನಿಗೆ ವ್ಯಾಸಭಗವಂತನು ಹೇಳಿರುತ್ತಾನೆ. ಶ್ರೀಹರಿಯು ಹಯಗ್ರೀವನಾಗಿ ಅವತರಿಸಿದ ಕಥೆಯನ್ನು ಕೇಳಿದ ರಾಜನು ಇದೇ ಪ್ರಶ್ನೆಯನ್ನು ಕೇಳಿದನು. **ಜನಮೇಜಯನು ಇಂತೆಂದನು;** ಎಲೈ, ಸತ್ಪುರುಷಶ್ರೇಷ್ಠನೆ, ಬ್ರಹ್ಮನು ಹಯಗ್ರೀವನನ್ನು ಕಂಡನೆಂದೆಯಲ್ಲ, ಆ ಪ್ರಾದುರ್ಭಾವವು ಏತಕ್ಕೋಸ್ಕರ ಆಯಿತು? ಅದನ್ನು ನನಗೆ ಹೇಳು. ಇದಕ್ಕೆ ವೈಶಂಪಾಯನನು ಹೇಳಿದ್ದೇನೆಂದರೆ: ಈ ಲೋಕದಲ್ಲಿ ಯಾವಯಾವ ಪ್ರಾಣಿಯು ಉಂಟಾಗಿರುವದೋ, ಅದೆಲ್ಲದರಲ್ಲಿಯೂ ಐದು ಭೂತಗಳು ಸೇರಿಕೊಂಡಿರುತ್ತವೆ. ವಿರಾಡ್ರೂಪನಾದ ಭಗವನ್ನಾರಾಯಣನೇ

---

* ಸಂಪುಟ 38; ಸಂಚಿಕೆ 5; ಜನವರಿ 1969

ಜಗತ್ತನ್ನು ಸೃಷ್ಟಿಸಿರುವವನು. ಆತನೇ ಭೂತಗಳಿಗೆಲ್ಲ ಅಂತರಾತ್ಮನು, ಪರದಾತ್ಮವು; ಅವನು ಸಗುಣನೂ ನಿರ್ಗುಣನೂ ಆಗಿರುವವನು.

ಎಲೈ ನೃಪಸತ್ತಮನೆ, ಪಂಚಭೂತಗಳು ಅತ್ಯಂತವಾಗಿ ಹೇಗೆ ಪ್ರಲಯವಾಗುವವೆಂಬುದನ್ನು ಹೇಳುವೆನು ಕೇಳು. ಭೂಮಿಯು ಏಕಾರ್ಣವವಾದ ಅಪ್ಪಿನಲ್ಲಿ ಲಯವಾದ ಬಳಿಕ, ಆ ಜಲವೂ ಅಗ್ನಿಯಲ್ಲಿ ಲಯವಾಗಿ, ಅಗ್ನಿಯೂ ವಾಯುವಿನಲ್ಲಿ ಲಯವಾಗಲು, ವಾಯುವೂ ಆಕಾಶದಲ್ಲಿ ಲಯವಾಗಿ, ಆಕಾಶವೂ ವ್ಯಕ್ತವಾದ ಮನಸ್ಸಿನಲ್ಲಿ ಲಯವಾಗುವದು. ಆಮೇಲೆ ವ್ಯಕ್ತವೂ ಅವ್ಯಕ್ತರೂಪವನ್ನು ಹೊಂದುವದು. ಬಳಿಕ ಅವ್ಯಕ್ತವು ಪುರುಷನಲ್ಲಿ ಸೇರಿದಮೇಲೆ ಪುರುಷನೇ ಸರ್ವವ್ಯಾಪಿಯಾಗಿರುವನು.

ಹೀಗೆ ಪ್ರಲಯವಾದ ಬಳಿಕ ಎಲ್ಲವೂ ತಮಸ್ಸೇ ಆಯಿತು, ಯಾವದೊಂದೂ ಗೋಚರವಾಗುತ್ತಿರಲಿಲ್ಲ. ತಮಸ್ಸಿನಿಂದ ತಮಸ್ಸಿಗೂ ಮೂಲವಾದ ಅಮೃತಾತ್ಮಕವಾದ ಬ್ರಹ್ಮವು ಪ್ರಕಟವಾಯಿತು. ಅದೇ ಎಲ್ಲಾ ನಾಮರೂಪಗಳಲ್ಲಿ ವಿರಾಟ್ಪುರುಷ ಶರೀರವನ್ನು ಆಶ್ರಯಿಸಿಕೊಂಡಿರುತ್ತದೆ. ಆತನು **ಅನಿರುದ್ಧ**ನೆನಿಸುವನು, ಅದನ್ನು **ಪ್ರಧಾನ**ವೆನ್ನುವರು, ಎಲೈ ರಾಜಶ್ರೇಷ್ಠನೆ, ಅದೇ ತ್ರಿಗುಣವಾದ ಅವ್ಯಕ್ತವೆಂದು ತಿಳಿಯಬೇಕು. ವಿದ್ಯಾಸಹಿತನಾದ ಆ ದೇವನು, ವಿಷ್ವಕ್ಸೇನನು, ಹರಿಯು, ಪ್ರಭುವು; ಅವನು ನಿದ್ರಾಯೋಗವನ್ನು ಹೊಂದಿ ಬಹುಗುಣಗಳಿಂದೊಡಗೂಡಿದ ವಿಚಿತ್ರ ಜಗತ್ತನ್ನು ಸೃಷ್ಟಿಸುವೆನೆಂದು ಯೋಚಿಸುತ್ತಾ ಜಲದಲ್ಲಿಯೇ ಮಲಗಿದ್ದನು. ಅವನಿಂದ **ಅಹಂಕಾರ**ವುಂಟಾಯಿತು: ಅದೇ **ಚತುರ್ಮುಖಬ್ರಹ್ಮನು,** ಸರ್ವಲೋಕ ಪಿತಾಮಹನಾದ ಹಿರಣ್ಯಗರ್ಭಭಗವಂತನು. ಪದ್ಮದಲ್ಲಿ ಅನಿರುದ್ಧನಿಂದ ಕಮಲದಂತಿರುವ ಕಣ್ಣುಗಳುಳ್ಳವನಾಗಿ ತೋರಿಕೊಂಡು ಸಹಸ್ರಪತ್ರಾತ್ಮಕವಾದ ಕಮಲದಲ್ಲಿ ಆ ಸನಾತನನು ಕುಳಿತುಕೊಂಡನು. ಅದ್ಭುತಪ್ರಕಾಶನಾದ ಆ ಪ್ರಭುವು ಆಪೋಮಯವಾಗಿರುವ ಲೋಕಗಳನ್ನು ನೋಡಿದನು; ಸತ್ತ್ವಸ್ಥನಾದ ಆ ಪರಮೇಷ್ಠಿಯು ಭೂತಗಳ ಸೃಷ್ಟಿಯಲ್ಲಿ ಪ್ರವೃತ್ತನಾದನು. ಸೂರ್ಯನ ಕಿರಣಗಳಂತೆ ಹೊಳೆಯುತ್ತಿದ್ದ ಪದ್ಮದ ಎಲೆಯಲ್ಲಿ ಮೊದಲೇ ಅದರಲ್ಲಿ ನಾರಾಯಣಕೃತವಾದ (ರಜಸ್ತಮೋಗುಣಗಳ ಪ್ರತೀಕವಾದ) ಎರಡು ಜಲಬಿಂದುಗಳು ಇದ್ದವು. ಅನಾದಿನಿಧನನಾದ ಅಚ್ಯುತನು ಅವುಗಳನ್ನು ನೋಡಿದನು. ಅವುಗಳಲ್ಲಿ

ಮಧುವಿನಂತೆ ಹೊಳೆಯುತ್ತಿದ್ದ ಒಂದರಿಂದ **'ಮಧು'**ಎಂಬ ತಾಮಸನಾದ ಮಧುದೈತ್ಯನಾದನು; ಕಠಿನವಾಗಿದ್ದ ಮತ್ತೊಂದು ಬಿಂದುವಿನಿಂದ **ಕೈಟಭ**ನೆಂಬ ರಾಜಸದೈತ್ಯನಾದನು.

* * * * *

## 12. ಮಧುಕೈಟಭರ ವಧೆ*

## (2)

ತಮಸ್ಸಿನಿಂದಲೂ ರಜಸ್ಸಿನಿಂದಲೂ ಕೂಡಿ ಬಲವಂತರಾಗಿ ಗದಾಹಸ್ತರಾಗಿ ಕಮಲದ ನಾಳವನ್ನೇ ಅನುಸರಿಸಿ ಓಡಿಬರುತ್ತಿರುವ ಆ ಮಧುಕೈಟಭರು, ಅಪರಿಮಿತವಾದ ಕಾಂತಿಯಿಂದ ಕೂಡಿದ್ದ ಬ್ರಹ್ಮನು ಮನೋಹರವಾದ ರೂಪವನ್ನು ಧರಿಸಿಕೊಂಡಿರುವ ನಾಲ್ಕು ವೇದಗಳನ್ನು ಸೃಷ್ಟಿಸುತ್ತಿರುವದನ್ನು ಕಂಡರು. ವಿಶಾಲಕಾಯರಾಗಿದ್ದ ಆ ಅಸುರೋತ್ತಮರು ವೇದಗಳನ್ನು ಕಂಡು ಬ್ರಹ್ಮನು ನೋಡುತ್ತಿರುವಂತೆಯೇ ಅವುಗಳನ್ನು ಹಿಡಿದುಕೊಂಡರು. ಬಳಿಕ ಆ ದಾನವಶ್ರೇಷ್ಠರು ಸನಾತನವೇದಗಳನ್ನು ತೆಗೆದುಕೊಂಡು ಉತ್ತರಪೂರ್ವ (ಈಶಾನ್ಯ) ದಲ್ಲಿದ್ದ ಮಹಾಸಾಗರದಲ್ಲಿ ಬೇಗನೆ ಮುಳುಗಿ ರಸಾತಲವನ್ನು ಹೊಕ್ಕರು.

ಆಗ ವೇದಗಳು ಅಪಹೃತವಾಗಲು ಬ್ರಹ್ಮನು, ವೇದಗಳನ್ನು ಕಳೆದುಕೊಂಡ, ಹೆಚ್ಚಿನ ಖೇದದಿಂದ ಈಶ್ವರನನ್ನು ಕುರಿತು ಇಂತೆಂದನು: ವೇದಗಳೇ ನನಗೆ ನಿಜವಾದ ಚಕ್ಷುರಿಂದ್ರಿಯವು, ವೇದಗಳೇ ನನಗೆ ಪರಮಬಲವು; ವೇದಗಳೇ ನನಗೆ ಮುಖ್ಯ ಆಶ್ರಯವು; ವೇದಗಳೇ ನನಗೆ ಸರ್ವೋತ್ತಮಬ್ರಹ್ಮ. ನನ್ನ ವೇದಗಳನ್ನು ಬಲಾತ್ಕಾರದಿಂದ ದಾನವರು ಇಲ್ಲಿಂದ ಕಸಿದುಕೊಂಡು ಹೋಗಿರುತ್ತಾರೆ. ವೇದಗಳಿಲ್ಲದ್ದರಿಂದ ನನಗೆ ಲೋಕಗಳೆಲ್ಲವೂ ಕಗ್ಗತ್ತಲೆಯಲ್ಲಿದ್ದಂತೆ ಆಗಿರುತ್ತವೆ. ವೇದಗಳಿಲ್ಲದೆ ಲೋಕಗಳ ಉತ್ತಮಸೃಷ್ಟಿಯನ್ನು ಹೇಗೆ ಮಾಡಲಿ? ಅಯ್ಯೋ, ವೇದಗಳ ಅದಶನದಿಂದ ನನಗೆ ಮಹಾದುಃಖವುಂಟಾಗಿರುತ್ತದೆ. ಈ ದುಃಖಶೋಕಪರಾಯಣವಾದ ನನ್ನ ಹೃದಯಕ್ಕೆ ವೇದಗಳಿಲ್ಲದಿರುವದು ನೋವನ್ನುಂಟುಮಾಡುತ್ತಿದೆ. ಶೋಕಸಾಗರದಲ್ಲಿ ಮುಳುಗಿರುವ ನನ್ನನ್ನು ಇಂದು

* ಸಂಪುಟ 38; ಸಂಚಿಕೆ 6; ಫೆಬ್ರವರಿ 1969

ಇದರಿಂದ ಯಾವಾತನು ಉದ್ಧರಿಸಿಯಾನು? ಯಾವಾತನಿಗೆ ಪ್ರಿಯನೆಂದೆನಿಸಿ ಕೊಂಡರೆ ಆ ವೇದಗಳನ್ನು ಎತ್ತಿ ತಂದಾನು?

ಎಲೈ ನೃಪಶ್ರೇಷ್ಠನೆ, ಹೀಗೆನ್ನುತ್ತಿದ್ದ ಬ್ರಹ್ಮನಿಗೆ ಹರಿಯನ್ನು ಸ್ತೋತ್ರ ಮಾಡಬೇಕೆಂಬ ಬುದ್ಧಿಯು ಉಂಟಾಯಿತಯ್ಯ, ಬುದ್ಧಿವಂತರಲ್ಲಿ ಶ್ರೇಷ್ಠನಾದ ರಾಜನೆ!

**ಬ್ರಹ್ಮನಿಂತೆಂದನು:** ಓಂ ವೇದಹೃದಯನೆ, ನಿನಗೆ ನಮಸ್ಕಾರ! ನನ್ನ ಪೂರ್ವಜನೆ, ನಿನಗೆ ನಮಸ್ಕಾರ! ಲೋಕಗಳಿಗೆ ಆದ್ಯನಾದವನೆ, ಭುವನಗಳಿಗೆಲ್ಲ ಶ್ರೇಷ್ಠನಾದವನೆ, ಸಾಂಖ್ಯಯೋಗಗಳ ನಿಧಿಯೆ, ಪ್ರಭುವೆ, ನಿನಗೆ ನಮಸ್ಕಾರ! ವ್ಯಕ್ತಾವ್ಯಕ್ತ (ಜಗತ್ತು) ಗಳನ್ನುಂಟುಮಾಡುವಾತನೆ, ಅಚಿಂತ್ಯನೆ, ಕ್ಷೇಮಮಾರ್ಗ ದಲ್ಲಿರುವಾತನೆ, ವಿಶ್ವಪಾಲಕನೆ, ಸರ್ವಪ್ರಾಣಿಗಳಿಗೂ ಅಂತರಾತ್ಮನಾಗಿರುವಾತನೆ, ಅಯೋನಿಜನೆ, ಲೋಕಗಳಿಗೆಲ್ಲ ಆಶ್ರಯವಾಗಿರುವಾತನೆ, ಸ್ವಯಂಭುವೆ, ನಾನು ನಿನ್ನ ಪ್ರಸಾದದಿಂದ ಹುಟ್ಟಿರುತ್ತೇನೆ. ನಿನ್ನಿಂದಲೇ ದ್ವಿಜರಿಗೆ ಪೂಜ್ಯವಾದ ನನ್ನ **ಮಾನಸಜನ್ಮ**ವಾಯಿತು; ಮತ್ತು ನಿನ್ನ **ಚಕ್ಷುಸ್ಸಿ**ನಿಂದಲೇ ಪುರಾತನವಾದ ನನ್ನ ಎರಡನೆಯ ಜನ್ಮವಾಯಿತು. ನಿನ್ನ ಪ್ರಸಾದದಿಂದಲೇ ನನಗೆ ಮೂರನೆಯದಾದ **ವಾಚಿಕಜನ್ಮ**ವುಂಟಾಯಿತು. ಎಲೈ ವಿಭುವೆ, ನಿನ್ನಿಂದಲೇ ನನಗೆ ನಾಲ್ಕನೆಯದಾದ **ಶ್ರವಣಜವಾದ ಜನ್ಮ**ವಾಯಿತು. ಅಚ್ಯುತನೆ, ನನಗೆ ನಿನ್ನ **ನಾಸಿಕ**ದಿಂದ ಮತ್ತೊಂದು ಜನ್ಮವಾಯಿತು. ನನ್ನ ಆರನೆಯದಾದ **ಅಂಡಜ ಜನ್ಮ**ವೂ ನಿನ್ನಿಂದಲೇ ಆಯಿತು. ಪ್ರಭುವೆ, ಈಗ ಏಳನೆಯ **ಪದ್ಮಜಜನ್ಮ**ವುಂಟಾಗಿರುತ್ತದೆ. ಹೀಗೆ ಪ್ರತಿಯೊಂದು ಸೃಷ್ಟಿಯಲ್ಲಿಯೂ ಎಲೈ ತ್ರಿಗುಣಾತೀತನೆ, ನಾನು ನಿನ್ನ ಪುತ್ರನೆಂದು ಪ್ರಸಿದ್ಧನಾಗಿರು ತ್ತೇನೆ. ಎಲೈ ಪುಂಡರೀಕಾಕ್ಷನೆ, ಪ್ರಧಾನಗುಣದಿಂದ ನಾನು ಕಲ್ಪಿತನಾಗಿರುತ್ತೇನೆ. ನೀನು ಈಶ್ವರನು, ಸ್ವಭಾವವು, ಸ್ವಯಂಭುವು, ಪುರುಷೋತ್ತಮನು.

ನನ್ನನ್ನು ನೀನೆ ವೇದಚಕ್ಷುವಾಗಿ, ನಿರ್ಮಿಸಿರುತ್ತೀಯೆ, ನಾನು ವೇದಚಕ್ಷುವಾಗಿ ಕಾಲಾತೀತನಾಗಿ ಹುಟ್ಟಿರುತ್ತೇನೆ. ಆ ನನ್ನ ಚಕ್ಷುಗಳಾದ ವೇದಗಳು ಅಪಹೃತ ವಾಗಿಬಿಟ್ಟಿವೆ: ನಾನು ಕುರುಡನಾಗಿಬಿಟ್ಟಿದೇನೆ. ನೀನು ಎಚ್ಚತ್ತವನಾಗು. ನಾನು ನಿನಗೆ ಪ್ರಿಯನು, ನೀನೂ ನನಗೆ ಪ್ರಿಯನಾಗಿರುವೆ. ನನ್ನ ಚಕ್ಷುಸ್ಸುಗಳನ್ನು ಕೊಡು!

## 12. ಮಧುಕೈಟಭರ ವಧೆ

### (3)

ವೈಶಂಪಾಯನನು ಕಥೆಯನ್ನು ಮುಂದುವರಿಯಿಸಿ ಇಂತೆಂದನು: ಈ ರೀತಿಯಲ್ಲಿ ಬ್ರಹ್ಮನು ಸ್ತುತಿಸಲಾಗಿ ಸರ್ವತೋಮುಖಪುರುಷನಾದ ಆ ಭಗವಂತನು ನಿದ್ರೆಯನ್ನಳಿದು ಆಗ ವೇದಕಾರ್ಯಾರ್ಥವಾಗಿ ಉದ್ಯುಕ್ತನಾದನು. ಐಶ್ವರ್ಯದಿಂದಲೂ ಯೋಗದಿಂದಲೂ ಎರಡನೆಯ ಶರೀರವನ್ನು ಧರಿಸಿದನು. ಸುಂದರವಾದ ನಾಸಿಕೆಯಿಂದೊಡಗೂಡಿದ ಚಂದ್ರನಂತೆ ಹೊಳೆಯುವ ಶರೀರವನ್ನು ತಳೆದು, ಶುಭ್ರವಾದ ವೇದಗಳಿಗೆ ಆಶ್ರಯವಾದ ಹಯಶೀರ್ಷನಾದನು. ನಕ್ಷತ್ರಗಳು ತಾರಕೆಗಳೂ ಇರುವ ದ್ಯುಲೋಕವೇ ಅವನ ಶಿರಸ್ಸಾಯಿತು. ಅವನ ಕೇಶಗಳು ಸೂರ್ಯನ ಕಿರಣಗಳಂತೆ ಹೊಳೆಯುವವನಾಗಿ ಉದ್ದಕ್ಕೆ ಇಳಿಯಬಿಟ್ಟಿದ್ದವು. ಕಿವಿಗಳು ಆಕಾಶಪಾತಾಲಗಳಾಗಿದ್ದವು. ಹಣೆಯು ಭೂತಧಾರಿಣಿಯಾದ ಧರಿತ್ರಿಯಾಗಿತ್ತು. ಗಂಗಾ ಸರಸ್ವತಿಯರು ಅವನ ಪಿರ್ರೆಗಳಾಗಿದ್ದರು. ಸಮುದ್ರಗಳೆರಡೂ ಹುಬ್ಬುಗಳಾಗಿದ್ದವು. ಚಂದ್ರಸೂರ್ಯರೇ ಅವನ ಕಣ್ಣುಗಳಾಗಿದ್ದರು. ಸಂಧ್ಯೆಯೇ ಆತನ ನಾಸಿಕೆಯಾಗಿತ್ತು, ಓಂಕಾರವು ಅವನ ಆಭೂಷಣವಾಗಿತ್ತು, ಮಿಂಚು ನಾಲಗೆಯಾಗಿತ್ತು. ಎಲೈ ರಾಜನೆ, ಸೋಮಪರೇ ಮುಂತಾದ ಪಿತೃಗಳೇ ಆತನ ದಂತಗಳಾಗಿದ್ದರು. ಗೋಲೋಕ, ಬ್ರಹ್ಮಲೋಕ- ಎರಡೂ ಆ ಮಹಾತ್ಮನ ತುಟಿಗಳಾಗಿದ್ದವು. ರಾಜನೆ, ಅವನ ಕತ್ತು ಗುಣೋತ್ತರವಾದ ಕಾಲರಾತ್ರಿಯಾಗಿತ್ತು.

ಇಂಥ ನಾನಾಮೂರ್ತಿಗಳಿಂದ ಆದೃತವಾಗಿದ್ದ ಹಯಶಿರಸ್ಸಿನವನಾಗಿ ವಿಶ್ವೇಶನಾದ ಆ ಪ್ರಭುವು ಅಲ್ಲಿಂದ ಅಂತರ್ಧಾನವನ್ನು ಹೊಂದಿ ರಸಾತಲಕ್ಕೆ ಬಂದು ಸೇರಿದನು. ರಸಾತಲವನ್ನು ಸೇರಿ ಪರಮಯೋಗವನ್ನು ವಶಗೊಳಿಸಿ ಕೊಂಡು ಶಿಕ್ಷಾನುಸಾರವಾದ ಸ್ವರದಿಂದ ಉದ್ಗೀಥವನ್ನು ಹಾಡಿದನು. ಆ ಸ್ವರವು ಮಾರುದನಿಯಿಂದ ಸ್ನಿಗ್ಧಗಂಭೀರವಾಗಿ ಸರ್ವಭೂತಗುಣಗಳಿಂದೊಡಗೂಡಿ ಮಹಾಶಬ್ದವಾಯಿತು. ಆಗ ಆ ಅಸುರರಿಬ್ಬರೂ ಕಾಲಬದ್ಧರಾಗಿ ವೇದಗಳನ್ನು ರಸಾತಲದಲ್ಲಿಟ್ಟು ಶಬ್ದವು ಯಾವ ಕಡೆಯಿಂದ ಬರುತ್ತಿತ್ತೋ ಆ ಕಡೆಗೆ ಧಾವಿಸಿದರು.

---

* ಸಂಪುಟ 38; ಸಂಚಿಕೆ 7; ಮಾರ್ಚ್ 1969

ಈ ನಡುವೆ ಹಯಶಿರೋಧರನಾದ ಆ ದೇವನೂ ರಸಾತಲದಲ್ಲಿದ್ದ ವೇದಗಳೆಲ್ಲ ವನ್ನೂ ತೆಗೆದುಕೊಂಡು ಮತ್ತೆ ಬ್ರಹ್ಮನಿಗೆ ಅವುಗಳನ್ನು ಕೊಟ್ಟು ತನ್ನ ಪ್ರಕೃತಿಯನ್ನು ಹೊಂದಿದನು. ಆ ಹಯಶಿರಸ್ಸನ್ನು ಈಶಾನ್ಯಸಾಗರದಲ್ಲಿಟ್ಟು ವೇದಗಳಿಗೆ ಆಲಯವೂ ಆದನು.

ಬಳಿಕ ಆ ಮಧುಕೈಟಭದಾನವರು ಆ ಶಬ್ದವಾದ ಬಳಿಗೆ ಮತ್ತೆ ವೇಗದಿಂದ ಬಂದು ಸೇರಿದರು. ತಾವು ವೇದಗಳನ್ನಿಟ್ಟಿದ್ದ ಸ್ಥಲವು ಬರಿದಾಗಿರುವದನ್ನು ಕಂಡು ಮತ್ತೂ ವೇಗದಿಂದ ರಸಾತಲದಿಂದ ಶೀಘ್ರವಾಗಿ ಮೇಲಕ್ಕೆದ್ದರು. ನೋಡುವಲ್ಲಿ ಅದೇ ಆದಿಕರ್ತೃಪುರುಷನಾದ ಆ ಪ್ರಭುವನ್ನು ಕಂಡರು. ಆತನು ಆಗ ಬೆಳ್ಳನೆಯ ಚಂದ್ರನಂತೆ ಹೊಳೆಯುವ ಅನಿರುದ್ಧತನುವಿನಲ್ಲಿದ್ದನು, ಮತ್ತು ನಿದ್ರಾಯೋಗವನ್ನು ಆಶ್ರಯಿಸಿದ್ದನು. ನೀರಿನಲ್ಲಿ ಶೇಷನ ಶಯ್ಯೆಯನ್ನು ಕಲ್ಪಿಸಿಕೊಂಡು ಸುತ್ತಲೂ ಜ್ವಾಲಾಮಾಲೆಯು ಆವರಿಸಿಕೊಂಡಿರಲು ನಿಷ್ಕಲ್ಮಷವಾದ ಸತ್ತ್ವದಿಂದ ಸಂಪನ್ನನಾಗಿ ಮನೋಹರವಾದ ಕಾಂತಿಯಿಂದೊಡಗೂಡಿ ಮಲಗಿದ್ದ ಆತನನ್ನು ನೋಡಿ ದಾನವೇಂದ್ರರಿಬ್ಬರೂ ಅಟ್ಟಹಾಸವನ್ನು ಮಾಡಿದರು. ರಜಸ್ತಮೋಗುಣ ಗಳಿಂದ ಆವಿಷ್ಟರಾಗಿ ಅವರಿಬ್ಬರೂ 'ಇಗೊ, ಇವನೇ ಆ ಶುಭ್ರವರ್ಣದ ಪುರುಷನು, ನಿದ್ರೆಯನ್ನು ಹೊಂದಿ ಇಲ್ಲಿ ಮಲಗಿರುತ್ತಾನೆ; ಇವನೇ ನಿಜವಾಗಿ ರಸಾತಲದಿಂದ ವೇದಗಳನ್ನು ಅಪಹರಿಸಿರಬೇಕು. ಇವನು ಯಾರವನೊ, ಯಾರೊ, ಏತಕ್ಕೆ ಹೀಗೆ ನಾಗಶಾಯಿಯಾಗಿ ಮಲಗಿರುತ್ತಾನೊ'? ಎನ್ನುತ್ತಾ ಹರಿಯನ್ನು ಎಚ್ಚರಿಸಿದರು.

ಎಚ್ಚತ್ತ ಪುರುಷೋತ್ತಮನು ಇವರು ಯುದ್ಧಕ್ಕೆ ಬಂದಿದಾರೆ– ಎಂಬುದನ್ನರಿತು ಯುದ್ಧಕ್ಕೆ ಸಿದ್ಧನಾದನು. ಆ ಬಳಿಕ ಅವರಿಬ್ಬರಿಗೂ ನಾರಾಯಣನಿಗೂ ಯುದ್ಧವಾಯಿತು. ರಜಸ್ತಮೋಯಕ್ತಶರೀರರಾದ ಆ ಮಧುಕೈಟಭರನ್ನು ಬ್ರಹ್ಮನಿಗೆ ಉಪಕಾರವಾಗಲೆಂದು ಮಧುಸೂದನನು ಕೊಂದುಹಾಕಿದನು. ಹೀಗೆ ಅವರನ್ನು ಕೊಂದು ವೇದಗಳನ್ನು ತಂದುಕೊಟ್ಟ ಪುರುಷೋತ್ತಮಭಗವಂತನು ಬ್ರಹ್ಮನ ಶೋಕವನ್ನು ಹೋಗಲಾಡಿಸಿದನು.

ಆ ಬಳಿಕ ಶ್ರೀಹರಿಯ ಉಪಕಾರದಿಂದ ವೇದಗಳನ್ನು ಪಡೆದುಕೊಂಡ ಬ್ರಹ್ಮನು ಚರಾಚರಪ್ರಾಣಿಗಳಿಗೆ ಆಶ್ರಯವಾದ ಎಲ್ಲಾ ಲೋಕಗಳನ್ನೂ ಸೃಷ್ಟಿಸಿದನು, ಬ್ರಹ್ಮನಿಗೆ ಲೋಕಗಳನ್ನು ಸೃಷ್ಟಿಮಾಡುವದಕ್ಕೆ ಬೇಕಾದ ಬುದ್ಧಿಯನ್ನು ಅನುಗ್ರಹಿಸಿ

ಆ ದೇವನಾದ ಹರಿಯು ಅಲ್ಲಿಯೇ ಅಂತರ್ಧಾನವಾಗಿ ತಾನು ಎಲ್ಲಿಂದ ಬಂದಿದ್ದನೋ ಅಲ್ಲಿಗೆ ಹೊರಟುಹೋದನು. ಕ್ರೂರರಾದ ಆ ದಾನವರಿಬ್ಬರನ್ನೂ ಹಯಗ್ರೀವರೂಪವನ್ನು ಧರಿಸಿಕೊಂಡು ಮತ್ತೆ ಪ್ರವೃತ್ತಿಧರ್ಮದ ಪ್ರಚಾರಕ್ಕಾಗಿ ಮಹಾಭಾಗನಾದ ಹರಿಯು ಅದೇ ಶರೀರವನ್ನೇ ಧರಿಸಿದನು. ಭಗವಂತನ ಈ ಹಯಗ್ರೀವರೂಪವು ಪುರಾಣಪ್ರಸಿದ್ಧವೂ ವರದಾಯಕವೂ ಆಗಿರುತ್ತದೆ. ಯಾವ ಬ್ರಾಹ್ಮಣನು ಇದನ್ನು ನಿತ್ಯವೂ ಶ್ರವಣಮಾಡಿ ಸ್ಮರಿಸುತ್ತಿರುವನೋ ಅವನ ಅಧ್ಯಯನವು ಎಂದಿಗೂ ನಷ್ಟವಾಗದೆ ಇರುವದು. ಹಯಗ್ರೀವರೂಪನಾದ ದೇವನನ್ನು ಆರಾಧಿಸಿ ಪಾಂಚಾಲದೇಶದ ಗಾಲವಮುನಿಯು ವೇದಗಳ ಕ್ರಮವಿಭಾಗಪಾಠವನ್ನು ಪಡೆದುಕೊಂಡನು. ಎಲೈ ರಾಜನೆ, ಈ ಹಯಗ್ರೀವಾಖ್ಯಾನ ವನ್ನು ನಿನಗೆ ಹೇಳಿರುತ್ತೇನೆ; ಪುರಾಣವೂ ವೇದಸಂಮತವೂ ಆದ ಇದನ್ನೇ ನೀನು ಹೇಳಬೇಕೆಂದು ಕೇಳಿದೆಯಷ್ಟೆ? ಆ ದೇವನು ಕಾರ್ಯವಶದಿಂದ ಯಾವಯಾವ ಶರೀರವನ್ನು ಧರಿಸಲಿಚ್ಛಿಸುವನೋ ಆಯಾ ರೂಪದಿಂದ ತನ್ನನ್ನು ತಾನೇ ಮಾರ್ಪಡಿಸಿ ಪ್ರಕಟಿಸುವನು. ಈ ಶ್ರೀಮಂತನೇ ವೇದನಿಧಿ, ಈತನೇ ತಪಸ್ಸಿನ ನಿಧಿ, ಈ ವಿಭುವೇ ಯೋಗವು, ಸಾಂಖ್ಯವು, ಬ್ರಹ್ಮವೂ ಶ್ರೇಷ್ಠವಾದ ಹವಿಸ್ಸೂ ಆಗಿರುತ್ತಾನೆ. ವೇದಗಳು ನಾರಾಯಣಪರವೇ ಆಗಿರುತ್ತವೆ, ಯಜ್ಞಗಳೂ ಹವಿಸ್ಸೂ ನಾರಾಯಣನೇ, ತಪಸ್ಸೂ ನಾರಾಯಣನಿಗಾಗಿರುತ್ತದೆ; ನಿರತಿಶಯವಾದ ಗತಿಯೆಂದರೆ ನಾರಾಯಣಪ್ರಾಪ್ತಿಯೇ, ಸತ್ಯವು ನಾರಾಯಣಪರವೇ, ಋತವೂ ನಾರಾಯಣಾತ್ಮಕವೇ, ಪುನರಾವೃತ್ತಿರಹಿತವಾದ ಗತಿಯನ್ನು ಕೊಡುವ ನಿವೃತ್ತಿಧರ್ಮವೂ ನಾರಾಯಣಪರ, ಪ್ರವೃತ್ತಿಧರ್ಮವೂ ನಾರಾಯಣಪರ, ಭೂಮಿಯಲ್ಲಿರುವ ಗಂಧವು ನಾರಾಯಣಾತ್ಮಕವೇ, ಅಪ್ಪಿನಲ್ಲಿರುವ ರಸವೂ ನಾರಾಯಣಾತ್ಮಕ, ಅಗ್ನಿಯಲ್ಲಿರುವ ರೂಪವು ನಾರಾಯಣಾತ್ಮಕವೇ, ವಾಯು ವಿನಲ್ಲಿರುವ ಸ್ಪರ್ಶವೂ ನಾರಾಯಣಾತ್ಮಕವೆನಿಸುವದು; ಆಕಾಶದಲ್ಲಿರುವ ಸ್ಪರ್ಶವೂ ನಾರಾಯಣಾತ್ಮಕವೇ, ಅವ್ಯಕ್ತವಾದ ತ್ರಿಗುಣವಾದ ಮನಸ್ಸೂ ಕಾಲವೂ ನಕ್ಷತ್ರಮಂಡಲವೂ ಎಲ್ಲವೂ ನಾರಾಯಣನೇ, ಕೀರ್ತಿ, ಶ್ರೀಲಕ್ಷ್ಮೀ ದೇವತೆಗಳು, ಸಾಂಖ್ಯ, ಯೋಗ– ಎಲ್ಲವೂ ನಾರಾಯಣಾತ್ಮಕವೇ. ಪುರುಷ, ಪ್ರಧಾನ, ಸ್ವಭಾವ, ಕರ್ಮ, ದೈವ– ಇವುಗಳೆಲ್ಲವು ನಾರಾಯಣ ರೂಪವೇ. ಶರೀರ, ಕರ್ತೃ, ನಾನಾವಿಧಕರಣ, ಪ್ರಾಣಚೇಷ್ಟೆಗಳು, ಐದನೆಯದಾದ ದೈವ– ಈ ಐದೂ

ಕರ್ಮಕಾರಣಗಳು; ಇವಕ್ಕೆಲ್ಲ ಹರಿಯೇ ನಿಷ್ಠೆ. ಸರ್ವತೋಮುಖವಾಗಿರುವ ಹೇತುಗಳಿಂದ ತತ್ತ್ವವನ್ನು ಅರಿಯಬೇಕೆಂಬವರಿಗೆ ಗುರಿಯಾಗಿರುವ ತತ್ತ್ವವೂ ಮಹಾಯೋಗಿಯಾದ ಹರಿಯೇ, ಪ್ರಭುವಾದ ನಾರಾಯಣನೇ. ಬ್ರಹ್ಮಾದಿಗಳಿಗೂ ಲೋಕಗಳಿಗೂ ಮಹಾತ್ಮರಾದ ಋಷಿಗಳಿಗೂ ಸಾಂಖ್ಯರಿಗೂ ನಾರಾಯಣನೇ ಗತಿ. ಆತ್ಮಜ್ಞಾನಿಗಳಾದ ಯತಿಗಳ ಮನಸ್ಸಿನಲ್ಲಿರುವದನ್ನು ಕೇಶವನು ಅರಿತಿರುತ್ತಾನೆ; ಆದರೆ ಅವರಿಗೆ ಆತನ ಮನೋಗತವು ತಿಳಿಯದು. ಸರ್ವಲೋಕಗಳಲ್ಲಿಯೂ ಯಾರುಯಾರು ದೈವಪಿತ್ರ್ಯಕರ್ಮಗಳನ್ನು ಮಾಡುವರೋ ದಾನಗಳನ್ನು ಮಾಡುವರೋ ಮಹಾತಪಸ್ಸನ್ನು ಮಾಡುವರೋ- ಅವೆಲ್ಲಕ್ಕೂ ಆಶ್ರಯನು ವಿಷ್ಣುಭಗವಂತನೇ. ಸರ್ವಭೂತಗಳಲ್ಲಿಯೂ ವಾಸಮಾಡಿಕೊಂಡಿರುವದರಿಂದ ಆತನೇ ವಾಸುದೇವನೆನಿಸಿರುತ್ತಾನೆ. ಈತನೇ ನಿತ್ಯನಾದ ಪರಮಮಹರ್ಷಿಯು. ಈತನು ಮಹಾವಿಭೂತಿಯು, ಗುಣರಹಿತನಾದವನು. ಕಾಲವು ಹೇಗೆ ಋತುಋತುಗಳಲ್ಲಿ ಆಯಾ ಗುಣವನ್ನು ಹೊಂದುವದೋ ಹಾಗೆ ಯಾವಾಗ ಬೇಕಾದರೆ ಆಗ ಗುಣಗಳ ಸಂಯೋಗವನ್ನು ಪಡೆಯುತ್ತಾನೆ. ಈ ಮಹಾತ್ಮನ ಗತಿಯನ್ನು ಯಾರೂ ಅರಿಯಲಾರರು. ಆತನ ಆ ಗತಿಯನ್ನು ಯಾವನೊಬ್ಬನೂ ಕಾಣಲಾರನು. ಜ್ಞಾನಾತ್ಮಕರಾದ ಮಹರ್ಷಿಗಳಾದವರು ಗುಣಾಧಿಕನಾದ ಈ ಪುರುಷನನ್ನು ಕಂಡುಕೊಂಡಿರುತ್ತಾರೆ.

* * * * *

# 13. ಸಾತ್ವತಧರ್ಮದ ಗುರುಪರಂಪರೆ

## (1)

**ಜನಮೇಜಯನಿಂತೆಂದನು:** ಆಹಾ! ಏಕಾಂತಿಗಳೆಲ್ಲರ ವಿಷಯದಲ್ಲಿಯೂ ಭಗವಂತನಾದ ಶ್ರೀಹರಿಯು ಸುಪ್ರೀತನಾಗಿರುವನು. ಅವರು ವಿಧಿವತ್ತಾಗಿ ಮಾಡಿದ ಪೂಜೆಯನ್ನು ತಾನೇ ಗ್ರಹಿಸುವನಲ್ಲ! ಯಾರು ಕರ್ಮಗಳನ್ನೆಲ್ಲ ದಹಿಸಿಕೊಂಡಿರುವರೊ, ಪುಣ್ಯಾಪಾಪಗಳಿಂದ ವಿರಹಿತರಾಗಿರುವರೋ, ಅವರಿಗೆ ಪರಂಪರೆಯಿಂದ ಆಗುವ ಗತಿಯನ್ನು ನೀನು ತಿಳಿಯಿಸಿರುತ್ತೀಯೆ, ಆ ಏಕಾಂತಿಪುರುಷರಾದರೊ,

* ಸಂಪುಟ 38; ಸಂಚಿಕೆ 8; ಏಪ್ರಿಲ್ 1969

ನಾಲ್ಕನೆಯ ಗತಿಯಿಂದಲೇ ಹೋಗಿ ಪುರುಷೋತ್ತಮನನ್ನು ಸೇರಿ ಪರಮಪದವನ್ನೇ ಹೊಂದುವರು. ನಿಜವಾಗಿಯೂ ಈ ಏಕಾಂತಧರ್ಮವು ನಾರಾಯಣನಿಗೆ ಪ್ರಿಯವಾಗಿ ಎಲ್ಲಕ್ಕಿಂತಲೂ ಶ್ರೇಷ್ಠವಾಗಿರುತ್ತದೆ; ಏಕೆಂದರೆ (ಅನಿರುದ್ಧಾದಿ) ಮೂರು ಗತಿಗಳನ್ನೂ ಸೇರದೆ ಅವ್ಯಯನಾದ ಹರಿಯನ್ನೇ ಅವರು ಸೇರುವರಲ್ಲ! ಉಪನಿಷತ್ಸಹಿತವಾದ ವೇದಗಳನ್ನು ಯಾವ ವಿಪ್ರರು ಆಶ್ರಯಿಸಿರುವರೋ ವಿಧಿವತ್ತಾಗಿ ಪಠಿಸುತ್ತಿರುವರೋ, ಅವರಿಗಿಂತಲೂ ಏಕಾಂತಿ ಜನರ ಗತಿಯು ಹೆಚ್ಚಿನದೆಂದು ನಾನು ತಿಳಿಯುತ್ತೇನೆ. ಈ ಧರ್ಮವು ಯಾವ ದೇವತೆಯಿಂದ ಅಥವಾ ಋಷಿಯಿಂದ ಪ್ರೋಕ್ತವಾಯಿತು? ಏಕಾಂತಿಗಳ ಆಚಾರವು ಎಂಥದ್ದು? ಯಾವಾಗ ಇದು ಉತ್ಪನ್ನವಾಯಿತು? ಎಲೈ ವಿಭುವೆ, ಈ ನನ್ನ ಸಂಶಯವನ್ನು ಕತ್ತರಿಸು, ನನಗೆ ಹೆಚ್ಚಿನ ಕುತೂಹಲವು ಉಂಟಾಗಿರುತ್ತದೆ.

**ವೈಶಂಪಾಯನನಿಂತೆಂದನು:** ಕೌರವಪಾಂಡವರ ಯುದ್ಧದಲ್ಲಿ ಸೈನ್ಯಗಳು ಸಂನದ್ಧವಾಗಿರಲು ಅರ್ಜುನನು ವೈಮನಸ್ಯವುಂಟಾದವನಾಗಿರುವಲ್ಲಿ ಸ್ವಯಂ ಭಗವಂತನೇ ಇದನ್ನು ಹೇಳಿದನು. ನಿನಗೆ ಈ ಮೊದಲು ಗತಿಯನ್ನೂ ಅಗತಿಯನ್ನೂ ಹೇಳಿರುತ್ತೇನೆ. ಯಾರು ಅಕೃತಾತ್ಮರೋ ಅಂಥವರಿಗೆ ಈ ಧರ್ಮವು ಗಹನವೂ ದುರ್ವಿಜ್ಞೇಯವೂ ಆಗಿರುತ್ತದೆ. ರಾಜನೆ, ಇದು ಸಾಮವೇದತುಲ್ಯ ವಾಗಿರುತ್ತದೆ. ಹಿಂದೆ ಕೃತಯುಗದಲ್ಲಿಯೇ ಇದು ಪ್ರವರ್ತಿತವಾಗಿರುತ್ತದೆ. ಈಶ್ವರನಾದ ಸ್ವಯಂ ನಾರಾಯಣನೇ ಇದನ್ನು ಧಾರಣಮಾಡಿರುತ್ತಾನೆ. ಈ ವಿಷಯವನ್ನು ಕುಂತೀಪುತ್ರನಾದ ಯುಧಿಷ್ಠಿರನು ಋಷಿಗಳ ಸಮ್ಮುಖದಲ್ಲಿ ನಾರದರನ್ನು ಕೇಳಿದನು, ಆಗ ಕೃಷ್ಣ ಭೀಷ್ಮರು ಇದನ್ನು ಕೇಳುತ್ತಿದ್ದರು. ನಮ್ಮ ಗುರುಗಳಾದ ವ್ಯಾಸರೂ, ನಾನೂ ಇದನ್ನು ಕೇಳಿರುತ್ತೇವೆ. ಇಲ್ಲಿ ನಾರದನು ಹೇಳಿದ್ದನ್ನು ನಿನಗೆ ಹೇಳುವೆನು, ಕೇಳು. ಎಲೈ ಮಹೀಪಾಲನೆ, ಯಾವಾಗ ನಾರಾಯಣನ ಮುಖದಿಂದ **ಬ್ರಹ್ಮನ ಮಾನಸಿಕಜನ್ಮ**ವುಂಟಾಯಿತೋ, ಆಗ ಸ್ವಯಂ ನಾರಾಯಣನೇ ಈ ಧರ್ಮವನ್ನು– ಈ ದೈವ ಮತ್ತು ಪಿತ್ರ್ಯಧರ್ಮವನ್ನು – ಆಚರಿಸಿ ತೋರಿಸಿದನು. ಆತನಿಂದ ಫೇನಪಋಷಿಗಳು ಈ ಧರ್ಮವನ್ನು ಗ್ರಹಿಸಿದರು. ಆ ಫೇನಪರಿಂದ ವೈಖಾನಸರು ಅದೇ ಧರ್ಮವನ್ನು ಪಡೆದುಕೊಂಡರು, ವೈಖಾನಸರಿಂದ ಸೋಮನು ಗ್ರಹಿಸಿದನು. ಆಮೇಲೆ ಧರ್ಮವು ಮತ್ತೆ ಅಂತರ್ಧಾನವಾಯಿತು. ಎಲೈ ನೃಪನೆ, ಮತ್ತೆ

**ಬ್ರಹ್ಮನ ಎರಡನೆಯದಾದ ಚಾಕ್ಷುಷಜನ್ಮ**ವಾದಾಗ ಆ ಪಿತಾಮಹನೇ ಸೋಮನಿಂದ ಈ ಧರ್ಮವನ್ನು ಶ್ರವಣಮಾಡಿದನು. ಈ ನಾರಾಯಣಾತ್ಮಕಧರ್ಮವನ್ನು ಅವನು ರುದ್ರನಿಗೆ ಉಪದೇಶಿಸಿದನು. ಬಳಿಕ ಯೋಗಸ್ಥಿತನಾದ ರುದ್ರನು ಪೂರ್ವದಲ್ಲಿ ಕೃತಯುಗದಲ್ಲಿ ವಾಲಖಿಲ್ಯಋಷಿಗಳಿಗೆಲ್ಲರಿಗೂ ಈ ಧರ್ಮವನ್ನು ಹೇಳಿಕೊಟ್ಟನು. ಆ ದೇವನ ಮಾಯೆಯಿಂದ ಈ ಧರ್ಮವು ಮತ್ತೆ ಮರೆಯಾಯಿತು. ಎಲೈ ನೃಪನೆ, **ಬ್ರಹ್ಮನ ವಾಚಿಕರೂಪವಾದ ಮೂರನೆಯ ಜನ್ಮವು** ಯಾವಾಗ ಆಯಿತೋ, ಆಗ ಮತ್ತೆ ಸ್ವಯಂ ನಾರಾಯಣನಿಂದ ಇದು ಉಂಟಾಯಿತು. ಆ ಪುರುಷೋತ್ತಮನಿಂದ ಸುಪರ್ಣನೆಂಬ ಋಷಿಯು ಪಡದುಕೊಂಡನು. ಸುತಪ್ತವಾದ ತಪಸ್ಸಿನಿಂದ, ದಮದಿಂದ, ನಿಯಮದಿಂದ– ಹೀಗೆ ಮೂರಾವೃತ್ತಿ ಸುಪರ್ಣಋಷಿಯು ಅನುಷ್ಠಾನಮಾಡಿದನು. ಆದ್ದರಿಂದ ಈ ಧರ್ಮವು ತ್ರಿಸೌಪರ್ಣವೆಂದು ಉಕ್ತವಾಗಿರುತ್ತದೆ.

ಋಗ್ವೇದಪಾಠದಲ್ಲಿ ಪಠಿತವಾಗಿರುವ ಈ ದುಶ್ಚರವಾದ ವ್ರತರೂಪವಾದ ಧರ್ಮವನ್ನು ಸುಪರ್ಣನಿಂದ ಜಗದಾಯುವಾದ ವಾಯುವು ಪಡೆದುಕೊಂಡನು. ಆ ವಾಯುವಿನಿಂದ ವಿಘಸಾಶಿಗಳಾದ ಋಷಿಗಳು ಪಡೆದುಕೊಂಡರು. ಅವರಿಂದ ಮಹೋದಧಿಯು ಇದನ್ನು ಪಡೆದುಕೊಂಡನು. ಮತ್ತೆ ಈ ಧರ್ಮವು ಲಯವಾಗಿ ನಾರಾಯಣನನ್ನು ಸೇರಿಕೊಂಡಿತು. ಯಾವಾಗ ಮತ್ತೆ ಮಹಾತ್ಮನಾದ ಬ್ರಹ್ಮನ **ಶ್ರಾವಣಸೃಷ್ಟಿ**ಯಾಯಿತೋ, ಆಗ ಸ್ವಯಂ ಶ್ರೀಹರಿನಾರಾಯಣನು ಜಗತ್ತನ್ನು ಸೃಷ್ಟಿಸುವೆನೆಂದು ಸಂಕಲ್ಪಿಸಿ ಜಗತ್ತನ್ನು ಸೃಷ್ಟಿಸಬಲ್ಲ ಪುರುಷನನ್ನು ಮನಸ್ಸಿನಲ್ಲಿ ಚಿಂತಿಸಿದನು. ಹೀಗೆ ಚಿಂತಿಸುತ್ತಿರುವಲ್ಲಿ ಆತನ ಕಿವಿಗಳಿಂದ ಸೃಷ್ಟಿಯನ್ನು ಮಾಡುವ ಪುರುಷನಾದ ಬ್ರಹ್ಮನು ಹೊರಕ್ಕೆ ಬಂದನು. ಅವನನ್ನು ಕುರಿತು ಜಗತ್ಪತಿಯಾದ ನಾರಾಯಣನು ಹೀಗೆಂದನು: 'ಪುತ್ರನೆ, ಮುಖದಿಂದಲೂ ಪಾದಗಳಿಂದಲೂ ಪ್ರಜೆಗಳನ್ನು ಸೃಷ್ಟಿಸುವವನಾಗು. ಎಲೈ ಸುವ್ರತನೆ, ನಿನಗೆ ತೇಜಸ್ಸನ್ನು ಅನುಗ್ರಹಿಸುವೆನು. **ಸಾತ್ವತ**ವೆಂಬ ಹೆಸರಿನ ಧರ್ಮವನ್ನು ನನ್ನಿಂದ ಸ್ವೀಕರಿಸು. ಅದರಿಂದ ಕೃತಯುಗವನ್ನು ಯಥಾವಿಧಿಯಾಗಿ ಸ್ಥಾಪಿಸು.'

ಹೀಗೆನ್ನಲು ಬ್ರಹ್ಮನು ಆ ಹರಿಮೇಧಸನಾದ ದೇವನಿಗೆ ನಮಸ್ಕರಿಸಿ, ಅಗ್ರ್ಯವಾದ ಧರ್ಮವನ್ನು ರಹಸ್ಯಸಮೇತವಾಗಿ ಸಂಗ್ರಹದೊಡನೆ ಸ್ವೀಕರಿಸಿದನು.

ನಾರಾಯಣನ ಮುಖದಿಂದ ಅದು ಆರಣ್ಯಕದೊಡನೆ ಹೊರಹೊಮ್ಮಿತ್ತು. ಅಮಿತ ತೇಜಸ್ವಿಯಾದ ಬ್ರಹ್ಮನಿಗೆ ಹೀಗೆ ಧರ್ಮವನ್ನು ಉಪದೇಶಿಸಿದ ಬಳಿಕ 'ನಿರಾಶೀಃ ಕರ್ಮ' ಎಂಬ ಹೆಸರಿನ ಧರ್ಮವನ್ನೂ ಯುಗಧರ್ಮಗಳನ್ನೂ ಮಾಡು ಎಂದು ಅಪ್ಪಣೆಮಾಡಿ ಅವ್ಯಕ್ತವು ನೆಲೆನಿಂತಿರುವ ತಮಸ್ಸಿನ ಪಾರವನ್ನು ಕುರಿತು ಭಗವಂತನು ಹೊರಟುಹೋದನು.

ಆ ಬಳಿಕ ವರದನೂ ಲೋಕಪಿತಾಮಹನೂ ಆದ ಬ್ರಹ್ಮದೇವನು ಎಲ್ಲಾ ಲೋಕಗಳನ್ನೂ ಸ್ಥಾವರಜಂಗಮಗಳನ್ನೂ ಸೃಷ್ಟಿಸಿದನು. ಬಳಿಕ ಮೊದಲು ಕೃತಯುಗವು ಪ್ರಾರಂಭವಾಯಿತು. ಅಲ್ಲಿಂದ **ಸಾತ್ವತಧರ್ಮವು** ಲೋಕಗಳನ್ನೆಲ್ಲ ವ್ಯಾಪಿಸಿಕೊಂಡು ನೆಲೆನಿಂತಿತು.

ಅದೇ ಆದ್ಯಧರ್ಮದಿಂದಲೇ ಲೋಕಗಳ ಸೃಷ್ಟಿಯನ್ನು ಮಾಡುವ ಬ್ರಹ್ಮನು, ದೇವೇಶನಾದ ಪ್ರಭು ನಾರಾಯಣಹರಿಯನ್ನು ಪೂಜಿಸಿದನು. ಬಳಿಕ ಧರ್ಮವನ್ನು ಸ್ಥಾಪಿಸುವದಕ್ಕಾಗಿ ಲೋಕಗಳಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಸ್ವಾರೋಚಿಷ ಮನುವಿಗೆ ಇದನ್ನು ಹೇಳಿಕೊಟ್ಟನು; ಎಲೈ ಭರತವಂಶೋತ್ಪನ್ನನೆ, ಬಳಿಕ ಶಂಖಪದನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ದಿಕ್ಪಾಲನಾದ ಸುವರ್ಣಾಭನಿಗೆ ಹೇಳಿಕೊಟ್ಟನು. ತ್ರೇತಾಯುಗವು ಪ್ರಾಪ್ತವಾಗಲು ಆ ಧರ್ಮವು ಮತ್ತೆ ಮರೆಯಾಯಿತು.

ಎಲೈ ರಾಜಶ್ರೇಷ್ಠನೆ, ಬ್ರಹ್ಮನ **ನಾಸಿಕ್ಯಜನ್ಮ**ದಲ್ಲಿ ದೇವನೂ ಪ್ರಭುವೂ ಆದ ಶ್ರೀಹರಿನಾರಾಯಣನು ಬ್ರಹ್ಮನು ನೋಡುತ್ತಿರುವಂತೆಯೇ ತಾನೇ ಉಪದೇಶಿಸಿದನು. ಆಗ ಭಗವಂತನಾದ ಸನತ್ಕುಮಾರನು ಅವನಿಂದ ಅದನ್ನು ಅಧ್ಯಯನ ಮಾಡಿದನು. ಎಲೈ ಕುರುಶ್ರೇಷ್ಟನೇ, ಸನತ್ಕುಮಾರನಿಂದ ವೀರಣಪ್ರಜಾಪತಿಯು ಈ ಧರ್ಮವನ್ನು ಕಲಿತುಕೊಂಡನು. ವೀರಣನು ಶುದ್ಧನೂ ಸುವ್ರತನೂ ಮೇಧಾವಂತನೂ ಆದ ತನ್ನ ಮಗನಿಗೆ ಹೇಳಿದನು; ಅವನು ಮಕ್ಷಿ ಎಂಬ ಧರ್ಮಿಷ್ಠನಾದ ದಿಕ್ಪಾಲನಿಗೆ ಹೇಳಿಕೊಟ್ಟನು. ನಾರಾಯಣಮುಖದಿಂದ ಹುಟ್ಟಿದ ಈ ಧರ್ಮವು ಮತ್ತೆ ಅಂತರ್ಧಾನವಾಯಿತು.

ಮತ್ತೆ ಬ್ರಹ್ಮನ **ಅಂಡಜಜನ್ಮ**ದಲ್ಲಿ ಹರಿಯೋನಿಯಾದ ಆ ಬ್ರಹ್ಮನಿಗೆ

ಹೇಳುವದಕ್ಕೆಂದು ನಾರಾಯಣನ ಮುಖದಿಂದ ಮತ್ತೆ ಉತ್ಪನ್ನವಾಯಿತು. ರಾಜನೆ, ಇದನ್ನು ಬ್ರಹ್ಮನು ಸ್ವೀಕರಿಸಿ, ಅನುಷ್ಠಾನದಲ್ಲಿ ತಂದುಕೊಂಡು ಬರ್ಹಿಷದರೆಂಬ ಮುನಿಗಳಿಗೆ ಹೇಳಿಕೊಟ್ಟನು. ಬರ್ಹಿಷದರಿಂದ ಇದು ಸಾಮವೇದದಲ್ಲಿ ಪಾರಂಗತನಾದ ಜ್ಯೇಷ್ಠನೆಂಬ ದ್ವಿಜನನ್ನು ಸೇರಿತು. ಆದ್ದರಿಂದ ಹರಿಯು ಜ್ಯೇಷ್ಠಸಾಮವ್ರತನೆನಿಸಿದನು.

* * * * *

# 13. ಸಾತ್ವತಧರ್ಮದ ಗುರುಪರಂಪರೆ*

## (2)

"ರಾಜನೆ, ಜ್ಯೇಷ್ಠನಾದ ಅವಿಕಂಪನನೆಂಬ ರಾಜನನ್ನು ಸೇರಿದ ಪ್ರಭುವಾದ ಹರಿಯ ಈ ಧರ್ಮವು ಆ ಬಳಿಕ ಅಂತರ್ಧಾನವಾಯಿತು. ನೃಪನೆ, ಬ್ರಹ್ಮನ ಈ ಏಳನೆಯ ಜನ್ಮವು ಭಗವಂತನ ನಾಭಿಕಮಲದಿಂದ ಆಗಿರುವದಷ್ಟೆ? ಆ ಸ್ವಯಂ ನಾರಾಯಣನೇ ಈ ಧರ್ಮವನ್ನು ಕಲ್ಪಾದಿಯಲ್ಲಿ ಶುದ್ಧನೂ ಲೋಕಧಾರಿಯೂ ಆದ ಬ್ರಹ್ಮನಿಗೆ ಹೇಳಿದನು. ಆ ಪಿತಾಮಹನು ದಕ್ಷನಿಗೆ ಈ ಧರ್ಮವನ್ನು ಪೂರ್ವದಲ್ಲಿ ಹೇಳಿಕೊಟ್ಟನು. ನೃಪೋತ್ತಮನೆ, ಬಳಿಕ ದಕ್ಷನು ತನ್ನ ಜ್ಯೇಷ್ಠದೌಹಿತ್ರನಾದ ಆದಿತ್ಯನಿಗೆ ಹೇಳಿದನು. ಅವನಿಂದ ವಿವಸ್ವಂತನು ಇದನ್ನು ಉಪದೇಶಮಾಡಿಸಿಕೊಂಡನು. ಆ ಬಳಿಕ ತ್ರೇತಾಯುಗದಲ್ಲಿ ವಿವಸ್ವಂತನು ಮನುವಿಗೆ ಈ ಧರ್ಮವನ್ನು ಹೇಳಿಕೊಟ್ಟನು. ಆ ಮನುವೂ ಲೋಕಕಲ್ಯಾಣಕ್ಕಾಗಿ ಇಕ್ಷ್ವಾಕುವಿಗೆ ಉಪದೇಶಿಸಿದನು. ಎಲೈ ನೃಪನೆ, ಇಕ್ಷ್ವಾಕುವು ಹೇಳಿರುವ ಈ ಧರ್ಮವು ಲೋಕಗಳನ್ನೆಲ್ಲ ವ್ಯಾಪಿಸಿಕೊಂಡು ಇರುತ್ತದೆ; ಕಲ್ಪವು ಕ್ಷಯವಾಗಲು ಇದು ಮತ್ತೆ ನಾರಾಯಣನನ್ನೇ ಸೇರಿಕೊಳ್ಳುವದು.

ಎಲೈ ನೃಪೋತ್ತಮನೆ, ಯತಿಗಳ ಧರ್ಮವು ಯಾವದೆಂಬುದನ್ನು ನಿನಗೆ ಪೂರ್ವದಲ್ಲಿ ಹರಿಗೀತೆಗಳಲ್ಲಿ ಸಂಕ್ಷೇಪವಾಗಿ ಹೇಳಿದ್ದಾಗಿರುತ್ತದೆ. ನೃಪನೆ, ಈ ಧರ್ಮವನ್ನು ಜಗನ್ನಾಥನಾದ ಸಾಕ್ಷಾನ್ನಾರಾಯಣನಿಂದಲೇ, ರಹಸ್ಯಸಮೇತವಾಗಿ

---

* ಸಂಪುಟ 38; ಸಂಚಿಕೆ 9; ಮೇ 1969

ಸಂಗ್ರಹಸಹಿತವಾಗಿ ನಾರದನು ಪಡೆದುಕೊಂಡನು. ಹೀಗೆಯೇ ಈ ಮಹತ್ತಾದ ಆದ್ಯಸನಾತನಧರ್ಮವು ದುರ್ವಿಜ್ಞೇಯವೂ ದುಷ್ಕರವೂ ಆಗಿರುತ್ತದೆ, ಇದನ್ನು ಸಾತ್ವತರು ಧರಿಸಿರುತ್ತಾರೆ. ಅಹಿಂಸಾಯುಕ್ತವಾದ ಈ ಧರ್ಮಜ್ಞಾನವನ್ನು ಸರಿಯಾಗಿ ಆಚರಣೆಗೆ ತರುವದರಿಂದ ಈಶ್ವರನಾದ ಹರಿಯು ಪ್ರೀತನಾಗುವನು. ಇದು ಒಂದು ವ್ಯೂಹವುಳ್ಳದ್ದು, ಕೆಲವು ಕಡೆಗಳಲ್ಲಿ ಎರಡು ವ್ಯೂಹಗಳುಳ್ಳದ್ದಾಗಿರುತ್ತದೆ: ಮೂರು ವ್ಯೂಹಗಳ ವಿಭಾಗವುಳ್ಳದ್ದಾಗಿಯೂ ಇರುತ್ತದೆ: ನಾಲ್ಕು ವ್ಯೂಹಗಳುಳ್ಳ ದ್ದಾಗಿಯೂ ಕಾಣಬರುತ್ತದೆ.

ಹರಿಯೇ ಕ್ಷೇತ್ರಜ್ಞನು, ನಿರ್ಮಮನು ಮತ್ತು ನಿಷ್ಕಲನು. ಸರ್ವಭೂತಗಳೂ ಪಂಚಭೂತಗಳ ಗುಣಗಳನ್ನು ಮೀರಿರುವ ಜೀವನೂ ಆತನೇ. ಪಂಚೇಂದ್ರಿಯ ಗಳನ್ನೂ ಪ್ರೇರಿಸುವ ಮನಸ್ಸೂ ಆತನೇ. ಈತನೇ ಲೋಕಕ್ಕೆ ವಿಧಾತನು, ಈತನೇ ಲೋಕಗಳನ್ನು ಸೃಷ್ಟಿಸುವಾತನು. ಈತನು ಅಕರ್ತನೂ ಕರ್ತನೂ ಆಗಿರುತ್ತಾನೆ. ಕಾರ್ಯವೂ ಕರಣವೂ ಈತನೇ. ಈ ಅವ್ಯಯನಾದ ಪುರುಷನು ಹೇಗೆ ಇಚ್ಛಿಸುವನೋ ಹಾಗೆ ಕ್ರೀಡಿಸುತ್ತಿರುವನಯ್ಯ, ರಾಜನೆ.

ಪುರುಷಶ್ರೇಷ್ಠನೆ, ಅಕೃತಾತ್ಮರಾದವರಿಗೆ ಅರಿತುಕೊಳ್ಳಲು ಕಷ್ಟವಾಗಿರುವ ಈ ಏಕಾಂತಧರ್ಮವನ್ನು ಗುರುಪ್ರಸಾದದಿಂದ ಪಡೆದುಕೊಂಡು ನಿನಗೆ ಹೇಳಿರುತ್ತೇನೆ. ನೃಪನೆ, ಏಕಾಂತಿಪುರುಷರು ಬಹಳಜನರು ಸಿಕ್ಕುವದಿಲ್ಲ. ಈ ಜಗತ್ತು ಅಹಿಂಸಕರೂ ಆತ್ಮಜ್ಞಾನಿಗಳೂ ಸರ್ವಭೂತಗಳ ಹಿತದಲ್ಲಿ ನಿರತರೂ ಆದ ಏಕಾಂತಿಗಳಿಂದ ತುಂಬಿರುತ್ತಿದ್ದರೆ ಆಗ ಕಾಮ್ಯಕರ್ಮರಹಿತವಾದ ಕೃತಯುಗವೇ ಪ್ರಾಪ್ತವಾದೀತು. ಎಲೈ ಪ್ರಜಾನಾಥನೆ, ನನ್ನ ಗುರುವೂ ಧರ್ಮಜ್ಞನೂ ದ್ವಿಜಶ್ರೇಷ್ಠನೂ ಆದ ವ್ಯಾಸನು ಧರ್ಮರಾಜನಿಗೆ ಇದನ್ನು ಹೇಳಿದನು. ಆಗ ಋಷಿಗಳು ಸಂನಿಹಿತರಾಗಿದ್ದರು. ಕೃಷ್ಣನೂ ಭೀಷ್ಮನೂ ಕೇಳುತ್ತಿದ್ದರು. ಅವನಿಗೂ ಮೊದಲು ಮಹಾತಪಸ್ವಿಯಾದ ನಾರದರಿಗೆ ಪರಮಬ್ರಹ್ಮನೂ ಶ್ವೇತವರ್ಣನೂ ಚಂದ್ರನಂತೆ ಕಾಂತಿಯುಳ್ಳವನೂ ಆಗಿರುವ ಆ ಅಚ್ಯುತದೇವನು ತಿಳಿಸಿದ್ದನು. ನಾರಾಯಣಪರಾಯಣರಾದ ಏಕಾಂತಿಗಳು ಆತನನ್ನೇ ಸೇರುವರು.

* * * * *

# 14. ಐಕಾಂತಿಕಧರ್ಮದ ಮಹಿಮೆ*

## (1)

ಜನಮೇಜಯನಿಂತೆಂದನು: ಅರಿತವರು ಸೇವಿಸಿರುವ ಈ ಬಹುವಿಧವಾದ ಧರ್ಮವನ್ನು ಮಾಡದೆ ಬ್ರಾಹ್ಮಣರು ಬಗೆಬಗೆಯ ವ್ರತಗಳಲ್ಲಿರುವರಲ್ಲ, ಇದು ಹೇಗಾಯಿತು?

ಇದಕ್ಕೆ ವೈಶಂಪಾಯನನು ಹೇಳಿದ ಉತ್ತರವೇನೆಂದರೆ: ರಾಜನೆ, ಶರೀರಕ್ಕೆ ಬಂಧಗಳನ್ನುಂಟುಮಾಡುವದಕ್ಕೆ ಮೂರು ಪ್ರಕೃತಿಗಳು ನಿರ್ಮಿತವಾಗಿವೆ; ಇವೇ ಸಾತ್ತ್ವಿಕ, ರಾಜಸ, ತಾಮಸಪ್ರಕೃತಿಗಳು. ದೇಹಬಂಧಗಳುಳ್ಳವರಲ್ಲಿ, ಎಲೈ ಕುರುಕುಲೋದ್ವಹನೆ, ಸಾತ್ತ್ವಿಕನಾದವನು ಮಾತ್ರ, ಮೋಕ್ಷವನ್ನು ಪಡೆಯುವೆನು ಎಂದು ನಿಶ್ಚಯಮಾಡಿಕೊಂಡಿರುವನಯ್ಯ, ಪುರುಷಶ್ರೇಷ್ಠನೆ, ಇಲ್ಲಿಯೂ ಪರಮಪುರುಷನಾದ ನಾರಾಯಣನೇ ಬ್ರಹ್ಮವಿತ್ತಮನೆಂದು ಅರಿತುಕೊಳ್ಳುತ್ತಾನೆ. ಮೋಕ್ಷಕ್ಕೆ ನಾರಾಯಣನೇ ಆಶ್ರಯನೆಂದೂ ಅರಿತುಕೊಳ್ಳುತ್ತಾನೆ. ಆದ್ದರಿಂದಲೇ ಅವನು ಸಾತ್ತ್ವಿಕನೆನಿಸುವನು.

ನಾರಾಯಣಪರಾಯಣನಾದ ಏಕಾಂತಭಕ್ತನು ಸಂತತವಾಗಿ ಆ ಪುರುಷೋತ್ತಮನನ್ನೇ ಚಿಂತಿಸುತ್ತಿರುವನು, ಇಷ್ಟಾರ್ಥವನ್ನು ಪಡೆದುಕೊಳ್ಳುವನು, ಮೋಕ್ಷಧರ್ಮಿಗಳಾದ ಜ್ಞಾನಿಗಳಾದ ಯತಿಗಳು ಯಾರೇ ಆಗಿರಲಿ, ನಿಷ್ಕಾಮರಾದ ಅವರ ಯೋಗಕ್ಷೇಮವನ್ನು ಶ್ರೀಹರಿಯೇ ವಹಿಸುವನು.

ಹುಟ್ಟುವಾಗ ಯಾವ ಪುರುಷನನ್ನು ಮಧುಸೂದನನು ನೋಡುವನೋ ಅವನು ಸಾತ್ತ್ವಿಕನೆಂದು ಅರಿಯಬೇಕು, ಅವನು ಮೋಕ್ಷದಲ್ಲಿಯೇ ನಿಶ್ಚಿತಮತಿಯಾಗಿರುವನು. ಏಕಾಂತಿಗಳು ಸೇವಿಸುವ ಈ ಧರ್ಮವು ಸಾಂಖ್ಯಯೋಗಕ್ಕೆ ಸಮಾನವಾಗಿರುತ್ತದೆ. ಆದ್ದರಿಂದ ನಾರಾಯಣಾತ್ಮಕವಾದ ಮೋಕ್ಷದಲ್ಲಿ ಏಕಾಂತಿಗಳು ಪರಮಗತಿಯನ್ನು ಹೊಂದುವರು, ನಾರಾಯಣನು ನೋಡಿದ ಪುರುಷನು

---

* ಸಂಪುಟ 38; ಸಂಚಿಕೆ 10; ಜೂನ್ 1969

ಜ್ಞಾನಿಯಾಗುವನು; ಎಲೈ ರಾಜನೆ, ಹೀಗೆ ತನ್ನಿಚ್ಛೆಯಿಂದಲೇ ಯಾವನೂ ಜ್ಞಾನಿಯಾಗಲಾರನು.

ರಾಜಸತಾಮಸಪ್ರಕೃತಿಗಳು ವ್ಯಾಮಿಶ್ರವಾಗಿರುತ್ತವೆ. ಎಲೈ ನರಪತಿಯೆ, ತದಾತ್ಮಕವಾಗಿ ಹುಟ್ಟಿದ ಪುರುಷನು ಪ್ರವೃತ್ತಿಲಕ್ಷಣದಿಂದ ಯುಕ್ತನಾಗಿರುವದರಿಂದ ಹುಟ್ಟಿದಾಗ ಅವನನ್ನು ಹರಿಯು ತಾನೇ ನೋಡುವದಿಲ್ಲ. ಇವನನ್ನು ಲೋಕಪಿತಾಮಹನಾದ ಬ್ರಹ್ಮನು ನೋಡುತ್ತಾನೆ. ಅವನ ಮನಸ್ಸು ರಜಸ್ಸಿನಿಂದಲೂ ತಮಸ್ಸಿನಿಂದಲೂ ತೇಲಾಡುತ್ತಿರುತ್ತದೆ.

ಎಲೈ ನೃಪಶ್ರೇಷ್ಠನೆ, ದೇವತೆಗಳು ಋಷಿಗಳು ಸತ್ತ್ವಸ್ಥರಾಗಿರುತ್ತಾರೆ ಎಂಬುದು ನಿಜ. ಆದರೆ ಶುದ್ಧಸತ್ತ್ವವಿಲ್ಲದವರಾದ್ದರಿಂದ ಅವರು ವೈಕಾರಿಕರೆನಿಸುವರು.

* * * * *

## 14. ಐಕಾಂತಿಕಭಾವ, ನಾರಾಯಣಾಂಶರಾದ ಅಪಾಂತರತಮರು*

## (2)

ಜನಮೇಜಯನಿಂತೆಂದನು: ಎಲೈ ಮುನಿಗಳೆ, ವೈಕಾರಿಕಪುರುಷನು ಹೇಗೆ ಪುರುಷೋತ್ತಮನನ್ನು ಸೇರುವನು? ಇದೆಲ್ಲವನ್ನೂ ತಮ್ಮ ಅನುಭವಕ್ಕೆ ಅನುಸಾರವಾಗಿ ಹೇಳಿರಿ. ಅವನ ಪ್ರವೃತ್ತಿಯನ್ನು ಕ್ರಮದಿಂದ ಹೇಳಿರಿ.

ವೈಶಂಪಾಯನನಿಂತೆಂದನು: ಅತ್ಯಂತಸೂಕ್ಷ್ಮನಾಗಿ ಸತ್ತ್ವಗುಣಯುಕ್ತನಾಗಿ ಮೂರು ಅಕ್ಷರ(ಅಕಾರಾದಿ)ಗಳಿಂದ ಕೂಡಿರುವ ಪ್ರಣವಾತ್ಮಕನಾದ ಪುರುಷನನ್ನು ನಿಷ್ಕ್ರಿಯನಾದಮೇಲೆ ಇಪ್ಪತ್ತೈದನೆಯ (ಜೀವಾತ್ಮ) ಪುರುಷನು ಸೇರುವನು. ಹೀಗೆ ಸಾಂಖ್ಯಯೋಗ, ವೇದಾರಣ್ಯಕ, ಪಾಂಚರಾತ್ರ- ಇವೆಲ್ಲವೂ ಒಂದಕ್ಕೊಂದು ಅಂಗವಾಗಿದ್ದುಕೊಂಡು ಒಂದೇ ಎನಿಸುವವು. ಈ ನಾರಾಯಣಪರವಾಗಿರುವ ಧರ್ಮವು ಏಕಾಂತಿಗಳದು. ಎಲೈ ರಾಜನೆ, ಹೇಗೆ ಸಮುದ್ರದಿಂದ ಉಂಟಾದ

---

* ಸಂಪುಟ 38; ಸಂಚಿಕೆ 11; ಜುಲೈ 1969

ಮೋಡಗಳು ಮತ್ತೆ ಅದನ್ನೇ ಸೇರುವವೋ ಹಾಗೆ ಈ ಜ್ಞಾನದ ಮಹಾಮೇಘಗಳು ನಾರಾಯಣನನ್ನೇ ಮತ್ತೆ ಸೇರಿಕೊಳ್ಳುವವು. ಎಲೈ ಕುರುನಂದನನೆ, ಈ ಸಾತ್ವತಧರ್ಮವನ್ನು ನಿನಗೆ ಹೇಳಿರುತ್ತೇನೆ. ನಿನಗೆ ಸಾಧ್ಯವಾದರೆ ಇದನ್ನು ನ್ಯಾಯಾನುಸಾರವಾಗಿ ಅನುಷ್ಠಾನಮಾಡು. ಹೀಗೆಯೇ ಆ ಮಹಾಭಾಗನಾದ ನಾರದನು ನನ್ನ ಗುರುವಿಗೆ ಶ್ವೇತವಸ್ತ್ರಧಾರಿಗಳಾದ (ಗೃಹಸ್ಥರ) ಮತ್ತು ಯತಿಗಳ ಅವ್ಯಯವಾದ ಏಕಾಂತಗತಿಯನ್ನು ಹೇಳಿದನು. ಆ ವ್ಯಾಸನೂ ಧೀಮಂತನಾದ ಧರ್ಮರಾಯನಿಗೆ ಪ್ರೀತಿಪೂರ್ವಕವಾಗಿ ಹೇಳಿದನು, ಗುರುವಿನಿಂದ ಬಂದ ಆ ಆಖ್ಯಾನವನ್ನೇ ನಾನು ನಿನಗೆ ಹೇಳಿರುತ್ತೇನೆ. ಎಲೈ ಪಾರ್ಥಿವಸತ್ತಮನೆ, ಇದು ಇಂಥ ದುಶ್ಚರವಾದ ಧರ್ಮವು. ಇದರ ವಿಷಯಕ್ಕೆ ನಿನ್ನಂತೆಯೇ ಉಳಿದವರೂ ಮೋಹಿತರಾಗಿರುವರು. ಕೃಷ್ಣನೇ ಲೋಕಗಳಿಗೆಲ್ಲ ಪಾಲಕನು, ಮೋಹಕನು, ಸಂಹಾರಕರ್ತನು. ಆತನೇ ಎಲ್ಲಕ್ಕೂ ಕಾರಣನು.

ಜನಮೇಜಯನಿಂತೆಂದನು: ಸಾಂಖ್ಯ, ಯೋಗ, ಪಾಂಚರಾತ್ರ, ವೇದಾರಣ್ಯಕ- ಈ ಜ್ಞಾನಗಳು ಲೋಕದಲ್ಲಿ ಹರಡಿಕೊಂಡಿವೆಯಷ್ಟೆ? ಎಲೈ ಮುನಿಯೆ, ಇವೆಲ್ಲಕ್ಕೂ ಒಂದೇ ಗುರಿಯೊ, ಅಥವಾ ಬೇರೆಬೇರೆಯ ಗುರಿಯಿರುವದೊ? ಇವುಗಳ ಪ್ರವೃತ್ತಿಯನ್ನು ಕ್ರಮವರಿತು ಹೇಳುವನಾಗು.

ವೈಶಂಪಾಯನನಿಂತೆಂದನು: ಬಹುಜ್ಞನೂ, ಶ್ರೇಷ್ಠನೂ, ಅತ್ಯುದಾರನೂ ಆದ ಯಾವ ಮಹರ್ಷಿಯನ್ನು ದ್ವೀಪದ ಮಧ್ಯದಲ್ಲಿ ಪರಾಶರನಿಂದ ಸತ್ಯವತಿಯು ಪಡೆದಳೋ, ಅಜ್ಞಾನದ ಕತ್ತಲೆಯನ್ನು ಕಳೆಯುವ ಆತನಿಗೆ ನಮಸ್ಕಾರ! ಬ್ರಹ್ಮನಿಗಿಂತ ಈಚೆಗೆ ಆರನೆಯವನೆಂದು ಯಾವ ಆರ್ಷೇಯವಿಭೂತಿಯಿಂದೊಡಗೂಡಿದ ಮಹರ್ಷಿಯನ್ನು ನಾರಾಯಣನ ಅಂಶಜನಾದ ಏಕಪುತ್ರನೆನ್ನುವರೋ, ವೇದಕ್ಕೆ ಮಹಾನಿಧಿಯಾದ ಆ ದ್ವೈಪಾಯನನನ್ನು ನಮಸ್ಕರಿಸುವೆನು. ವೇದಮಹಾನಿಧಿ ಯಾದ ಆತನನ್ನು ಆದಿಕಾಲದಲ್ಲಿ ಮಹಾವಿಭೂತಿಗಳುಳ್ಳ ಉದಾರ ತೇಜಸ್ವಿಯಾದ ನಾರಾಯಣನು ಪುತ್ರನನ್ನಾಗಿ ಸೃಜಿಸಿದನು. ಆ ಮಹರ್ಷಿಯು ಅಜನೂ ಪುರಾಣನೂ ಆಗಿರುತ್ತಾನೆ.

**ಜನಮೇಜಯನಿಂತೆಂದನು:** ಎಲೈ ಬ್ರಾಹ್ಮಣೋತ್ತಮನೆ, ವಸಿಷ್ಠನ ಮಗನು ಶಕ್ತಿ, ಶಕ್ತಿಯ ಪುತ್ರನು ಪರಾಶರನು, ಪರಾಶರನ ಮಗನು ಕೃಷ್ಣದ್ವೈಪಾಯನನು

ಎಂದು ಮೊದಲು ನೀನೇ ಹೇಳಿದ್ದೆ, ಈಗ ಮತ್ತೆ ಅವನೇ ನಾರಾಯಣನ ಮಗನೆಂದು ಹೇಳುತ್ತಿರುವೆಯಲ್ಲ! ಹಾಗಾದರೆ ವ್ಯಾಸನಿಗೆ ಇದಕ್ಕಿಂತಲೂ ಮೊದಲು ನಾರಾಯಣನಿಂದ ಬೇರೊಂದು ಜನ್ಮವಾಗಿತ್ತೆ? ಅದನ್ನು ದಯವಿಟ್ಟು ಹೇಳು.

ವೈಶಂಪಾಯನನಿಂತೆಂದನು: ನಮ್ಮ ಗುರುವಾದ ಧರ್ಮಿಷ್ಠವ್ಯಾಸರು ವೇದಾರ್ಥವನ್ನು ಅರಿಯಬೇಕೆಂದು ಹಿಮವತ್ಪರ್ವತದ ತಪ್ಪಲಿನಲ್ಲಿ ಭಾರತಾಖ್ಯಾನ ವನ್ನು ಮಾಡಿ ತಪಶ್ಶ್ರಾಂತರಾಗಿರುವಲ್ಲಿ ನಾವು ಅವರ ಶುಶ್ರೂಷೆಯನ್ನು ಮಾಡುತ್ತಿದ್ದೆವು. ಸುಮಂತ, ಜೈಮಿನಿ, ಪೈಲ, ಮತ್ತು ನಾಲ್ಕನೆಯವನಾದ ನಾನು, ವ್ಯಾಸರ ಮಗನಾದ ಶುಕನು– ಇವರೆಲ್ಲರೂ ಸುತ್ತುವರೆದಿರಲು ಭೂತಗಣದಿಂದ ಪರಿವೃತನಾದ ಭೂತಪತಿಯಂತೆ ಆ ಮಹರ್ಷಿಗಳು ಒಪ್ಪುತ್ತಿದ್ದರು. ವೇದಗಳನ್ನು ಸಾಂಗವಾಗಿ ಆವೃತ್ತಿಮಾಡುತ್ತಾ ಭಾರತಾರ್ಥವನ್ನು ಹೇಳುತ್ತಾ ಏಕಮನಸ್ಕರಾಗಿ ದಾಂತರಾಗಿದ್ದ ಅವರನ್ನು ನಾವು ಸೇವಿಸುತ್ತಿದ್ದೆವು.

ಮಾತಿನ ನಡುವೆ ಒಮ್ಮೆ ನಾವು ಕೇಳಿದ್ದರಿಂದ ಆ ದ್ವಿಜೋತ್ತಮನು ವೇದಾರ್ಥಗಳನ್ನೂ ಭಾರತಾರ್ಥಗಳನ್ನೂ ಹೇಳಿ ನಾರಾಯಣನಿಂದಾದ ತನ್ನ ಜನ್ಮದ ವೃತ್ತಾಂತವನ್ನು ಹೇಳಲುಪಕ್ರಮಿಸಿದನು. ವಿಪ್ರರೆ, ಈ ಅರ್ಷೇಯ ವೃತ್ತಾಂತವನ್ನು ಕೇಳಿರಿ. ನನಗೆ ಇದು ತಪಸ್ಸಿನಿಂದ ತಿಳಿಯಬಂದಿತು. ಬ್ರಹ್ಮನ ಏಳನೆಯ ಕಲ್ಪದಲ್ಲಿ ಪ್ರಜಾಸೃಷ್ಟಿಯು ಪ್ರಾಪ್ತವಾಗಲು ಶುಭಾಶುಭವರ್ಜಿತನೂ ಮಹಾಯೋಗಿಯೂ ಆದ ಶ್ರೀಮನ್ನಾರಾಯಣನು ಮೊದಲು ತನ್ನ ನಾಭಿಕಮಲದಿಂದ ಬ್ರಹ್ಮನನ್ನು ಸೃಷ್ಟಿಸಿದನು. ಬಳಿಕ ಆ ಬ್ರಹ್ಮನು ತೋರಿಕೊಳ್ಳಲು ಅವನಿಗೆ ಈ ಮಾತನ್ನು ಹೇಳಿದನು: "ನೀನು ನನ್ನ ನಾಭಿಯಿಂದ ಜನಿಸಿರುವೆ, ಪ್ರಜಾಸೃಷ್ಟಿಗೆ ನೀನೇ ಸಮರ್ಥನು. ಆದ್ದರಿಂದ ಚೇತನಾಚೇತನಪ್ರಜೆಗಳನ್ನು ಸೃಷ್ಟಿಸು." ಹೀಗೆನ್ನಲು ಆತನು ಚಿಂತಾಕುಲನಾಗಿ ವರದನಾದ ಆ ದೇವನಿಗೆ ನಮಸ್ಕರಿಸಿ ಈಶ್ವರನಾದ ಶ್ರೀಹರಿಯನ್ನು ಕುರಿತು ಇಂತೆಂದನು: "ದೇವೇಶನೆ, ನಿನಗೆ ನಮಸ್ಕಾರ! ಪ್ರಜೆಗಳನ್ನು ಸೃಷ್ಟಿಮಾಡುವ ಶಕ್ತಿಯು ನನಗೆಲ್ಲಿಯದು? ನನಗೆ ಏನೂ ತಿಳಿಯದೆ ಇದೆ; ಈಗ ಏನುಮಾಡಬೇಕೆಂಬುದನ್ನು ಹೇಳು".

ಹೀಗೆನ್ನಲು ಭಗವಂತನು ಅಂತರ್ಧಾನವಾಗಿ ಬುದ್ಧಿಯನ್ನು ಧ್ಯಾನಿಸಿದನು. ಆಗ ಬುದ್ಧಿಯು ಪ್ರಭುವಾದ ಶ್ರೀಹರಿಯ ಎದುರಿಗೆ ಬಂದು ನಿಂತಳು.

ನಿಯೋಗನಾದ ಹರಿಯು ಈಕೆಗೆ ಯೋಗಶಕ್ತಿಯನ್ನು ಕೂಡಿಸಿದನು. ಹೀಗೆ ಐಶ್ವರ್ಯಯೋಗದಿಂದ ಕೂಡಿದ ಆಕೆಯನ್ನು ಕುರಿತು ಆ ಅವ್ಯಯವಾದ ಪ್ರಭುವು 'ಬ್ರಹ್ಮನನ್ನು ಪ್ರವೇಶಿಸು!' ಎಂದನು. ಹೀಗೆ ಬುದ್ಧಿಯುಕ್ತನಾದ ಬ್ರಹ್ಮನನ್ನು ನೋಡಿ ಮತ್ತೂ ಶ್ರೀಹರಿಯು 'ಪ್ರಜೆಗಳನ್ನು ಸೃಷ್ಟಿಮಾಡು' ಎಂದನು. ಆಗ ಬ್ರಹ್ಮನು ಶ್ರೀಹರಿಯ ಅಪ್ಪಣೆಯನ್ನು ತಲೆಯಮೇಲೆ ಹೊತ್ತು 'ಆಗಲಿ' ಎನ್ನಲು ಶ್ರೀಹರಿಯು ಅಲ್ಲಿಯೇ ಅಂತರ್ಹಿತನಾದನು. ಮುಹೂರ್ತಮಾತ್ರದಲ್ಲಿ ಸ್ವರೂಪದಿಂದ ತನ್ನ ಪ್ರಕೃತಿಯನ್ನು ಸೇರಿ ಅದರಲ್ಲಿ ಒಂದಾಗಿಬಿಟ್ಟನು.

ಬಳಿಕ ಈ ಭಗವಂತನಲ್ಲಿ ಇನ್ನೊಂದು ಯೋಚನೆಯು ಉಂಟಾಯಿತು: "ಪರಮೇಷ್ಠಿಯಾದ ಬ್ರಹ್ಮನು ಈ ಸರ್ವಪ್ರಜೆಗಳನ್ನೂ ಸೃಷ್ಟಿಮಾಡಿರುತ್ತಾನೆ, ದೈತ್ಯರು, ದಾನವರು, ಗಂಧರ್ವರು, ರಾಕ್ಷಸಸಮೂಹ– ಇವರೆಲ್ಲರೂ ತುಂಬಿರುವ ಈ ಭೂಮಿಯು ಪಾಪ! ಭಾರಾಕ್ರಾಂತವಾಗಿರುತ್ತಾಳೆ. ಬಲಿಷ್ಠರಾದ ದೈತ್ಯರು, ದಾನವರು, ರಾಕ್ಷಸರು, ಮೊದಲಾಗಿ ಅನೇಕರು ಈ ಭೂಮಿಯಲ್ಲಿ ಹುಟ್ಟಿ ತಪಸ್ಸಿನಿಂದ ವರಗಳನ್ನು ಪಡೆದುಕೊಳ್ಳುವರು. ವರದಾನದಿಂದ ದರ್ಪಿತರಾದ ಅವರು ದೇವತೆಗಳನ್ನೂ ತಪೋಧರರಾದ ಋಷಿಗಳನ್ನೂ ಪೀಡಿಸುವರು. ಆಗ ಅವಶ್ಯವಾಗಿ ಈ ಭೂಭಾರವನ್ನು ಕಡಿಮೆಮಾಡುವದು ನನಗೆ ಯುಕ್ತವಾಗಿರುತ್ತದೆ. ಹಾಗಾದರೆ ಈ ಭೂದೇವಿಯು ಪಾಪಿಗಳ ನಿಗ್ರಹವೂ ಸಾಧುಗಳ ರಕ್ಷಣೆಯೂ ಆದ ಬಳಿಕ ಎಲ್ಲವನ್ನೂ ಧರಿಸುವದಕ್ಕೆ ಶಕ್ತಳಾದಾಳು. ನಾನೇ ಶೇಷರೂಪದಿಂದ ಈ ಭೂಮಿಯನ್ನು ಪಾತಾಳದಲ್ಲಿದ್ದುಕೊಂಡು ಧರಿಸಿರುವೆನು. ಹಾಗೆ ಎತ್ತಿಹಿಡಿದಿರುವದ ರಿಂದಲೇ ಈ ಭೂಮಿಯು ಚರಾಚರಪ್ರಾಣಿಗಳನ್ನು ಧರಿಸಿರುತ್ತಾಳೆ. ಆದ್ದರಿಂದ ನಾನು ಅವತರಿಸಿ ಈ ಪೃಥಿವಿಯನ್ನು ಕಾಪಾಡುವೆನು."

ಹೀಗೆಂದು ಯೋಚಿಸಿಕೊಂಡು ಆ ಭಗವಂತನಾದ ಮಧುಸೂದನನು ಅನೇಕ ರೂಪಗಳನ್ನು ಅವತಾರದ ನಿಮಿತ್ತದಿಂದ ಸೃಷ್ಟಿಸಿದನು. ವರಾಹ, ನರಸಿಂಹ, ವಾಮನ, ಮತ್ತು ಇನ್ನೂ ಅನೇಕ ಮಾನುಷರೂಪಗಳನ್ನು ಸೃಷ್ಟಿಸಿಕೊಂಡು ಅವುಗಳಿಂದ ದುರ್ವಿನೀತರಾದ ಅಸುರರನ್ನು ಕೊಲ್ಲುವೆನು ಎಂದುಕೊಂಡನು.

ಆಗ ಮತ್ತೆ ಆ ಜಗತ್ಸ್ರಷ್ಟುವು 'ಭೋಃ?' ಎಂದು ದಿಕ್ಕುಗಳೆಲ್ಲವೂ ಮಾರ್ದನಿ ಯನ್ನು ಕೊಡುವಂತೆ ಗರ್ಜಿಸಿದನು. ಆ ಸರಸ್ವತಿ(ಶಬ್ದ)ದಿಂದ ಸಾರಸ್ವತನು

ಉಂಟಾದನು. ಆ ವಾಕ್ಸಂಭವನಾದ ಪುತ್ರನಿಗೆ **ಅಪಾಂತರತಮ**ನೆಂದು ಹೆಸರು. ಅವನು ಭೂತಭವಿಷ್ಯದ್ವರ್ತಮಾನಗಳ ವೃತ್ತವೆಲ್ಲವನ್ನೂ ಅರಿಯುವಂಥವನು, ಸತ್ಯವಾದಿಯು, ದೃಢವ್ರತನು.

ತಲೆಬಾಗಿ ನಮಸ್ಕರಿಸಿದ ಅವನನ್ನು ಕುರಿತು ಆದಿದೇವನೂ ಅವ್ಯಯನೂ ಆದ ಹರಿಯು 'ಮತಿವಂತರಲ್ಲಿ ಶ್ರೇಷ್ಠನಾದವನಾದ ಮುನಿಯೆ, ನೀನು ವೇದಗಳನ್ನು ವಿಂಗಡಿಸು, ಇದೇ ನನ್ನ ಆಜ್ಞೆ; ಇದರಂತೆ ಮಾಡು' ಎಂದನು.

ಹೀಗೆನ್ನಲು ಆ ಅಪಾಂತರತಮನು ಸ್ವಾಯಂಭುವಮನ್ವಂತರದಲ್ಲಿ ವೇದಗಳನ್ನು ವಿಂಗಡಿಸಿದನು. ಅವನ ಆ ಕರ್ಮದಿಂದ ಭಗವಂತನಾದ ಶ್ರೀಹರಿಯು ತುಷ್ಟನಾದನು. "ಹೆಚ್ಚಿನ ತಪಸ್ಸನ್ನು ಮಾಡಿ ಯಮನಿಯಮಗಳಿಂದೊಡಗೂಡಿ, ಎಲೈ ಪುತ್ರನೆ, ನೀನು ಹೀಗೆಯೇ ಮುಂದಿನ ಮನ್ವಂತರಗಳಲ್ಲಿಯೂ ಧರ್ಮಪ್ರವರ್ತಕನಾಗುವೆ, ಅವಿಚಲನೂ ಅಜೇಯನೂ ಆಗಿರುವೆ. ಮತ್ತೆ ಕಲಿದ್ವಾಪರ ಸಂಧಿಯು ಬಂದೊದಗಲಾಗಿ ಕುರುಗಳೆಂಬ ರಾಜರು ಉಂಟಾಗುವರು; ನನ್ನಿಂದ ಹುಟ್ಟಿದ ಅವರಿಗೆ ಮತಭೇದವುಂಟಾಗಿ ಪರಸ್ಪರವಿನಾಶಾರ್ಥವಾಗಿ ಯುದ್ಧವುಂಟಾಗುವದು. ಆಗಲೂ ನೀನು ವೇದಗಳನ್ನು ಅನೇಕ ಶಾಖೆಗಳಾಗಿ ವಿಂಗಡಿಸುವೆ." ಕಲಿಯುಗವು ಪ್ರಾಪ್ತವಾಗಲು ನೀನು ಕೃಷ್ಣವರ್ಣನಾಗುವೆ. ವಿವಿಧವಾದ ದಮಗಳ ಪ್ರವರ್ತಕನೂ ಜ್ಞಾನಕರನೂ ತಪಸ್ವಿಯೂ ಆಗುವೆ; ಆದರೆ ರಾಗದಿಂದ ವಿಮುಕ್ತನಾಗುವದಿಲ್ಲ. ನಿನ್ನ ಮಗನು ವೀತರಾಗನಾಗಿ ಮಹೇಶ್ವರನ ಅನುಗ್ರಹದಿಂದ ಪರಮಾತ್ಮಸ್ವರೂಪವನ್ನು ಹೊಂದುವನು. ಈ ವಚನವು ಎಂದಿಗೂ ಹುಸಿಯಾಗುವದಿಲ್ಲ. ಯಾರನ್ನು ವಿಪ್ರರು ಬ್ರಹ್ಮನ ಮಾನಸ ಪುತ್ರನೆನ್ನುವರೋ, ಯಾವನು ಉತ್ತಮಬುದ್ಧಿಯುಕ್ತನಾಗಿ ತಪೋನಿಧಿ ಯಾಗಿರುವನೋ ಆ ಬ್ರಹ್ಮರ್ಷಿಯಾದ ವಸಿಷ್ಠನ ವಂಶದಲ್ಲಿ ಪರಾಶರನೆಂಬ ಮಹರ್ಷಿಯು ಜನಿಸುವನು. ಆ ವೇದನಿಧಿಯಾದ ವರಿಷ್ಠನಾದ ಮಹಾತಪಸ್ವಿ ಯಾದ, ತಪಸ್ಸಿಗೆ ನಿವಾಸನಾದ, ಪರಾಶರನು ನಿನ್ನ ತಂದೆಯಾಗುವನು.

* * * * *

# 14. ದ್ವೈಪಾಯನೋತ್ಪತ್ತಿ*

## (3)

ಭಗವಂತನಿಂತೆಂದನು: ಆ ನಾನು ಹೇಳಿರುವ ಮಹಾಮಹಿಮನಿಂದ ಆ ಋಷಿಯ ಮನೆಯಲ್ಲಿರುವ ಒಬ್ಬ ಕನ್ಯೆಯಿಂದ ನೀನು ಜನಿಸಿ ಕಾನೀನಗರ್ಭ (ಕನ್ಯೆಯಿಂದ ಹುಟ್ಟಿದವನು) ಎನ್ನಿಸಿಕೊಳ್ಳುವೆ. ಭೂತಭವಿಷ್ಯದ್ವರ್ತಮಾನದಲ್ಲಿ ಆಗುವ ಯಾವ ವಿಷಯದಲ್ಲಿಯೂ ನಿನಗೆ ಸಂಶಯವಿರುವದಿಲ್ಲ. ಹಿಂದೆ ಆಗಿರುವ ಸಹಸ್ರಯುಗದ ಕಲ್ಪಗಳು ಎಷ್ಟು ಆಗಿಹೋಗಿರುವವೋ ಅವನ್ನೆಲ್ಲ ತಪೋಬಲದ ಫಲವಾಗಿ ನನ್ನ ಅನುಗ್ರಹದಿಂದ ನೀನು ಅರಿತುಕೊಳ್ಳುವೆ; ಮುಂದೆ ಆಗಲಿರುವ ಅನೇಕ ಕಲ್ಪಗಳನ್ನು ನೀನು ಕಂಡುಕೊಳ್ಳುವೆ; ನಿರಂತರಧ್ಯಾನದ ಫಲವಾಗಿ ಅನಾದ್ಯನಂತನೂ ಚಕ್ರಹಸ್ತನೂ ಆದ ನನ್ನನ್ನು ಕಾಣುವೆ. ಈ ಮಾತು ಎಂದಿಗೂ ಹುಸಿಯಾಗದು. ಮಹಾಸತ್ತ್ವಶಾಲಿಯೆ, ನಿನ್ನ ಖ್ಯಾತಿಯೂ ಅಸಮಾನವಾಗಿ ಆಗುವದು. ಆಗ ಸೂರ್ಯಪುತ್ರನಾದ ಶನೈಶ್ಚರನು ಮನ್ವಾದಿಗಣಪೂರ್ವಕನಾಗಿ ಮನ್ವಂತರಪ್ರವರ್ತಕನಾಗುವನು. ಆಗ ನೀನೇ ನನ್ನ ಪ್ರಸಾದದಿಂದ ಮನ್ವಾದಿಗಣದಲ್ಲಿ ಪ್ರಧಾನನಾಗುವೆ. ಲೋಕದಲ್ಲಿ ಏನೇನು ಆಗುತ್ತಿರುವದೋ ಅದೆಲ್ಲವೂ ನನ್ನ ವ್ಯಾಪಾರವೇ. ಒಬ್ಬನು ತನಗಿಂತ ಬೇರೆಯಾದದ್ದನ್ನಲ್ಲವೆ, ಚಿಂತಿಸುತ್ತಿರುವನು? ನಾನು ಮಾತ್ರ ಸ್ವೇಚ್ಛೆಯಿಂದ ಎಲ್ಲವನ್ನೂ ಮಾಡುತ್ತಿರುವೆನು.

ಹೀಗೆ ಸಾರಸ್ವತಋಷಿಯಾದ ಅಪಾಂತರತಮನಿಗೆ ಆ ಭಗವಂತನು ಹೇಳಿದ ಬಳಿಕ, 'ನಡೆ' ನಿನ್ನ ಕಾರ್ಯವನ್ನು ಮಾಡು!' ಎಂದನು. ಈ ರೀತಿಯಲ್ಲಿ ನಾನು ಭಗವಂತನ ಪ್ರಸಾದದಿಂದ, ಆತನ ಅಪ್ಪಣೆಯಂತೆ ಅಪಾಂತರತಮನಾಗಿ–ಜನಿಸಿದೆನು. ಮತ್ತೊಮ್ಮೆ ವಸಿಷ್ಠಕುಲನಂದನನಾದ ವ್ಯಾಸನಾಗಿಯೂ ಹುಟ್ಟಿದೆನು. ಇಗೊ, ನಾರಾಯಣಪ್ರಸಾದದಿಂದ ನನಗೆ ಆಗಿದ್ದ ಹಿಂದಿನ ಜನ್ಮದ ವೃತ್ತಾಂತವನ್ನು ಹೇಳಿರುತ್ತೇನೆ. ಈ ರೀತಿಯಿಂದಲೂ ನಾರಾಯಣನ ಅಂಶದಿಂದ ಉತ್ಪನ್ನನಾಗಿದ್ದೆನು. ಮತಿವಂತರಲ್ಲಿ ಶ್ರೇಷ್ಠರಾದವರೆ, ನಾನು ಹೀಗೆ ಪರಮದಾರುಣವಾದ ಮಹಾತಪಸ್ಸನ್ನು ಪರಮಸಮಾಧಿಯಿಂದ ಮಾಡಿದ್ದೆನಷ್ಟೆ, ಅದರಿಂದ ಇದೆಲ್ಲವೂ

* ಸಂಪುಟ 38; ಸಂಚಿಕೆ 12; ಆಗಸ್ಟ್ 1969

ನನಗೆ ತಿಳಿಯಿತು. ಇಗೊ, ಭಕ್ತರಾದ ನಿಮ್ಮ ಮೇಲಿನ ಪ್ರೇಮದಿಂದ ನಿಮಗೆ ಈ ವೃತ್ತಾಂತವೆಲ್ಲವನ್ನೂ ಹೇಳಿರುತ್ತೇನೆ.

ವೈಶಂಪಾಯನನಿಂತೆಂದನು: ಎಲೈ ನರಪತಿಯೆ, ಈ ರೀತಿಯಲ್ಲಿ ನಮ್ಮ ಗುರುಗಳಾದ ಕ್ಲೇಶರಹಿತಚಿತ್ತರಾದ ವ್ಯಾಸರ ಪೂರ್ವಜನ್ಮವನ್ನು ನಿನಗೆ ಹೇಳಿರುತ್ತೇನೆ. ಇನ್ನು ನೀನು ಕೇಳಿದ ಇನ್ನೊಂದು ಪ್ರಶ್ನೆಗೆ ಉತ್ತರವನ್ನು ಹೇಳುವೆನು, ಕೇಳು.

ಸಾಂಖ್ಯ, ಯೋಗ, ಪಾಂಚರಾತ್ರ, ವೇದ, ಪಾಶುಪತ– ಈ ದರ್ಶನಗಳು ನಾನು ಹೇಳಿದ ಮತಗಳೆಂದು ತಿಳಿ. ಸಾಂಖ್ಯವನ್ನು ಹೇಳಿದಾತನು ಕಪಿಲನು; ಆತನು ಪರಮರ್ಷಿಯೆನಿಸುವನು. ಪುರಾತನನಾದ ಹಿರಣ್ಯಗರ್ಭನು ಯೋಗವನ್ನು ಹೇಳಿದಾತನು; ಮತ್ತೊಬ್ಬನಲ್ಲ. ಅಪಾಂತರತಮನೆಂಬುವನಿದಾನಲ್ಲ. ಆತನು ವೇದಾಚಾರ್ಯನೆನಿಸಿರುತ್ತಾನೆ; ಕೆಲವರು ಆತನನ್ನು ಪ್ರಾಚೀನಗರ್ಭನೆನ್ನುತ್ತಾರೆ. ಉಮಾಪತಿಯೂ ಭೂತಪತಿಯೂ ಶ್ರೀಕಂಠನೂ ಬ್ರಹ್ಮನ ಮಗನೂ ಆದ ಶಿವನು ಅವ್ಯಗ್ರನಾಗಿ ಈ ಪಾಶುಪತಮತವನ್ನು ಹೇಳಿರುತ್ತಾನೆ. ಪರಿಪೂರ್ಣವಾದ ಪಾಂಚರಾತ್ರವನ್ನು ಅರಿವಾತನಾದರೊ, ಸ್ವಯಂಭಗವಂತನೇ ಆದ ಆ ನಾರಾಯಣನು. ಆ ಪ್ರಭುವೇ ಆಗಮಾನುಸಾರವಾಗಿಯೂ ಯುಕ್ತಿಗನುಸಾರ ವಾಗಿಯೂ ಈ ಜ್ಞಾನಗಳೆಲ್ಲಕ್ಕೂ ಪರ್ಯವಸಾನವೆಂದು ಕಾಣಬರುತ್ತಿರುವನು. ಎಲೈ ನೃಪಶ್ರೇಷ್ಠನೆ, ಆತನನ್ನು ಇಂಥವನೆಂದು ತಮೋಗ್ರಸ್ತರಾಗಿರುವವರು ಅರಿಯರು. ಆ ನಾರಾಯಣ ಋಷಿಯೇ ಎಲ್ಲಕ್ಕೂ ನಿಷ್ಠೆಯೆಂದು ಶಾಸ್ತ್ರಕರ್ತೃಗಳಾದ ವಿವೇಕಿಗಳು ಹೇಳುತ್ತಿರುವರು; ಅವನಿಗೆ ಸಮಾನರು ಮತ್ತೆ ಯಾರೂ ಇಲ್ಲ– ಎಂಬಿದು ನನ್ನ ಮಾತು. ನಿಃಸಂದಿಗ್ಧವಾಗಿ ನಿರ್ಣೀತವಾಗಿರುವದರಲ್ಲೆಲ್ಲ ಶ್ರೀಹರಿಯೇ ಇರುತ್ತಿರುವನು. ಆದರೆ ಯಾವವು ಸಂಶಯಗ್ರಸ್ತವಾಗಿ ಹೇತುಮಾತ್ರ ಬೆಂಬಲವುಳ್ಳವಾಗಿರುವವೋ ಅವುಗಳೊಳಗೆ ಮಾಧವನು ವಾಸವಾಗಿರುವದಿಲ್ಲ. ಎಲೈ ನೃಪನೆ, ಯಾರು ಪಾಂಚರಾತ್ರವನ್ನು ಬಲ್ಲರೋ, ಯಾರು ಅದರ ಕ್ರಮದಲ್ಲಿ ತಾತ್ಪರ್ಯವುಳ್ಳವರೋ ಯಾರು ಏಕಾಂತಭಾವವನ್ನು ಹೊಂದಿರುವರೋ ಅವರು ಶ್ರೀಹರಿಯನ್ನು ಪ್ರವೇಶಿಸುತ್ತಾರೆಂಬುದು ಸುಪ್ರಸಿದ್ಧವು. ರಾಜನೆ, ಸಾಂಖ್ಯ, ಯೋಗ– ಎಂಬ ಸನಾತನದರ್ಶನಗಳು, ಸಕಲವೇದಗಳು– ಇವುಗಳೆಲ್ಲವೂ ಸಮಸ್ತಋಷಿಗಳೂ ಈ ಪುರಾತನವಿಶ್ವವೆಲ್ಲವೂ ನಾರಾಯಣನೇ ಆಗಿರುತ್ತಾನೆಂದು ಬಲ್ಲವರು ಹೇಳುತ್ತಾರೆ.

ದ್ಯುಲೋಕದಲ್ಲಿ, ಅಂತರಿಕ್ಷದಲ್ಲಿ, ಭೂಲೋಕದಲ್ಲಿ, ಅಬ್ಲೋಕದಲ್ಲಿ– ಈ ಎಲ್ಲಾ ಲೋಕಗಳಲ್ಲಿಯೂ ಯಾವಯಾವ ಶುಭಾಶುಭ ಕರ್ಮವು ನಡೆಯುತ್ತಿರುವದೋ ಅವೆಲ್ಲವೂ ಆ ಋಷಿಯಾದ ನಾರಾಯಣನಿಂದಲೇ ಆಗುತ್ತಿದೆ ಎಂದು ತಿಳಿಯಬೇಕು.

* * * * *

# 15. ನಾರಾಯಣನ ಮಹಿಮೆ*

## (1)

ಜನಮೇಜಯನಿಂತೆಂದನು: ಬ್ರಾಹ್ಮಣೋತ್ತಮನೆ, ಪುರುಷರು ಅನೇಕರೊ, ಅಥವಾ ಒಬ್ಬನೇ ಪುರುಷನೊ? ಇದರಲ್ಲಿ ಯಾವ ಪುರುಷನು ಶ್ರೇಷ್ಠನು? ಯಾವನು ಎಲ್ಲಕ್ಕೂ ಕಾರಣನೆನಿಸಿರುವನು?

ವೈಶಂಪಾಯನನು ಹೇಳಿದನೇನೆಂದರೆ: ಕುರುಕುಲೋದ್ವಹನೆ, ಸಾಂಖ್ಯ ಯೋಗಗಳ ವಿಚಾರಧಾರೆಯಂತೆ ಪುರುಷರು ಅನೇಕರೇ, ಆ ದರ್ಶನದವರು ಪುರುಷನು ಒಬ್ಬನೇ ಎಂಬುದನ್ನು ಒಪ್ಪುವದಿಲ್ಲ. ಬಹುಪುರುಷರಿಗೆ ಹೇಗೆ ಒಂದೇ ಕಾರಣವೋ ಅದನ್ನು, ಗುಣಾಧಿಕನಾದ ಪುರುಷನನ್ನು – ನಿನಗೆ ತಿಳಿಸುವೆನು. ಆತ್ಮತತ್ತ್ವವನ್ನು ತಿಳಿದಿರುವವರೂ, ಆತ್ಮವಿದರೂ ತಪೋಯುಕ್ತರೂ ದಾಂತರೂ ವಂದ್ಯರೂ ಪರಮರ್ಷಿಗಳೂ ಆದ ನಮ್ಮ ಗುರುಗಳಾದ ವ್ಯಾಸರನ್ನು ನಮಸ್ಕರಿಸಿ ಇದನ್ನು ಹೇಳುವೆನು. ಪಾರ್ಥಿವನೆ, ಈ ಪುರುಷಸೂಕ್ತವು ಸರ್ವವೇದಗಳಲ್ಲಿಯೂ ಋತವೆಂದೂ ಸತ್ಯವೆಂದೂ ವಿಖ್ಯಾತವಾಗಿರುತ್ತದೆ. ಋಷಿಸಿಂಹರಾದ ವ್ಯಾಸರು ಇದನ್ನು ಚಿಂತನೆಮಾಡಿರುತ್ತಾರೆ.

ಭಾರತನೆ, ಕಪಿಲರೇ ಮುಂತಾದ ಋಷಿಗಳು ಸಾಮಾನ್ಯವಿಶೇಷರೂಪವಾಗಿ ಅಧ್ಯಾತ್ಮವಿಚಾರವನ್ನಾಶ್ರಯಿಸಿ ಶಾಸ್ತ್ರಗಳನ್ನು ಹೇಳಿರುತ್ತಾರೆ. ವ್ಯಾಸರು ಯಾವ ಪುರುಷೈಕತ್ವವನ್ನು ಸಂಕ್ಷೇಪವಾಗಿ ಹೇಳಿರುತ್ತಾರೋ ಅದನ್ನೇ ಅಮಿತತೇಜಸ್ವಿಗಳಾದ ಅವರ ಪ್ರಸಾದದಿಂದ ನಿನಗೆ ಹೇಳುವೆನು.

* ಸಂಪುಟ 39; ಸಂಚಿಕೆ 1; ಸೆಪ್ಟೆಂಬರ್ 1969

ಈ ವಿಷಯದಲ್ಲಿ ಬ್ರಹ್ಮನೊಡನೆ ತ್ರ್ಯಂಬಕನು ಮಾಡಿದ ಸಂವಾದದ ಪುರಾತನ ಕಥೆಯನ್ನು ಬಲ್ಲವರು ಉದಾಹರಿಸುತ್ತಾರೆ. ಕ್ಷೀರಸಮುದ್ರದ ನಡುವೆ ಸ್ವರ್ಣಕಾಂತಿಯಿಂದ ಥಳಗುಟ್ಟುವ ವೈಜಯಂತವೆಂದು ವಿಖ್ಯಾತವಾದ ಪ್ರರ್ವತಶ್ರೇಷ್ಠ ವೊಂದುಂಟು. ಅಲ್ಲಿ ಬ್ರಹ್ಮನು ಅಧ್ಯಾತ್ಮಗತಿಯನ್ನು ಧ್ಯಾನಿಸುತ್ತ ತಾನೊಬ್ಬನೇ ಬ್ರಹ್ಮಲೋಕದಿಂದ ಪ್ರತಿನಿತ್ಯವೂ ಹೋಗಿ ವೈಜಯಂತವನ್ನು ಸೇವಿಸುತ್ತಿರುವನು. ಹೀಗಿರುವಲ್ಲಿ ಅಲ್ಲಿ ವಾಸಮಾಡಿಕೊಂಡಿರುವ ಧೀಮಂತನಾದ ಚತುರ್ಮುಖನ ಹಣೆಯಿಂದ ಉದಿಸಿದ ಮಹಾಯೋಗಿಯಾದ ಶಿವನು ಒಮ್ಮೆ ಅಕಸ್ಮಾತ್ತಾಗಿ ಆಕಾಶಮಾರ್ಗದಿಂದ ಬಂದು ಆ ಪರ್ವತದ ಶಿಖರದ ಮೇಲೆ ಇಳಿದನು. ಮೊದಲು ಸಂತೋಷದಿಂದ ಬ್ರಹ್ಮನ ಚರಣಗಳಿಗೆ ನಮಸ್ಕರಿಸಿದನು. ಆ ಏಕಪ್ರಭುವಾದ ಪ್ರಜಾಪತಿಯು ಹೀಗೆ ನಮಸ್ಕರಿಸಿದ ಆತನನ್ನು ಎಡಗೈಯಿಂದ ಎಬ್ಬಿಸಿ, ಬಹುಕಾಲಕ್ಕೆ ತನ್ನ ಬಳಿಗೆ ಬಂದ ಪುತ್ರನನ್ನು ಕುರಿತು ಇಂತೆಂದನು: "ಎಲೈ ಮಹಾಬಾಹುವೆ, ನಿನಗೆ ಸ್ವಾಗತ: ದೈವೇಚ್ಛೆಯಿಂದ ನನ್ನ ಬಳಿಗೆ ಬಂದಿದ್ದೀಯೆ. ನಿನ್ನ ಸ್ವಾಧ್ಯಾಯತಪಸ್ಸುಗಳು ಕ್ಷೇಮದಿಂದ ಸಾಗಿವೆಯಷ್ಟೆ? ಎಲೈ ಪುತ್ರನೆ, ನೀನು ನಿತ್ಯವೂ ಉಗ್ರತಪಸ್ಸಿನಲ್ಲಿಯೇ ಇರುತ್ತೀಯಷ್ಟೆ? ಆದ್ದರಿಂದ ಹೀಗೆಂದು ಕೇಳುತ್ತಿದ್ದೇನೆ."

**ರುದ್ರನಿಂತೆಂದನು:** ಭಗವಂತನೆ, ನಿನ್ನ ಪ್ರಸಾದದಿಂದ ನನ್ನ ಸ್ವಾಧ್ಯಾಯ ತಪಸ್ಸುಗಳು ಕ್ಷೇಮದಿಂದ ಸಾಗುತ್ತಿವೆ. ಸರ್ವಜಗತ್ತೂ ಕುಶಲವಾಗಿಯೂ ಅವ್ಯಯುವಾಗಿಯೂ ಇದೆ. ನಾನು ನಿಮ್ಮನ್ನು ಬ್ರಹ್ಮಲೋಕದಲ್ಲಿ ಕಂಡು ಬಹುಕಾಲವಾಯಿತು; ಆದ್ದರಿಂದ ನಿಮ್ಮ ಪಾದದಿಂದ ಸೇವಿತವಾಗಿರುವ ಈ ಪರ್ವತಕ್ಕೆ ಬಂದಿರುತ್ತೇನೆ. ಏಕಾಂತವಾಗಿ ಇಲ್ಲಿಗೆ ಬರುವದಕ್ಕೆ ಒಂದು ಕುತೂಹಲವೂ ಉಂಟು. ಏನೆಂದರೆ ಪಿತಾಮಹನೆ, ಇದಕ್ಕೆ ಅಲ್ಪಕಾರಣವೇನೂ ಇರಲಾರದು. ಕ್ಷುತ್ಪಿಪಾಸಾದಿರಹಿತವಾಗಿ, ಸುರಾಸುರರೂ ಸೇವಿಸುತ್ತಿರುವ, ಅಮಿತಕಾಂತಿಯುಕ್ತರಾದ ಋಷಿಗಳೂ ಸೇವಿಸುತ್ತಿರುವ, ಗಂಧರ್ವರೂ ಅಪ್ಸರಸರೂ ಸಂತತವೂ ಸೇವಿಸುತ್ತಿರುವ ಆ ಲೋಕವನ್ನು ಬಿಟ್ಟು ಈ ಗಿರಿಶ್ರೇಷ್ಠಕ್ಕೆ ನೀನೊಬ್ಬನೇ ಬಂದಿರುವದಕ್ಕೆ ಕಾರಣವೇನೊ?

**ಬ್ರಹ್ಮನಿಂತೆಂದನು:** ಈ ವೈಜಯಂತಗಿರಿಶ್ರೇಷ್ಠವನ್ನು ನಾನು ಸಂತತವಾಗಿ ಸೇವಿಸುತ್ತಿರುವೆನು. ಇಲ್ಲಿ ಏಕಾಗ್ರಮನಸ್ಸಿನಿಂದ ವಿರಾಟ್ಪುರುಷನನ್ನು ಧ್ಯಾನಿಸುತ್ತಿರುವೆನು.

ಆಗ ರುದ್ರನು ಕೇಳಿದ್ದೇನೆಂದರೆ: ಎಲೈ ಬ್ರಹ್ಮದೇವನೆ, ಸ್ವಯಂಭುವಾದ ನೀನೇ ಎಷ್ಟೋ ಪುರುಷರನ್ನು ಸೃಷ್ಟಿಸಿರುವೆ, ಇನ್ನೂ ಅನೇಕರನ್ನು ಸೃಷ್ಟಿಸುವೆ. ಆ ವಿರಾಟ್ಪುರುಷನು ಒಬ್ಬ ಪುರುಷನೇ ಅಲ್ಲವೆ? 'ಎಲೈ ಬ್ರಹ್ಮದೇವನೆ, ನೀನು ಧ್ಯಾನಿಸುತ್ತಿರುವ ಈ ಪುರುಷೋತ್ತಮನು ಯಾವನು? ಈ ನನ್ನ ಸಂಶಯವನ್ನು ಬಗೆಹರಿಸು; ಏಕೆಂದರೆ ನನಗೆ ಬಹಳ ಕುತೂಹಲವುಂಟಾಗಿರುತ್ತದೆ.

ಇದಕ್ಕೆ ಬ್ರಹ್ಮದೇವನು ಹೇಳಿದ ಉತ್ತರವೇನೆಂದರೆ: ಪುತ್ರನೆ, ನೀನು ಹೇಳಿದ ಪುರುಷರು ಅನೇಕರು. ಹೀಗೆಯೇ ಹಿಂದೆ ಆಗಿರುತ್ತದೆ ಎಂದು ತಿಳಿಯಬೇಕು; ಆದರೆ ಈ ಪುರುಷರನ್ನಲ್ಲ, ನಾನು ಚಿಂತಿಸುತ್ತಿರುವದು– ಎಂದು ಅರಿತುಕೊ. ನೀನು ಹೇಳಿದ ಬಹುಪುರುಷರಿಗೆ ಆಧಾರನಾಗಿರುವ ಒಬ್ಬ ಪುರುಷನನ್ನು ನಿನಗೆ ಹೇಳುವೆನು; ಇವರಿಗೆಲ್ಲ ಒಂದೇ ಕಾರಣವೆಂಬುದು ಹೇಗೆಂಬುದನ್ನು, ಮತ್ತು ಆ ವಿಶ್ವಾತ್ಮಕಪುರುಷನನ್ನು, ಆ ಸುಮಹತ್ತಮನಾದ ಪರಮಪುರುಷನನ್ನು, ನಿರ್ಗುಣನಾದ ಆ ಸನಾತನನಾದ ಪುರುಷನನ್ನು, ನಿರ್ಗುಣರಾಗಿ ಭಕ್ತರು ಹೇಗೆ ಪ್ರವೇಶಿಸುವರೆಂಬುದನ್ನು ಹೇಳುವೆನು, ಕೇಳು.

* * * * *

# 15. ನಾರಾಯಣನ ಮಹಿಮೆ*

## (2)

ಪುತ್ರನೆ, ಈ ಪುರುಷನು ಶಾಶ್ವತನೂ ಅವ್ಯಯನೂ ಅಕ್ಷಯನೂ ಅಪ್ರಮೇಯನೂ ಸರ್ವಗತನೂ ಆಗಿರುವನೆಂಬುದನ್ನು ಹೇಳುವೆನು ಕೇಳು. ಎಲೈ ಸತ್ತಮನೆ, ಆತನನ್ನು ನೀನಾಗಲಿ, ನಾನಾಗಲಿ ಅಥವಾ ಮತ್ತೊಬ್ಬರಾಗಲಿ ಕಾಣುವದು ಶಕ್ಯವಲ್ಲ. ಏಕೆಂದರೆ ಆತನು ಸಗುಣನು, ನಿರ್ಗುಣನು, ವಿಶ್ವಾತ್ಮನು, ಜ್ಞಾನದೃಶ್ಯನೆಂದೇ ಆತನನ್ನು ಬಲ್ಲವರು ತಿಳಿದಿರುವರು. ಸರ್ವಶರೀರಗಳಲ್ಲಿಯೂ ಅಶರೀರನಾಗಿ ವಾಸಮಾಡುತ್ತಿರುವನು; ಹೀಗೆ ಶರೀರಗಳಲ್ಲಿ ವಾಸಮಾಡಿ ಕೊಂಡಿದ್ದರೂ ಕರ್ಮಗಳಿಂದ ಲಿಪ್ತನಾಗದೆ ಇರುತ್ತಾನೆ. ನನ್ನ, ನಿನ್ನ, ದೇಹಿಗಳೆನಿಸಿ ಕೊಂಡಿರುವ ಇತರರ ಅಂತರಾತ್ಮನು; ಎಲ್ಲರಿಗೂ ಈತನು ಸಾಕ್ಷಿರೂಪನಾಗಿರುವನು; ಯಾರೊಬ್ಬರಿಗೂ ಎಂದಿಗೂ ಗ್ರಾಹ್ಯನಲ್ಲ. ಆತನು ವಿಶ್ವಮಸ್ತಕನು, ವಿಶ್ವಭುಜನು, ವಿಶ್ವಪಾದಾಕ್ಷಿನಾಸಿಕನು; ಆತನೊಬ್ಬನೇ ಎಲ್ಲಾ ಕ್ಷೇತ್ರಗಳಲ್ಲಿಯೂ ಸ್ವೇಚ್ಛೆಯಿಂದ ಯಥಾಸುಖವಾಗಿ ಸಂಚರಿಸುತ್ತಿರುವನು. ಕ್ಷೇತ್ರಗಳಾಗಿರುವ ಶರೀರಗಳನ್ನೂ ಶುಭಾಶುಭಕರ್ಮಬೀಜವನ್ನೂ ಆ ಯೋಗಾತ್ಮನು ಅರಿತಿರುವನಾದ್ದರಿಂದ ಅವನಿಗೆ **ಕ್ಷೇತ್ರಜ್ಞ**ನೆಂದು ಹೆಸರು. ಸರ್ವಭೂತಗಳಲ್ಲಿ ಯಾವನೊಬ್ಬನೂ ಆತನ ಗತಿಯನ್ನಾಗಲಿ ಅಗತಿಯನ್ನಾಗಲಿ ಅರಿಯನು. ಸಾಂಖ್ಯವಿಧಾನದಿಂದಲೂ ಯೋಗ ವಿಧಾನ ದಿಂದಲೂ ಆತನ ಗತಿಯನ್ನು ನಾನು ಚಿಂತಿಸುತ್ತಿರುವೆನು. ಇಲ್ಲಿಂದ ಮುಂದಕ್ಕೆ ಆತನ ಗತಿಯನ್ನು ನಾನರಿಯೆ. ಎಷ್ಟರಮಟ್ಟಿಗೆ ತಿಳಿದಿರುವೆನೋ ಅಷ್ಟರಮಟ್ಟಿಗೆ ಆ ಸನಾತನಪುರುಷನನ್ನು ಹೇಳುವೆನು, ಕೇಳು: ಆತನು ಏಕನೂ ಮಹಾಂತನೂ ಆಗಿರುತ್ತಾನೆ; ಆತನೊಬ್ಬನೇ ಪುರುಷನೆನಿಸಿರುತ್ತಾನೆ. **ಮಹಾಪುರುಷ**ನೆಂಬ ಹೆಸರನ್ನು ಸನಾತನನಾದ ಆತನೊಬ್ಬನೇ ಧರಿಸಿರುತ್ತಾನೆ.

ಒಬ್ಬ ಅಗ್ನಿಯೇ ಬಗೆಬಗೆಯಿಂದ ಪ್ರಜ್ವಾಲಿತನಾಗಿರುವನು; ಸೂರ್ಯನು ಒಬ್ಬನೇ, ತಪಸ್ಸಿಗೆ ಯೋನಿಯು ಒಬ್ಬನೇ; ಒಬ್ಬನೇ ವಾಯುವೇ ಲೋಕದಲ್ಲಿ ನಾನಾದಿಕ್ಕಿನಲ್ಲಿ ಬೀಸುತ್ತಿರುವನು, ನದಿಗಳಿಗೆಲ್ಲ ಯೋನಿಯಾಗಿರುವ ಸಮುದ್ರವೂ

* ಸಂಪುಟ 39; ಸಂಚಿಕೆ 2; ಅಕ್ಟೋಬರ್ 1969

ಒಂದೇ; ಪುರುಷನೂ ಒಬ್ಬನೇ, ಆತನು ನಿರ್ಗುಣನು, ವಿಶ್ವರೂಪನು, ಆ ನಿರ್ಗುಣನಾದ ಪುರುಷನನ್ನೇ ಎಲ್ಲರೂ ಪ್ರವೇಶಿಸುವರು. ಗುಣಮಯ ವಾದದ್ದೆಲ್ಲವನ್ನೂ ಬಿಟ್ಟು ಶುಭಾಶುಭಕರ್ಮಗಳನ್ನೂ ಬಿಟ್ಟು, ಸತ್ಯಾನೃತಗಳೆರಡನ್ನೂ ಬಿಟ್ಟರೆ– ಈ ರೀತಿಯಲ್ಲಿರುವ ಸಾಧಕನು ನಿರ್ಗುಣನಾಗುವನು. ಅಚಿಂತ್ಯನಾಗಿದ್ದರೂ ಆತನನ್ನು ಅರಿತುಕೊಂಡು ಭಾವಸೂಕ್ಷ್ಮನೂ ಚತುಷ್ಟಯರೂಪನೂ ನಿರಂಹಕಾರನೂ ಆಗಿ ಯಾವನು ವ್ಯವಹರಿಸುತ್ತಿರುವನೋ ಆತನೇ ಶುಭಪುರುಷನನ್ನು ಸೇರುವನು.

ಹೀಗೆಂದು ಕೆಲವರು ಪಂಡಿತರು ಪರಮಾತ್ಮನನ್ನು ಏಕಾತ್ಮನೆಂದು ತಿಳಿಯುತ್ತಿರುವರು. ಮತ್ತೆ ಕೆಲವರು ಜ್ಞಾನಚಿಂತಕರು ಏಕಾತ್ಮನೆಂದೇ ತಿಳಿಯುತ್ತಿರುವರು. ಈ ಇಬ್ಬರೊಳಗೆ ಯಾವನು ಪರಮಾತ್ಮನೋ ಆತನು ನಿತ್ಯನು, ನಿರ್ಗುಣನು– ಎನಿಸುವನು. ಅವನನ್ನೇ ನಾರಾಯಣನೆಂದು ಅರಿಯಬೇಕು. ಏಕೆಂದರೆ ಆತನು ಪರಮಾತ್ಮನಾದ ಪುರುಷನು. ಅವನು ಯಾವ ಕರ್ಮಫಲಗಳಿಂದಲೂ ಲಿಪ್ತನಾಗುವದಿಲ್ಲ. ಇನ್ನು ಕರ್ಮಾತ್ಮನಾದ ಇನ್ನೊಬ್ಬನಿರುವ ನಲ್ಲ, ಅವನಿಗೆ ಮೋಕ್ಷಬಂಧಗಳು ಸೇರಿಕೊಂಡಿರುವವು. ಅವನಿಗೆ ಸಪ್ತದಶಕ (ಲಿಂಗ) ರಾಶಿಯೂ ಸೇರಿಕೊಂಡಿರುತ್ತದೆ, ಹೀಗೆ ನಿನಗೆ ಬಹುವಿಧವಾಗಿರುವ ಪುರುಷನನ್ನು ಕ್ರಮವರಿತು ಹೇಳಿರುತ್ತೇನೆ.

ಯಾವದು ಪೂರ್ಣವಾಗಿ ಲೋಕತಂತ್ರಕ್ಕೆಲ್ಲ ಧಾಮವಾಗಿರುವದೋ ಪರಮ ವೇದ್ಯವಾಗಿರುವದೊ, ಬೋಧನೀಯವೂ ಬೋಧ್ಯವೂ, ಮಂತೃವೂ ಮಂತವ್ಯವೂ, ಭೋಕ್ತೃವೂ ಭೋಜ್ಯವೂ, ಘ್ರಾತೃವೂ ಘ್ರೇಯವೂ, ಸ್ಪ್ರಷ್ಟೃವೂ ಸ್ಪ್ರಷ್ಟವ್ಯವೂ, ದ್ರಷ್ಟೃವೂ ದ್ರಷ್ಟವ್ಯವೂ, ಶ್ರೋತೃವೂ ಶ್ರೋತವ್ಯವೂ, ಜ್ಞಾತೃವೂ ಜ್ಞೇಯವೂ, ಸಗುಣವೂ ನಿರ್ಗುಣವೂ ಆಗಿರುವದೋ ಅಪ್ಪ, ಯಾವದು ಸಮೀಚೀನವಾದ **ಪ್ರಧಾನ**ವೆನಿಸಿರು ವದೋ ಅದೇ ನಿತ್ಯವು, ಶಾಶ್ವತವು, ಅವ್ಯಯವು. ಯಾವದು ಧಾತೃವಿನ ಮೊದಲನೆಯ ವಿಧಾನವನ್ನು ಉಂಟುಮಾಡುವದೋ, ಅದನ್ನೇ ವಿಪ್ರರು **ಅನಿರುದ್ಧ**ನೆನ್ನುವರು. ಯಾವದು ಲೋಕದಲ್ಲಿ ವೈದಿಕವಾದ ಸತ್ಕರ್ಮವೆನಿಸುವದೋ ಅದೂ ಆತನ ಪ್ರಸನ್ನತೆಗೆಂದೇ ಮಾಡತಕ್ಕದ್ದು, ಆತನದೇ ಆಗಿರತಕ್ಕದ್ದು. ಸಕಲದೇವತೆಗಳೂ ಸಂಪೂರ್ಣ ಶಾಂತರಾಗಿರುವ ಮುನಿಗಳೂ ಆತನನ್ನು ಪ್ರಾಂಗ್ವಂಶದಲ್ಲಿ ಯಜ್ಞಭಾಗಗಳಿಂದ ಆರಾಧಿಸುತ್ತಿರುವರು. ಪ್ರಜೆಗಳಿಗೆಲ್ಲ ಆದ್ಯನೂ

ಈಶ್ವರನೂ ಆದ ನಾನು ಆತನಿಂದಲೇ ಜನಿಸಿರುವೆನು. ನೀನೂ ನನ್ನಿಂದ ಹುಟ್ಟಿರುವೆ. ಪುತ್ರನೆ, ನನ್ನಿಂದಲೇ ಅಲ್ಲವೆ, ಸ್ಥಾವರಜಂಗಮಾತ್ಮಕವಾದ ಜಗತ್ತೂ, ರಹಸ್ಯಸಮೇತವಾದ ಎಲ್ಲಾ ವೇದಗಳೂ ಉಂಟಾಗಿರುವವು? ಚತುರ್ವ್ಯೂಹಯುಕ್ತನಾದ ಆ ಪುರುಷನು ತನ್ನ ಇಚ್ಛೆಬಂದಂತೆ ಕ್ರೀಡಿಸುತ್ತಿರುವನು, ಈ ರೀತಿಯಲ್ಲಿ ಆ ಭಗವಂತನು ತನ್ನ ಜ್ಞಾನದಿಂದಲೇ ಜ್ಞಾತನಾಗುವನು.

ಎಲೈ ಪುತ್ರನೆ, ಇಗೊ, ನೀನು ಕೇಳಿದ್ದೆಲ್ಲವನ್ನೂ ಹೇಳಿರುತ್ತೇನೆ, ಸಾಂಖ್ಯಯೋಗಗಳಲ್ಲಿಯೂ ಯಥಾರ್ಥರೀತಿಯಿಂದ ಇದನ್ನು ವರ್ಣಿಸಿರುತ್ತದೆ.

* * * * *

# ಭಾಗ – II

# ಶುಕಾನುಶಾಸನ

(231 ರಿಂದ 240)

## 16. ಕಾಲಸ್ವರೂಪ*

ಯುಧಿಷ್ಠಿರನು ಭೀಷ್ಮನನ್ನು ಕುರಿತು ಹೇಳಿದನೇನೆಂದರೆ: "ಎಲೈ ಕೌರವ ಶ್ರೇಷ್ಠನೆ, ಸರ್ವಭೂತಗಳ ಆದಿ ಏತರಿಂದಾಗುವದೆಂಬುದನ್ನೂ ಅವುಗಳ ಅಂತವು ಹೇಗೆ ಆಗುವದೆಂಬುದನ್ನೂ ತಿಳಿಯಬೇಕೆಂಬ ಇಚ್ಛೆಯುಂಟಾಗಿರುವದು. ಧ್ಯಾನ, ಕರ್ಮ– ಇವುಗಳ ತತ್ತ್ವವನ್ನೂ ಕಾಲಸ್ವರೂಪವನ್ನೂ ಒಂದೊಂದು ಯುಗದಲ್ಲಿಯೂ ಜನರ ಆಯುಃಪರಿಮಾಣವನ್ನೂ ತಿಳಿಯಬೇಕೆಂದಿರುತ್ತೇನೆ. ಲೋಕತತ್ತ್ವವನ್ನು ಸಂಪೂರ್ಣವಾಗಿ ತಿಳಿಯಬೇಕೆಂದಿರುತ್ತೇನೆ. ಪ್ರಾಣಿಗಳ ಗತ್ಯಾಗತಿಗಳೂ ಸೃಷ್ಟಿಪ್ರಲಯಗಳೂ ಏತರಿಂದಾಗುವವು? ಸತ್ಪುರುಷಶ್ರೇಷ್ಠನೆ, ನಮ್ಮಗಳನ್ನು ಅನುಗ್ರಹಿಸಬೇಕೆಂಬ ಮನಸ್ಸಿದ್ದರೆ, ನಾನು ಕೇಳುವ ಈ ಪ್ರಶ್ನೆಗೆ ಉತ್ತರವನ್ನು ಹೇಳುವವನಾಗು. ಪೂರ್ವದಲ್ಲಿ ನೀನು ವಿಪ್ರರ್ಷಿಯಾದ ಭರದ್ವಾಜನನ್ನು ಕುರಿತು ಭೃಗುವು ಹೇಳಿದ ಉತ್ತಮವಾದ ಪ್ರತ್ಯುತ್ತರವನ್ನು ಹೇಳಿರುವೆ. ಅದನ್ನು ಕೇಳಿ ನಮಗೆ ಪರಮಧರ್ಮಿಷ್ಠವಾದ ದಿವ್ಯಾಕಾರವಾದ ಬುದ್ಧಿಯುಂಟಾಗಿರುತ್ತದೆ. ಆದ್ದರಿಂದ ಈ ಪ್ರಶ್ನೆಯನ್ನು ಮತ್ತೆ ಕೇಳಿರುತ್ತೇನೆ, ದಯವಿಟ್ಟು ಹೇಳಬೇಕು." ಹೀಗೆಂದು ಕೇಳಿದ ಧರ್ಮರಾಯನನ್ನು ಕುರಿತು ಭೀಷ್ಮನಿಂತೆಂದನು: "ಈ ವಿಷಯದಲ್ಲಿ ವ್ಯಾಸಭಗವಂತನು ತನ್ನನ್ನು ವಿನಯದಿಂದ ಕೇಳಿದ ಪುತ್ರನಿಗೆ ಹೇಳಿದ್ದನ್ನೊಳಗೊಂಡ ಪುರಾತನೇತಿಹಾಸವನ್ನು ಹೇಳುವೆನು. ಸಕಲವೇದಗಳನ್ನೂ ಅಂಗಗಳಿಂದಲೂ ಉಪನಿಷತ್ತುಗಳೊಡನೆಯೂ ಅಧ್ಯಯನಮಾಡಿದ ಬಳಿಕ ವ್ಯಾಸಪುತ್ರನಾದ ಶುಕನು ಧರ್ಮಾರ್ಥಸಂಶಯಗಳನ್ನೆಲ್ಲ ಕತ್ತರಿಸುವ ಸಾಮರ್ಥ್ಯವುಳ್ಳ ಶ್ರೀಕೃಷ್ಣದ್ವೈಪಾಯನನನ್ನು ಕುರಿತು ಹೀಗೆಂದು ಕೇಳಿದನು.

'**ಶ್ರೀ ಶುಕನು** ಕೇಳಿದನೇನೆಂದರೆ: ಸಮಸ್ತಪ್ರಾಣಿವರ್ಗಗಳ ಕರ್ತೃವು ಯಾರು?

---

* ಸಂಪುಟ 39; ಸಂಚಿಕೆ 3; ನವೆಂಬರ್ 1969

ಕಾಲಜ್ಞಾನದ ವಿಷಯದಲ್ಲಿ ತಮ್ಮ ನಿಶ್ಚಯವೇನು? ಬ್ರಾಹ್ಮಣರ ಕೃತ್ಯವೇನು? ದಯವಿಟ್ಟು ಇದನ್ನು ತಾವು ಹೇಳಬೇಕು.'

ಇಂತೆಂದು ಕೇಳಿದ ಪುತ್ರನಿಗೆ ಅತೀತಾನಾಗತವೆಲ್ಲವನ್ನೂ ಬಲ್ಲ ಸರ್ವಜ್ಞನೂ ಸರ್ವಧರ್ಮವೇದಿತೃವೂ ಆದ ತಂದೆಯು ಇಂತೆಂದನು:

'ಎಲ್ಲಕ್ಕೂ ಮೊದಲು ಅನಾದಿಯೂ ಅನಂತವೂ ದಿವ್ಯವೂ ಅಜರವೂ ಧ್ರುವವೂ ಅವ್ಯಯವೂ ಅಪ್ರತರ್ಕ್ಯವೂ ಅವಿಜ್ಞೇಯವೂ ಆದ ಬ್ರಹ್ಮವೊಂದೇ ಇರುತ್ತದೆ. ಇನ್ನು ಕಾಲದ ವಿಚಾರ. ಹದಿನೈದು ನಿಮೇಷಗಳಿಗೆ ಒಂದು **ಕಾಷ್ಠೆ;** ಮೂವತ್ತು ಕಾಷ್ಠೆಗಳಾದರೆ ಒಂದು **ಕಲೆ;** ಮೂವತ್ತು ಕಲೆಗಳಾದರೆ ಒಂದು **ಮುಹೂರ್ತ**. ಎಂದರೆ ಕಲೆಯ ಹತ್ತನೆಯ ಭಾಗವೂ ಸೇರುತ್ತದೆ- ಹೀಗೆ ಮೂವತ್ತು ಕಲೆ ಮತ್ತು ಮೂರು ಕಾಷ್ಠಾ ಆದರೆ ಒಂದು ಮುಹೂರ್ತ. ಮೂವತ್ತು ಮುಹೂರ್ತಗಳಾದರೆ ಒಂದು ಅಹೋರಾತ್ರಿ- ಎಂದು ಮುನಿಗಳು ಹೇಳುವರು. ಮೂವತ್ತು ಅಹೋರಾತ್ರಗಳಾದರೆ ಒಂದು ಮಾಸವೂ ಹನ್ನೆರಡು ಮಾಸಗಳಿಗೆ ಒಂದು ಸಂವತ್ಸರವೂ ಆಗುತ್ತದೆ. ಸಂವತ್ಸರಕ್ಕೆ ಎರಡು ಅಯನಗಳೆನ್ನುವರು; ಅದಕ್ಕೆ ದಕ್ಷಿಣಾಯನ, ಉತ್ತರಾಯಣ - ಎಂದು ಸಂಜ್ಞೆ.

ಸೂರ್ಯನೇ ಮನುಷ್ಯರಿಗೆ ಅಹೋರಾತ್ರೆಗಳನ್ನು ವಿಂಗಡಿಸಿಕೊಟ್ಟಿರುವನು. ರಾತ್ರೆಯು ನಿದ್ರೆಗೆ, ಕೆಲಸಕ್ಕೆ ಹಗಲು. ಮನುಷ್ಯರ ಒಂದು ಮಾಸವು ಪಿತೃಗಳಿಗೆ ಒಂದು ಅಹೋರಾತ್ರವು. ಅವರಿಗೆ ಅಹಸ್ಸು ವ್ಯಾಪಾರಕ್ಕೂ ರಾತ್ರಿಯು ನಿದ್ರೆಗೂ ವಿನಿಯುಕ್ತವಾಗಿದೆ. ಮನುಷ್ಯರ ಒಂದು ವರ್ಷವು ದೇವತೆಗಳಿಗೆ ಒಂದು ಅಹೋರಾತ್ರವು. ಅವರಿಗೆ ಉತ್ತರಾಯಣ ಹಗಲು, ದಕ್ಷಿಣಾಯನವೇ ರಾತ್ರೆ.

"ಈಗ ಕೃತ, ತ್ರೇತಾ, ದ್ವಾಪರ, ಕಲಿ- ವರ್ಷಮಾನವನ್ನು ವಿಂಗಡವಾಗಿ ಹೇಳುವೆನು. ದೇವತೆಗಳ ನಾಲ್ಕು ಸಾವಿರ ವರ್ಷಗಳಾದರೆ ಒಂದು **ಕೃತುಯುಗ** ವಾಗುವದು. ಅದಕ್ಕೆ ಅಷ್ಟು (ನಾಲ್ಕು) ನೂರು ದಿವ್ಯವರ್ಷಗಳ ಸಂಧ್ಯೆಯಾಗುತ್ತದೆ; ಅಷ್ಟೇ ವರ್ಷಗಳ ಒಂದು ಸಂಧ್ಯಾಂಶವೂ ಇರುತ್ತದೆ. ಉಳಿದ ಮೂರು ಸಂಧ್ಯಾಸಂಧ್ಯಾಂಶಸಹಿತ ಯುಗಗಳಲ್ಲಿ ಈ ಸಹಸ್ರ ಮತ್ತು ಶತಗಳು (ನಾಲ್ಕು ಸಾವಿರ ಎಂಟುನೂರುಗಳು) ಕಾಲುಪಾಲು ಕಾಲುಪಾಲು ಕಡಿಮೆಯಾಗಿರುತ್ತವೆ.

ಈ ನಾಲ್ಕು ಯುಗಗಳು ಸನಾತನವಾಗಿ ಶಾಶ್ವತವಾಗಿರುವ ಲೋಕಗಳನ್ನು ಧರಿಸಿರುತ್ತವೆ, ಅಪ್ಪ. ಈ ಯುಗಾತ್ಮಕಕಾಲವು ಶಾಶ್ವತವಾದ ಬ್ರಹ್ಮದ ಸ್ವರೂಪವೇ ಎಂಬುದು ಬ್ರಹ್ಮಜ್ಞಾನಿಗಳ ಮತವು."

"ಕೃತಯುಗದಲ್ಲಿ ಸಕಲಧರ್ಮವೂ ಸತ್ಯವೂ ನಾಲ್ಕು ಪಾದಗಳಿಂದೊಡಗೂಡಿ ಪರಿಪೂರ್ಣವಾಗಿರುತ್ತದೆ. ಅಲ್ಲಿ ಅಧರ್ಮಕ್ಕೆ ಸ್ವಲ್ಪವೂ ಅವಕಾಶವಿರುವದಿಲ್ಲ. ಇತರ ಯುಗಗಳಲ್ಲಿ ಅಧರ್ಮವು ಬರುವದರಿಂದ ಧರ್ಮವು ಕಾಲುಕಾಲುಪಾದ ಕಡಿಮೆಯಾಗುತ್ತದೆ. ಕಳವು, ಸುಳ್ಳು, ಮೋಸ– ಇವುಗಳಿಂದ ಅಧರ್ಮವೂ ಹೆಚ್ಚುತ್ತಾಹೋಗುತ್ತದೆ, ಕೃತಯುಗದಲ್ಲಿ ಜನರು ನೀರೋಗರಾಗಿರುವರು. ಅವರ ಸರ್ವೇಷ್ಟಗಳೂ ಸಿದ್ಧವಾಗಿರುತ್ತವೆ, ಅವರಿಗೆ ನಾನೂರುವರ್ಷ ಆಯುಸ್ಸು. ತ್ರೇತಾಯುಗದಲ್ಲಿಯೂ ಮಿಕ್ಕ ಯುಗಗಳಲ್ಲಿಯೂ ವಯಸ್ಸು ಕಾಲುಕಾಲುಪಾಲು ಕಡಿಮೆಯಾಗುವದು. ವೇದಾಧ್ಯಯನ, ಆಯುಸ್ಸು, ಇಷ್ಟಕಾಮ್ಯಗಳ ಸಿದ್ಧಿ – ಇವೆಲ್ಲವೂ ಕಡಿಮೆಯಾಗುತ್ತಿರುವವು ಎಂದು ಹೇಳುತ್ತಾರೆ.

ಕೃತಯುಗದಲ್ಲಿ, ತ್ರೇತೆಯಲ್ಲಿ, ದ್ವಾಪರದಲ್ಲಿ ಮತ್ತು ಕಲಿಯುಗದಲ್ಲಿ ಯುಗಗಳು ಹ್ರಾಸವಾಗುವಂತೆಯೇ ಧರ್ಮಗಳೂ ಬೇರೆಬೇರೆಯಾಗಿರುತ್ತವೆ. ಕೃತಯುಗದಲ್ಲಿ **ತಪಸ್ಸೇ** ಹೆಚ್ಚಿನದು, ತ್ರೇತೆಯಲ್ಲಿ **ಜ್ಞಾನವೇ** ಉತ್ತಮ, ದ್ವಾಪರದಲ್ಲಿ **ಯಜ್ಞವೇ** ಉತ್ತಮ, ಕಲಿಯುಗದಲ್ಲಿ **ದಾನ**ವೊಂದೇ ಹೆಚ್ಚಿನದು.

ಹೀಗೆ ದೇವತೆಗಳಿಗೆ ಹನ್ನೆರಡುಸಾವಿರ ವರ್ಷಗಳ ಚತುರ್ಯುಗ ಎಂದು ಬಲ್ಲವರು ಹೇಳುತ್ತಾರೆ. ಒಂದು ಸಾವಿರ ಚತುರ್ಯುಗವಾದರೆ ಬ್ರಹ್ಮನಿಗೆ ಒಂದು ಹಗಲಾಗುವದು; ರಾತ್ರಿಯೂ ಅಷ್ಟೇ ಕಾಲ. ಬ್ರಹ್ಮನು ತನ್ನ ದಿವಸದ ಆರಂಭದಲ್ಲಿ ವಿಶ್ವಸೃಷ್ಟಿಯನ್ನು ಮಾಡುತ್ತಾನೆ. ರಾತ್ರಿಯಲ್ಲಿ ಪ್ರಲಯವಾಗುವದು. ಆಗ ಆತನು ಧ್ಯಾನನಿದ್ರೆಯಲ್ಲಿದ್ದು ಅದರ ಕೊನೆಯಲ್ಲಿ ಎಚ್ಚರುತ್ತಾನೆ. ಹೀಗೆ ಸಾವಿರ ಚತುರ್ಯುಗಗಳು ಬ್ರಹ್ಮನಿಗೆ ಹಗಲೆಂದೂ ರಾತ್ರೆಯೂ ಅಂಥ ಸಾವಿರ ಯುಗಗಳೆಂದೂ ಯಾರೂ ತಿಳಿದಿರುವರೋ ಆ ಜನರೇ ಅಹೋರಾತ್ರರೂಪಕಾಲ ತತ್ತ್ವವನ್ನು ತಿಳಿದವರು. ಬ್ರಹ್ಮನು ಎಚ್ಚತ್ತಾಗ ತನ್ನ ಅಕ್ಷಯರೂಪವನ್ನು ವಿಕಾರರೂಪಕ್ಕೆ ತರುತ್ತಾನೆ: ಮಹತ್ತತ್ತ್ವವನ್ನು ಸೃಷ್ಟಿಮಾಡುತ್ತಾನೆ. ಅದರಿಂದ ವ್ಯಕ್ತಾವ್ಯಕ್ತವಾದ ಮನಸ್ಸನ್ನು ಸೃಷ್ಟಿಸುತ್ತಾನೆ."

* * * * *

## 17. ಸೃಷ್ಟಿಯೂ ಯುಗಧರ್ಮಗಳೂ*

**ವ್ಯಾಸರಿಂತೆಂದರು:** ತೇಜೋಮಯವಾಗಿರುವ ಬ್ರಹ್ಮವು ಎಲ್ಲಕ್ಕೂ ಬೀಜವು, ಅದರಿಂದಲೇ ಎಲ್ಲಾ ಜಗತ್ತೂ ಉಂಟಾಗಿದೆ. ಬ್ರಹ್ಮರೂಪವಾಗಿರುವ ಒಂದರಿಂದಲೇ ಸ್ಥಾವರಜಂಗಮಾತ್ಮಕ ದ್ವೈತವು ಉಂಟಾಗಿರುತ್ತದೆ. ತನ್ನ ಹಗಲಿನ ಪ್ರಾರಂಭದಲ್ಲಿ ಬ್ರಹ್ಮನು ಎಚ್ಚತ್ತು ಅವಿದ್ಯೆಯಿಂದ ಜಗತ್ತನ್ನು ಸೃಷ್ಟಿಸುವನು. ಎಲ್ಲಕ್ಕೂ ಮೊದಲು ಮಹತ್ತತ್ತ್ವವು, ಬಳಿಕ ವ್ಯಕ್ತಾವ್ಯಕ್ತರೂಪವಾಗಿ ಪ್ರಾರ್ಥನಾ ಸಂಶಯರೂಪವೃತ್ತಿಗಳುಳ್ಳ ಈ ಮನಸ್ಸು, ಎಲ್ಲವನ್ನೂ ಮುಸುಕಿಕೊಂಡು ದೂರಗಾಮಿಯಾಗಿ ಬಹುಪ್ರಕಾರ ವಾಗುವ ಶಕ್ತಿಯುಳ್ಳದ್ದು; ಇದು (ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ – ಎಂಬ) ಏಳು ಮಾನಸ ಋಷಿಗಳನ್ನು ಸೃಷ್ಟಿಸಿರುತ್ತದೆ.

ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ಪ್ರೇರಿತವಾದ ಈ ಮನಸ್ಸೇ ಬಹುಪ್ರಕಾರ ವಾಗಿ ವಿಕಾರವಾಗುತ್ತದೆ. ಅದರಿಂದ ಆಕಾಶವುಂಟಾಗುತ್ತದೆ; ಅದಕ್ಕೆ **ಶಬ್ದವೇ** ಗುಣವು. ಆಕಾಶವು ವಿಕಾರವಾಗಲು ಅದರಿಂದ ಬಗೆಬಗೆಯ ವಾಸನೆಗಳುಳ್ಳ ಶುಚಿಯಾಗಿರುವ ಬಲಿಷ್ಠವಾದ **ವಾಯುವು** ಉಂಟಾಗುತ್ತದೆ. ವಿಕೃತವಾದ ಆ ವಾಯುವಿನಿಂದ ಥಳಗುಟ್ಟುವ **ಜ್ಯೋತಿ**ಯುಂಟಾಗುವದು. ಅದು ಕಾಂತಿಯುಕ್ತ ವಾಗಿರುತ್ತದೆ. ಅದಕ್ಕೆ **ಸ್ಪರ್ಶ**ವೇ ಗುಣವು. ಆ ಜ್ಯೋತಿಯು ವಿಕಾರವಾಗಲು ಅದರಿಂದ ರಸಾತ್ಮಕವಾದ **ಅಪ್ಪು** ಉಂಟಾಗುವದು. ಅಪ್ಪಿನಿಂದ ಗಂಧವುಳ್ಳ **ಪೃಥ್ವಿ**ಯು ಹುಟ್ಟುತ್ತದೆ. ಈ ರೀತಿ ಎಲ್ಲಾ ಭೂತಗಳ ಸೃಷ್ಟಿಯನ್ನೂ ಹೇಳಿದ್ದಾಯಿತು.

ಹಿಂದುಹಿಂದಿನ ಒಂದೊಂದು ಭೂತದ ಗುಣಗಳು ಮುಂದುಮುಂದಿನ ಭೂತದಲ್ಲಿ ಸೇರುವವು. ಅವುಗಳಲ್ಲಿ ಯಾವಯಾವ ಭೂತವು ಯಾವಯಾವ ರೂಪದಿಂದ ಎಷ್ಟೆಷ್ಟು ಕಾಲವಿರುವದೋ ಅಲ್ಲಿಯವರೆಗೂ ಅಷ್ಟಷ್ಟು ಅದರದರ ಗುಣವೆನಿಸುತ್ತವೆ. ಅಪ್ಪಿನಲ್ಲಿ ವಾಸನೆಯನ್ನು ಕಂಡು ಯಾರಾದರೂ ದಡ್ಡತನದಿಂದ ಅದರದೇ ಎಂದರೂ ನಿಜವಾಗಿ ಅದು **ಪೃಥಿವಿ**ಯ ಗುಣವೇ ಎಂದರಿಯಬೇಕು. ಅದೇ ಅಪ್ಪಿನಲ್ಲಿಯೂ ವಾಯುವಿನಲ್ಲಿಯೂ ಬಂದು ಸೇರಿಕೊಂಡಿರುತ್ತದೆ.

---

* ಸಂಪುಟ 39; ಸಂಚಿಕೆ 4; ಡಿಸೆಂಬರ್ 1969

ಈ ಸಪ್ತವಿಧವಾಗಿರುವ ಮಹದಾದಿಗಳು ನಾನಾವೀರ್ಯವುಳ್ಳವವಾಗಿದ್ದರೂ ಒಂದೊಂದೇ ಸೃಷ್ಟಿಸಲಾರದೆ ಇರುವದರಿಂದ ಎಲ್ಲವೂ ಒಟ್ಟುಗೂಡಿ ಒಂದರೊಡನೊಂದು ಸೇರಿಕೊಂಡು ಶರೀರವನ್ನು ಆಶ್ರಯಿಸಿಕೊಂಡದ್ದರಿಂದ ಪುರುಷನೆನಿಸುತ್ತದೆ. ಎಲ್ಲವೂ ಆಶ್ರಯಿಸಿಕೊಂಡಿರುವದರಿಂದ ಇದು **ಶರೀರ**ವೆನಿಸಿರುತ್ತದೆ. ಇದು ಮೂರ್ತಿಮಂತವಾಗಿರುತ್ತದೆ, (ಪಂಚಭೂತಗಳು, ಇಂದ್ರಿಯಗಳು, ಮನಸ್ಸು – ಎಂದು ಹದಿನಾರು ತತ್ತ್ವಗಳ ಸೇರುವೆಯಿಂದಾಗಿರುತ್ತದೆ.) ಅದನ್ನೇ ಸರ್ವಮಹಾಭೂತಗಳೂ ಕರ್ಮದೊಡನೆ ಪ್ರವೇಶಿಸಿರುತ್ತವೆ.

ಸರ್ವಭೂತಗಳನ್ನೂ ಸೃಷ್ಟಿಸಲು ತಪಸ್ಸುಮಾಡುವುದಕ್ಕಾಗಿ ಭೂತಗಳ ಆದಿಕರ್ತನಾದ ಬ್ರಹ್ಮನು ಸಮಷ್ಟಿಶರೀರದೊಳಗೆ ಇರುತ್ತಾನೆ; ಆತನನ್ನೇ **ಪ್ರಜಾಪತಿ** ಎನ್ನುತ್ತಾರೆ. ಆತನೇ ಸ್ಥಾವರಜಂಗಮಭೂತಗಳನ್ನು ಸೃಷ್ಟಿಸುತ್ತಾನೆ. ದೇವತೆಗಳು, ಋಷಿಗಳು, ಪಿತೃಗಳು, ಮಾನವರು, ಲೋಕಗಳು, ನದಿಗಳು, ಸಮುದ್ರಗಳು, ದಿಕ್ಕುಗಳು, ಬೆಟ್ಟಗಳು, ವನಸ್ಪತಿಗಳು, ನರರು, ಕಿನ್ನರರು, ರಾಕ್ಷಸರು, ಪಕ್ಷಿಗಳು, ಪಶುಮೃಗಗಳು, ಉರಗಗಳು, ಅವ್ಯಯವ್ಯಯರೂಪವಾದ ಪದಾರ್ಥಗಳು, ಸ್ಥಾವರಜಂಗಮಗಳು– ಇವೆಲ್ಲವನ್ನೂ ಆತನೇ ಸೃಷ್ಟಿಸುವನು. ಅವುಗಳಿಗೆ ಹಿಂದಿನ ಸೃಷ್ಟಿಯಲ್ಲಿ ಯಾವಯಾವ ಕರ್ಮಗಳಿದ್ದವೋ ಮತ್ತೆ ಮತ್ತೆ ಸೃಷ್ಟಿಯಾದಮೇಲೂ ಅವು ಆಯಾ ಕರ್ಮಗಳನ್ನೇ ಹೊಂದುವವು. ಹಿಂಸ್ರಪ್ರಾಣಿಗಳು, ಅಹಿಂಸ್ರಪ್ರಾಣಿಗಳು, ಮೃದುಕ್ರೂರಪ್ರಾಣಿಗಳು, ಧರ್ಮಾಧರ್ಮಗಳು, ಋತಅನೃತ– ಇವೆಲ್ಲವೂ ಆಯಾ ಭಾವನೆಯಿಂದ ಭಾವಿತವಾಗಿ ಆಯಾ ಸ್ವಭಾವವನ್ನೇ ಹೊಂದುತ್ತವೆ; ಆದ್ದರಿಂದ ಆಯಾ ಸ್ವಭಾವವು ಆಯಾ ಪ್ರಾಣಿಗೆ ಒಗ್ಗುತ್ತದೆ. ಮಹಾಭೂತಗಳಲ್ಲಿಯೂ ಇಂದ್ರಿಯಾರ್ಥ ಗಳಲ್ಲಿಯೂ ದೇವತೆಗಳೇ ಮುಂತಾದವರ ಆಕೃತಿಗಳಲ್ಲಿಯೂ ನಾನಾತ್ವವನ್ನೂ ಪ್ರಾಣಿಗಳ ವಿನಿಯೋಗವನ್ನೂ ಆ ಪ್ರಜಾಪತಿಯೇ ಮಾಡುತ್ತಾನೆ. ಕೆಲವು ಜನರು ಪೌರುಷವೇ ಕರ್ಮಸಿದ್ಧಿಗೆ ಹೇತುವೆನ್ನುವರು. ಇನ್ನು ಕೆಲವರು ವಿಪ್ರರು ಅದೃಷ್ಟವೇ ಹೇತುವೆನ್ನುವರು; ಭೂತಚಿಂತಕರಾದವರು ಸ್ವಭಾವವೇ ಕಾರಣವೆನ್ನುವರು. ಈ ಮೂರೂ ಒಂದನ್ನು ಬಿಟ್ಟು ಒಂದಿಲ್ಲ, ಇವುಗಳನ್ನು ವಿವೇಚಿಸಿ ಬೇರ್ಪಡಿಸುವದು ಸರಿಯಲ್ಲ– ಎಂದು ಕೆಲವರು. ಕರ್ಮವಾದಿಗಳು ಇದು ಹೀಗೇ ಸರಿ ಎಂದಾಗಲಿ, ಅಲ್ಲವೆಂದಾಗಲಿ, ಎರಡೂ ಸೇರಿರಬೇಕೆಂದಾಗಲಿ

ಎರಡೂ ಅಲ್ಲವೆಂದಾಗಲಿ ನಿಶ್ಚಿಯಿಸಿ ಹೇಳುವದಕ್ಕೆ ಆಗುವದಿಲ್ಲ– ಎನ್ನುತ್ತಿರುವರು. ಸತ್ತ್ವದಲ್ಲಿಯೇ ನೆಲೆನಿಂತಿರುವ ಸಮದರ್ಶಿಗಳು ಬ್ರಹ್ಮವೇ ಕಾರಣವೆನ್ನುವರು.

ತಪಸ್ಸೇ ಜೀವನಿಗೆ ನಿಃಶ್ರೇಯಸಕಾರಣವಾಗಿರುತ್ತದೆ; ಅದಕ್ಕೆ ಶಮವೂ ದಮವೂ ಮೂಲವು. ಆ ತಪಸ್ಸಿನಿಂದ ಯಾವಯಾವ ಕರ್ಮಗಳನ್ನು ಮನಸ್ಸಿನಲ್ಲಿ ಬೇಕೆನ್ನುತ್ತಾನೋ ಅವನ್ನೆಲ್ಲ ಪಡೆದುಕೊಳ್ಳುತ್ತಾನೆ. ತಪಸ್ಸಿನಿಂದ ಜಗತ್ತೆಲ್ಲವನ್ನೂ ಸೃಷ್ಟಿಸುವ ಪರಮಾರ್ಥವನ್ನು– ಮನುಷ್ಯನು ಪಡೆದುಕೊಳ್ಳುತ್ತಾನೆ; ತಾನೂ ಅದೇ ಆಗಿ ಸರ್ವಭೂತಗಳಿಗೂ ಪ್ರಭುವಾಗುತ್ತಾನೆ. ಋಷಿಗಳ ತಪಸ್ಸಿನಿಂದ ಹಗಲೂ ಇರುಳೂ ವೇದಗಳನ್ನು ಅಧ್ಯಯನ ಮಾಡಿದರು. ಅನಾದ್ಯನಂತವಾದ ವೇದವಾಕ್ಕನ್ನು ತಪಃಶಕ್ತಿಯಿಂದಲೂ ಉಚ್ಚರಿಸಿದರು. ಋಷಿಗಳ ಹೆಸರುಗಳು, ವೇದಗಳಲ್ಲಿ ಹೇಳಿರುವ ಸೃಷ್ಟಿಗಳು, ಪ್ರಾಣಿಗಳ ನಾಮರೂಪ, ಅವುಗಳ ಕರ್ಮಗಳ ಪ್ರವೃತ್ತಿ– ಇವೆಲ್ಲವನ್ನೂ ಆ ಈಶ್ವರನು ವೇದಶಬ್ದಗಳಿಂದಲೇ ಸೃಷ್ಟಿಸುತ್ತಿರುವನು. ಋಷಿಗಳ ನಾಮಗಳೂ ಸೃಷ್ಟಿಗಳಲ್ಲಿರುವ ಸೃಷ್ಟಿಗಳೂ ರಾತ್ರಿಯ ಅಂತದಲ್ಲಿ ಹೊಸ ಸೃಷ್ಟಿಯು ಪ್ರಾರಂಭವಾಗಲು ಹುಟ್ಟಿಸುವ ಪದಾರ್ಥಗಳ ನಾಮಗಳನ್ನು ಆ ಬ್ರಹ್ಮನು ಗೊತ್ತುಪಡಿಸುವನು. ಬೇರೆಬೇರೆ ನಾಮಗಳು, ತಪಸ್ಸು, ಕರ್ಮ, ಯಜ್ಞ– ಇವೆಲ್ಲ ಲೌಕಿಕಸಿದ್ಧಿಗಳು.

ಆತ್ಮನ ಸಿದ್ಧಿಯಾದರೊ ಹತ್ತು ಉಪಾಯಗಳಿಂದ ಆಗುವದೆಂದು ವೇದಗಳಲ್ಲಿ ಹೇಳಿರುತ್ತದೆ. ವೇದಗಳಲ್ಲಿ ವೇದರಾಶಿಗಳ ಮೂಲಕ ಗಹನವಾದ ಬ್ರಹ್ಮವನ್ನು ಹೇಳಿದೆಯಷ್ಟೆ? ವೇದಾಂತಗಳಲ್ಲಿ ಸೃಷ್ಟರೂಪವಾಗಿ ಯಾವದನ್ನು ಸ್ಪಷ್ಟವಾಗಿ ಹೇಳಿದೆಯೋ ಅದು (ಸ್ವಾಧ್ಯಾಯ, ಗಾರ್ಹಸ್ಥ್ಯ, ಸಂಧ್ಯಾವಂದನಾದಿ, ಕೃಚ್ಛ್ರಚಾಂದ್ರಾಯಣಾದಿ, ಪೂರ್ತಕರ್ಮ, ಯೋಗ, ದಾನ, ಗುರುಶುಶ್ರೂಷೆ, ಸಮಾಧಿ– ಎಂಬ) ಕ್ರಮಯೋಗದಿಂದ ಲಕ್ಷಿತವಾಗಿರುತ್ತದೆ, ಜೀವರಿಗೆ ದ್ವಂದ್ವಗಳಿಂದೊಡಗೂಡಿದ ಈ ಪೃಥಗ್ಭಾವವು ಕರ್ಮದಿಂದ ಆಗಿರುತ್ತದೆ; ಅದನ್ನು ಆತ್ಮಸಿದ್ಧಿಯ ವಿಜ್ಞಾನದಿಂದ ತೊಲಗಿಸಿಕೊಳ್ಳುತ್ತಾನೆ.

ಪರಬ್ರಹ್ಮ, ಶಬ್ದಬ್ರಹ್ಮ– ಎಂದು ಎರಡು ಬ್ರಹ್ಮಗಳನ್ನು ತಿಳಿದುಕೊಳ್ಳಬೇಕು. ಯಾವನು ಶಬ್ದಬ್ರಹ್ಮದಲ್ಲಿ ತೀರ್ಣನಾದರೆ, ಪರಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ.

ಕ್ಷತ್ರಿಯರು ಹಿಂಸಾಪ್ರಧಾನವಾದ ಯಜ್ಞವುಳ್ಳವರು, ವೈಶ್ಯರು ಹವಿರ್ಯಜ್ಞವನ್ನು ಮಾಡುವರು, ಶೂದ್ರರು ಪರಿಚರ್ಯಯಜ್ಞದವರು, ಬ್ರಾಹ್ಮಣರು ತಪೋಯಜ್ಞದವರು, ಈ ಯಜ್ಞವಿಧಾನವು ತ್ರೇತಾಯುಗದಲ್ಲಿರುತ್ತದೆ, ಕೃತಯುಗದಲ್ಲಿರುವದಿಲ್ಲ, ದ್ವಾಪರದಲ್ಲಿಯೂ ಕಲಿಯುಗದಲ್ಲಿಯೂ ಯಜ್ಞಗಳು ಕ್ಷೀಣವಾಗುವವು. ಕ್ರತುಯುಗದಲ್ಲಿ ಋಕ್ಕುಗಳು, ಸಾಮಗಳು, ಯಜಸ್ಸುಗಳು, ಕಾಮೇಷ್ಟಿಗಳು– ಇವೆಲ್ಲ ಭಿನ್ನವೆಂದು ತಿಳಿದು ಕೇವಲ ಜ್ಞಾನರೂಪ ತಪಸ್ಸಿನಲ್ಲಿಯೇ ಇದ್ದುಕೊಂಡಿರುವರು. ತ್ರೇತಾಯುಗದಲ್ಲಿ ಮಹಾಬಲಶಾಲಿಗಳಾದ ರಾಜರುಗಳು ಪ್ರಕಟರಾಗಿ ಸ್ಥಾವರಜಂಗಮಗಳನ್ನೆಲ್ಲ ನಿಯಮದಲ್ಲಿಟ್ಟಿರುವರು. ತ್ರೇತಾಯುಗದಲ್ಲಿ ವೇದ, ಯಜ್ಞ, ವರ್ಣಾಶ್ರಮಧರ್ಮಗಳು ವ್ಯವಸ್ಥಿತವಾಗಿದ್ದವು; ಆದರೆ ದ್ವಾಪರದಲ್ಲಿ ಆಯುಸ್ಸು ಕಡಿಮೆಯಾಗಿ ಇವುಗಳು ಕಡಿಮೆಯಾಗುವವು. ಕಲಿಯುಗದಲ್ಲಿ ವೇದಗಳು ಅಲ್ಲಲ್ಲಿ ಕಾಣುವವು. ಕಾಣದೆಯೂ ಹೋಗುವವು, ಅಧರ್ಮದಿಂದ ಪೀಡಿತವಾಗಿ ಯಜ್ಞಗಳು ಲೋಪವಾಗುವವು. ಕೃತಯುಗದಲ್ಲಿ ಧರ್ಮವು ಜಿತೇಂದ್ರಿಯರಾದ ತಪಸ್ವಿಗಳಾದ ಅಧ್ಯಯನಶೀಲರಾದ ಬ್ರಾಹ್ಮಣರಲ್ಲಿರುತ್ತದೆ. ಮಿಕ್ಕ ಯುಗಗಳಲ್ಲಿ ವೇದವಾದಗಳೂ ಸ್ವಧರ್ಮನಿಷ್ಠೆಯೂ ಕಡಿಮೆಯಾಗುವವು.

ಮಳೆಗಾಲದಲ್ಲಿ ಮಳೆಯಾಗಲು ಸ್ಥಾವರಜಂಗಮಗಳು ಹೇಗೆ ಹೆಚ್ಚುವವೋ, ಹಾಗೆಯೇ ಧರ್ಮಗಳು ಯುಗಯುಗಗಳಲ್ಲಿ ಹೆಚ್ಚುವವು ಕಡಿಮೆಯಾಗುವವು. ಹೇಗೆ ಋತುಗಳಲ್ಲಿ ಆಯಾ ಋತುವಿಗೆ ತಕ್ಕಂತೆ ಆಯಾ ಋತುಚಿಹ್ನೆಗಳೇ ಕಾಣಿಸಿಕೊಳ್ಳುವವೋ ಹಾಗೆಯೇ ಬ್ರಹ್ಮದ ಹಗಲುರಾತ್ರೆಗಳಲ್ಲಿ ಇವುಗಳು ಮಾರ್ಪಡುತ್ತಿರುವವು.

ಕಾಲಗಳು ಭಿನ್ನಭಿನ್ನವಾಗಿ ಅನಾತ್ಮವಂತವಾಗಿರುವವು– ಎಂಬುದನ್ನು ನಿನಗೆ ಮೊದಲೇ ಹೇಳಿರುತ್ತೇನೆ. ಕಾಲವೇ ಪ್ರಾಣಿಗಳನ್ನು ಹಡೆಯುತ್ತದೆ, ಅದೇ ಅವುಗಳನ್ನು ಸಂಹರಿಸುತ್ತದೆ. ಕಾಲವೇ ಭೂತಗಳ ಉತ್ಪತ್ತಿಗೂ ಪ್ರಲಯಕ್ಕೂ ಕಾರಣವಾಗಿರುತ್ತದೆ. ಪ್ರಾಣಿಗಳು ಸ್ವಭಾವದಿಂದಲೇ ದ್ವಂದ್ವಯುಕ್ತವಾಗಿರುತ್ತವೆ. ಪುತ್ರನೆ, ಸೃಷ್ಟಿ, ಕಾಲ, ಕ್ರಿಯೆ, ವೇದ, ಕರ್ತೃ, ಕಾರ್ಯ, ಕ್ರಿಯಾಫಲ– ಇವುಗಳನ್ನು ನೀನು ಕೇಳಿದಂತೆ ಹೇಳಿರುತ್ತೇನೆ.

* * * * *

# 18. ಪ್ರಲಯ ವರ್ಣನೆ

ಬಳಿಕ ವ್ಯಾಸನಿಂತೆಂದನು: ಬ್ರಹ್ಮನ ಹಗಲು ಕಳೆದು ರಾತ್ರಿಯು ಬರಲಾಗಿ ಮೊದಲು ಹೇಗೆ ಲಯವಾಗುವದೆಂಬುದನ್ನು ಹೇಳುವೆನು, ಕೇಳು. ವಿಶ್ವವನ್ನೆಲ್ಲ ಈಶ್ವರನು ಸೂಕ್ಷ್ಮತರವಾಗಿ ಮಾಡಿಕೊಂಡು ತನ್ನೊಳಗೆ ಹೇಗೆ ಸೇರಿಸಿಕೊಳ್ಳುವ ನೆಂಬುದನ್ನು ಹೇಳುವೆನು.

ಆಕಾಶದ ಮೇಲುಗಡೆಯಲ್ಲಿ ಸೂರ್ಯನು ಮತ್ತು ಕೆಳಗಡೆಯಲ್ಲಿ ಅಗ್ನಿಯ ಸಪ್ತಜ್ವಾಲೆಗಳೂ ತಪಿಸುವದಕ್ಕೆ ಮೊದಲಾಗುವವು. ಆಗ ಈ ಜಗತ್ತೆಲ್ಲವೂ ಅದರ ಜ್ವಾಲೆಗಳಿಂದ ಝುಗಝುಗನೆ ಉರಿಯತೊಡಗುವದು. ಭೂಮಿಯ ಮೇಲಿರುವ ಸ್ಥಾವರಜಂಗಮಪ್ರಾಣಿಗಳು ನಾಶವಾಗಿ ಎಲ್ಲವೂ ಪೃಥ್ವಿಯೇ ಆಗಿಬಿಡುವದು. ಬಳಿಕ ಸ್ಥಾವರಜಂಗಮವೆಲ್ಲವೂ ಪ್ರಲಯವಾಗಲು ಮರಗಳಿಲ್ಲದೆ, ಪ್ರಾಣವಿಲ್ಲದೆ ಭೂಮಿಯು ಆಮೆಯ ಬೆನ್ನಿನಂತೆ ಕಾಣುವದು. ಭೂಮಿಯ ಗುಣವಾದ ಗಂಧವನ್ನು ಅಪ್ಪು ಯಾವಾಗ ಒಳಗೊಳ್ಳುವದೋ ಗಂಧಹೀನವಾದ ಪೃಥ್ವಿಯು ಪ್ರಲಯವಾಗುವದು. ಎಲ್ಲವೂ ಅಮ್ಮಯವಾಗಿ ಶಬ್ದವನ್ನು ಮಾಡುತ್ತ ತೆರೆಗಳಿಂದ ಕೂಡಿದ ನೀರೇ ಎಲ್ಲೆಲ್ಲಿಯೂ ಇದ್ದುಕೊಂಡಿರುವದು. ಅಪ್ಪು, ಈ ಅಪ್ಪಿನ ಗುಣವಾದ ರಸವು ತೇಜಸ್ಸನ್ನು ಯಾವಾಗ ಸೇರಿಕೊಳ್ಳುವದೋ, ಆಗ ರಸಗುಣವನ್ನು ಕಳೆದುಕೊಂಡು ತೇಜಸ್ಸಿನಲ್ಲಿ ಲಯಹೊಂದುವದು, ಸೂರ್ಯನನ್ನು ಅಗ್ನಿಯ ಕುಡಿಗಳೇ ತಮ್ಮೊಳಗೆ ಸೇರಿಸಿಕೊಳ್ಳಲಾಗಿ ಆಕಾಶವೆಲ್ಲವೂ ಅಗ್ನಿಯ ಜ್ವಾಲೆಗಳಿಂದ ಝುಗಝುಗಿಸಿ ಉರಿಯುವದು. ಜ್ಯೋತಿಯ ಗುಣವಾದ ರೂಪವನ್ನು ಯಾವಾಗ ವಾಯು ತನ್ನೊಳಗೆ ಸೇರಿಸಿಕೊಳ್ಳುವದೋ ಜ್ಯೋತಿಯು ಆರಿಹೋಗುವದು; ಮಹಾವಾಯುವು ಭರ್ರನೆ ಬೀಸುತ್ತಿರುವದು. ಅದು ಸುಯ್ – ಎಂದು ಮಹಾಶಬ್ದದಿಂದ ಕೆಳಗೆ, ಮೇಲೆ, ಅಡ್ಡಲಾಗಿ ಬೀಸುತ್ತಿರುವದು. ಆ ವಾಯುವಿನ ಗುಣವಾದ ಸ್ಪರ್ಶವನ್ನು ಆಕಾಶವು ಯಾವಾಗ ನುಂಗಿಬಿಡುವದೋ ಆಗ ವಾಯುವು ಶಾಂತವಾಗುವದು; ಆಕಾಶವೊಂದೇ ಶಬ್ದಗುಣದಿಂದ ಕೂಡಿ

---

* ಸಂಪುಟ 39; ಸಂಚಿಕೆ 5; ಜನವರಿ 1970

ನಿಂತಿರುವದು. ರೂಪ, ರಸ, ಸ್ಪರ್ಶ, ಗಂಧ– ಯಾವದೂ ಇಲ್ಲದೆ ಸರ್ವಲೋಕದಲ್ಲಿಯೂ ಪ್ರತಿಧ್ವನಿಯಿಂದ ಕೂಡಿ ಆಕಾಶವೊಂದೇ ಉಳಿದುಕೊಂಡಿರುವದು. ಆಕಾಶದ ಗುಣವಾದ ಶಬ್ದವನ್ನು ಅಭಿವ್ಯಕ್ತವಾಗಿರುವ ಮನಸ್ತತ್ತ್ವವು, ಆ ವ್ಯಕ್ತಮನಸ್ಸನ್ನು ಅವ್ಯಕ್ತವೂ ತನ್ನೊಳಗೆ ಸೇರಿಸಿಕೊಳ್ಳುವದು. ಇದಕ್ಕೆ **ಬ್ರಾಹ್ಮಪ್ರಲಯ**ವೆಂದು ಹೆಸರು.

ಆ ಅವ್ಯಕ್ತಮನಸ್ಸನ್ನು ಕಾಲಾನುಕಾಲಕ್ಕೆ **ಸಂಕಲ್ಪ**ವು ತನ್ನ ವಶಕ್ಕೆ ತೆಗೆದುಕೊಳ್ಳುವದು; ಸಂಕಲ್ಪವನ್ನು **ಚಿತ್ತವು** ನುಂಗುವದು, ಅದೇ **ಅನುತ್ತಮ ಜ್ಞಾನವು. ಕಾಲವು** ಆ ವಿಜ್ಞಾನವನ್ನು ನುಂಗಿಬಿಡುವದು. ಕಾಲವನ್ನೂ **ಬಲವು** ತನ್ನ ಅಧೀನದಲ್ಲಿಟ್ಟುಕೊಳ್ಳುವದು. ಬಲವನ್ನು **ಮಹಾಕಾಲವು** ನುಂಗುತ್ತದೆ. ಆ ಕಾಲವನ್ನು ಸರ್ವಜ್ಞವಾದ ಪರಬ್ರಹ್ಮವು ಅಳವಡಿಸಿಕೊಳ್ಳುವದು, ಆಕಾಶವು ತನ್ನ ಗುಣವಾದ ಶಬ್ದವನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವಂತೆ, ಆ ಮಹಾಕಾಲವನ್ನೂ ತನ್ನ ವಶದಲ್ಲಿಟ್ಟುಕೊಳ್ಳುವದು. ಅದೇ ಅವ್ಯಕ್ತವೂ ಶಾಶ್ವತವೂ ಅನುತ್ತಮವೂ ಆದ ಪರಬ್ರಹ್ಮವು. ಹೀಗೆ ಎಲ್ಲಾ ಭೂತಗಳು ಪ್ರಲಯವಾಗಿ ಪರಬ್ರಹ್ಮವೇ ಆಗಿಬಿಡುವವು.

ಈ ರೀತಿಯಲ್ಲಿ ಎಲ್ಲವನ್ನೂ ಸರಿಯಾಗಿ ನಿಸ್ಸಂಶಯವಾಗಿ ಹೇಳಿರುತ್ತೇನೆ. ಇದೆಲ್ಲವೂ ವಿದ್ಯಾಮಯವೆಂಬುದನ್ನು ಕಂಡುಕೊಂಡು ಪರಮಾತ್ಮಸ್ವರೂಪರಾದ ಯೋಗಿಗಳು ಬ್ರಹ್ಮದಲ್ಲಿಯೇ ನೆಲೆನಿಲ್ಲುವರು.

ಈ ರೀತಿಯಲ್ಲಿ ಪ್ರಪಂಚವು ಅವ್ಯಕ್ತವಾದ ಪರಬ್ರಹ್ಮದಲ್ಲಿ ಮತ್ತೆ ಮತ್ತೆ ಲಯವಾಗಿ ಮತ್ತೆ ಮತ್ತೆ ಸೃಷ್ಟಿಯಾಗುತ್ತಿರುವದು. ಯುಗಸಾಹಸ್ರಗಳ ಆದಿಯಲ್ಲಿ ಬ್ರಹ್ಮನ ಅಹೋರಾತ್ರಗಳಾಗುತ್ತಿರುವವು.

* * * * *

# 19. ಬ್ರಾಹ್ಮಣರ ಕರ್ತವ್ಯ, ಬ್ರಾಹ್ಮಣರಿಗೆ ಕೊಡುವ ದಾನದ ಮಹತ್ತ್ವ*

**ವಾಸುದೇವನಿಂತೆಂದನು:** ಭೂತಗ್ರಾಮದ ಗತಿಯನ್ನು ನಿನಗೆ ಹೇಳಿರುತ್ತೇನೆ. ಬ್ರಾಹ್ಮಣನಾದವನ ಕರ್ತವ್ಯವನ್ನು ನಿನಗೆ ಹೇಳುವೆನು, ಅದನ್ನು ಕೇಳು.

ಜಾತಕರ್ಮದಿಂದ ಮೊದಲಾಗಿ ಇವನಿಗೆ ಎಲ್ಲಾ ಕರ್ಮಗಳೂ ಆಗಬೇಕು. ಸಮಾವರ್ತನದವರೆಗೆ ವೇದಪಾರಂಗತನಾದ ಆಚಾರ್ಯನಲ್ಲಿ ಎಲ್ಲಾ ವೇದಗಳನ್ನೂ ಅಧ್ಯಯನಮಾಡಿ ಗುರುಶುಶ್ರೂಷೆಯಲ್ಲಿ ರತನಾಗಿದ್ದುಕೊಂಡು ಗುರುಗಳು ಹೇಳಿಕೊಟ್ಟ ವಿದ್ಯೆಗೆ ಆನೃಣ್ಯವನ್ನು ಸಂಪಾದಿಸಿಕೊಂಡು ಯಜ್ಞತತ್ತ್ವವನ್ನರಿತುಕೊಂಡು ಸಮಾವೃತ್ತನಾಗಬೇಕು.

ಆಚಾರ್ಯನ ಅನುಜ್ಞೆಯನ್ನು ಹೊಂದಿ ನಾಲ್ಕು ಆಶ್ರಮಗಳೊಳಗೆ ಯಾವದಾದರೊಂದನ್ನು ಶರೀರಪಾತವಾಗುವವರೆಗೂ ವಿಧ್ಯುಕ್ತವಾದ ರೀತಿಯಲ್ಲಿ ಆಶ್ರಯಿಸಿಕೊಂಡಿರಬೇಕು. ಪತ್ನಿಯೊಡನಿದ್ದು ಪ್ರಜಾಸಂತತಿಯನ್ನು ಪಡೆಯುತ್ತಾ, ಅಥವಾ ಬ್ರಹ್ಮಚರ್ಯೆಯಿಂದ, ಅಥವಾ ವನದಲ್ಲಿ ಅಥವಾ ಗುರುಸಮೀಪದಲ್ಲಿದ್ದು ಕೊಂಡು, ಇಲ್ಲದಿದ್ದರೆ ಯತಿಧರ್ಮದಿಂದ ಇರಬೇಕು.

ಈ ಧರ್ಮಗಳಿಗೆಲ್ಲ ಗೃಹಸ್ಥನ ಧರ್ಮವು ಮೂಲವೆನಿಸುತ್ತದೆ. ಆ ಆಶ್ರಮದಲ್ಲಿ ಜಿತೇಂದ್ರಿಯನಾಗಿ ಕಷಾಯಪಾಕವನ್ನು ಮಾಡಿಕೊಂಡವನು ಎಲ್ಲೆಲ್ಲಿಯೂ ಸಿದ್ಧಿಯನ್ನು ಪಡೆಯುವನು. ಪ್ರಜಾಸಂತತಿಯುಳ್ಳವನೂ ಶ್ರೋತ್ರಿಯನೂ ಯಜ್ಞಕರ್ತೃವೂ ಆಗಿದ್ದು ಋಣತ್ರಯದಿಂದ ಮುಕ್ತನಾದ ಮೇಲೆಯೇ ಕರ್ಮಗಳಿಂದ ಪವಿತ್ರನಾದಬಳಿಕ ಉಳಿದ ಆಶ್ರಮಗಳನ್ನು ಪಡೆಯಬೇಕು. ಭೂಮಿಯ ಮೇಲೆ ಯಾವದು ಪುಣ್ಯತಮವಾದ ಸ್ಥಾನವೆಂದು ತೋರುವದೋ ಅಲ್ಲಿರಬೇಕು. ಅಲ್ಲಿ ಜನರಿಗೆ ಪ್ರಮಾಣಭೂತನಾಗಿ ಯಶಸ್ವಿಯಾಗಿರುವದಕ್ಕೆ ಯತ್ನಿಸಬೇಕು. ಹೆಚ್ಚಿನ ತಪಸ್ಸಿನಿಂದಾಗಲಿ ವಿದ್ಯೆಗಳಲ್ಲಿ ಪಾರಂಗತನಾಗು ವದರಿಂದಾಗಲಿ ಯಜ್ಞದಿಂದಾಗಲಿ ದಾನಗಳಿಂದಾಗಲಿ ಬ್ರಾಹ್ಮಣನ ಯಶಸ್ಸು

---

* ಸಂಪುಟ 39; ಸಂಚಿಕೆ 6; ಫೆಬ್ರವರಿ 1970

ವೃದ್ಧಿಯನ್ನೈದುತ್ತದೆ. ಈ ಲೋಕದಲ್ಲಿ ಯಶಸ್ಸು ಎಷ್ಟರಮಟ್ಟಿಗೆ ಹೆಚ್ಚುವದೋ, ಅಷ್ಟರಮಟ್ಟಿಗೆ ಪುಣ್ಯವಂತರು ಪಡೆಯುವ ಶಾಶ್ವತಲೋಕಗಳನ್ನು ಪುರುಷನು ಹೊಂದುತ್ತಾನೆ. ಅಧ್ಯಾಪನ ಮಾಡಿಸುತ್ತಿರಬೇಕು: ತಾನು ಅಧ್ಯಯನವನ್ನೂ ಮಾಡುತ್ತಿರಬೇಕು; ಯಾಗವನ್ನು ಮಾಡಿಸಬೇಕು ಅಥವಾ ತಾನು ಮಾಡುತ್ತಿರಬೇಕು; ವ್ಯರ್ಥವಾಗಿ ಪ್ರತಿಗ್ರಹವನ್ನು ಮಾಡಬಾರದು, ಹೇಗಾದರೂ ದಾನಮಾಡುತ್ತಿರಬೇಕು. ಯಾಜ್ಯದಿಂದಲಾಗಲಿ, ಶಿಷ್ಯನಿಂದಲಾಗಲಿ, ಕನ್ಯೆಯಿಂದಲಾಗಲಿ ಯಾವಾಗ ಹೆಚ್ಚಿನ ಧನವು ಬರುವದೋ ಆಗ ಯಾಗಮಾಡಬೇಕು. ದಾನಮಾಡಬೇಕು. ಒಬ್ಬನೇ ಭುಂಜಿಸಬಾರದು. ಗೃಹದಲ್ಲಿರುವಾಗ ಯೋಗ್ಯವಾದ ಪ್ರತಿಗ್ರಹಕ್ಕಿಂತ ಬೇರೆ ಯಾವದೂ ದ್ವಾರವಿರುವದಿಲ್ಲ. ದೇವತೆಗಳು, ಋಷಿಗಳು ಪಿತೃಗಳು, ಗುರು ಗಳಿಗೋಸ್ಕರವೂ ವೃದ್ಧರು, ಸಂಕಟದಲ್ಲಿರುವವರು, ಹಸಿದಿರುವವರು, ಒಳಗಿನ ಮನೋವ್ಯಥೆಯಿಂದ ತಪ್ತರಾದವರಿಗೂ ಯಥಾಶಕ್ತಿಯಾಗಿ, ದೇವತೆಗಳಿಗೆ ಶಕ್ತಿಯನ್ನು ಮೀರಿಕೂಡ ದಾನಮಾಡತಕ್ಕದ್ದು.

ಯೋಗ್ಯರಾಗಿ ಅನುರೂಪರಾಗಿರುವವರಿಗೆ ಕೊಡಬಾರದೆಂಬ ವಸ್ತುವೇ ಇರುವದಿಲ್ಲ. ಅವರವರ ಇಚ್ಛೆಯಂತೆ ಅವರವರನ್ನು ತೃಪ್ತಿಗೊಳಿಸಿ ಸತ್ಯಸಂಧನಾಗಿ **ಮಹಾವ್ರತ**ನು ತನ್ನ ಪ್ರಾಣಗಳಿಂದ ಬ್ರಾಹ್ಮಣನ ಪ್ರಾಣವನ್ನು ಉಳಿಸಿ ಸ್ವರ್ಗವನ್ನು ಹೊಂದಿದನು. **ಸಾಂಕೃತ್ಯರಂತಿದೇವನು** ಮಹಾತ್ಮನಾದ ವಸಿಷ್ಠನಿಗೆ ನೀರನ್ನು ದಾನಮಾಡಿದ್ದರಿಂದ ಸ್ವರ್ಗದಲ್ಲಿ ಪೂಜ್ಯನಾಗಿರುತ್ತಾನೆ. ವಿವೇಕಿಯಾದ **ಇಂದ್ರದಮನ**ನೆಂಬ ಮಹೀಪತಿಯು ಯೋಗ್ಯನಾದ ಪಾತ್ರನಾದವನಿಗೆ ವಿವಿಧವಾಗಿ ಧನವನ್ನು ಕೊಟ್ಟು ಅನಂತಲೋಕಗಳನ್ನು ಪಡೆದುಕೊಂಡನು. **ಔಶೀನರ ಶಿಬಿಯು** ತನ್ನ ಶರೀರವನ್ನೂ ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನೂ ಬ್ರಾಹ್ಮಣನಿಗಾಗಿ ಕೊಟ್ಟು ಸ್ವರ್ಗಲೋಕಕ್ಕೆ ಹೋಗಿರುತ್ತಾನೆ. ಕಾಶೀಪತಿಯಾದ **ಪ್ರತರ್ದನನು** ಬ್ರಾಹ್ಮಣನಿಗೆ ತನ್ನ ಕಣ್ಣುಗಳನ್ನು ಕೊಟ್ಟು ಅಸಮಾನವಾದ ಕೀರ್ತಿಯನ್ನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಪಡೆದುಕೊಂಡಿರುತ್ತಾನೆ. ದಿವ್ಯವಾದ ಎಂಟುಶಲಾಕ ಸುವರ್ಣದ ಛತ್ರವನ್ನು ದಾನಮಾಡಿದ **ದೇವವೃಧನು** ಸ್ವರ್ಗವನ್ನೇರಿರುತ್ತಾನೆ. ಮಹಾತೇಜಸ್ವಿಯಾದ **ಆತ್ರೇಯಸಾಂಕೃತಿ**ಯು ನಿರ್ಗುಣ ಬ್ರಹ್ಮವನ್ನು ಶಿಷ್ಯರಿಗೆ ಉಪದೇಶಿಸಿ ಉತ್ತಮಲೋಕಗಳನ್ನು ಪಡೆದಿರುತ್ತಾನೆ. **ಅಂಬರೀಷನು** ಅರ್ಬುದ

ಗೋಗಳನ್ನು ಬ್ರಾಹ್ಮಣರಿಗೆ ದಾನಮಾಡಿದ್ದರಿಂದ ರಾಷ್ಟ್ರಸಹಿತವಾಗಿ ದ್ಯುಲೋಕವನ್ನು ಹೊಂದಿದನು. **ಸಾವಿತ್ರಿಯು** ದಿವ್ಯವಾದ ಕುಂಡಲಗಳನ್ನೂ **ಜನಮೇಜಯನು** ಶರೀರವನ್ನೂ ಬ್ರಾಹ್ಮಣಾರ್ಥವಾಗಿ ಪರಿತ್ಯಜಿಸಿ ಉತ್ತಮಲೋಕವನ್ನು ಸೇರಿದರು. ವೃಷಾದರ್ಭಿಯಾದ **ಯುವನಾಶ್ವನು** ಸರ್ವರತ್ನಗಳನ್ನೂ ಪ್ರಿಯರಾದ ಸ್ತ್ರೀಯರನ್ನೂ ರಮ್ಯವಾದ ವಾಸಸ್ಥಾನವನ್ನೂ ಕೊಟ್ಟು ಸ್ವರ್ಗಲೋಕಕ್ಕೆ ತೆರಳಿದನು. **ವೈದೇಹನಿಮಿಯು** ರಾಷ್ಟ್ರವನ್ನೂ **ಜಾಮದಗ್ನ್ಯನು** ಭೂಮಿಯನ್ನೂ **ಗಯನು** ಪಟ್ಟಣಗಳ ಸಮೇತವಾಗಿ ಭೂಮಿಯನ್ನೂ ಬ್ರಾಹ್ಮಣರಿಗೆ ದಾನಮಾಡಿರುತ್ತಾನೆ. ಪರ್ಜನ್ಯನು ಮಳೆಗರೆಯದೆ ಇರುವಾಗ ಭೂತಕರ್ತನಾದ **ವಸಿಷ್ಠನು**-ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸುವಂತೆ ಮಳೆಯನ್ನು ಸೃಷ್ಟಿಸಿದನು. ಕರಂಧಮನ ಮಗನಾದ ಪುಣ್ಯವಂತ **ಮರುತನು** ಕನ್ಯೆಯನ್ನು ಅಂಗಿರಸನಿಗೆ ಕೊಟ್ಟು ಶೀಘ್ರವಾಗಿ ಸ್ವರ್ಗಕ್ಕೆ ತೆರಳಿದನು.

ಬುದ್ಧಿವಂತರಲ್ಲಿ ಶ್ರೇಷ್ಠನಾದ **ಬ್ರಹ್ಮದತ್ತ**ನೆಂಬ ಪಾಂಚಾಲ್ಯರಾಜನು ದ್ವಿಜಶ್ರೇಷ್ಠರಿಗೆ ಶಂಖನಿಧಿಯನ್ನು ಕೊಟ್ಟು ಪುಣ್ಯಲೋಕಗಳನ್ನು ಪಡೆದು ಕೊಂಡನು. **ಮಿತ್ರಸಹ**ನೆಂಬ ರಾಜನು ಮಹಾತ್ಮನಾದ ವಸಿಷ್ಠನಿಗೆ ಪ್ರಿಯಳಾದ ಮದಯಂತಿಯನ್ನು ಕೊಟ್ಟು ಆಕೆಯೊಡನೆ ಸ್ವರ್ಗಕ್ಕೆ ತೆರಳಿದನು. ಮಹಾಯಶನಾದ **ಸಹಸ್ರಜಿತ್ತೆಂಬ** ರಾಜರ್ಷಿಯು ತನಗೆ ಇಷ್ಟವಾದ ಪ್ರಾಣವನ್ನೇ ಬ್ರಾಹ್ಮಣನಿಗಾಗಿ ಒಪ್ಪಿಸಿ ಅನುತ್ತಮವಾದ ಲೋಕಗಳನ್ನು ಪಡೆದುಕೊಂಡನು. **ಶತದ್ಯುಮ್ನ**ನೆಂಬ ಮಹೀಪತಿಯು ಸರ್ವಕಾಮ್ಯಾರ್ಥಗಳಿಂದಲೂ ಪರಿಪೂರ್ಣವಾದ ಹಿರಣ್ಮಯವಾದ ಗೃಹವನ್ನು ಮುದ್ಗಲನಿಗೆ ಕೊಟ್ಟು ಸ್ವರ್ಗಕ್ಕೆ ಹೋದನು. ಪ್ರತಾಪವಂತನಾದ **ದ್ಯುತಿಮಂತ**ನೆಂಬ ಶಾಲ್ವರಾಜನು ಋಚೀಕನಿಗೆ ರಾಜ್ಯವನ್ನು ಕೊಟ್ಟು ಅನುತ್ತಮಲೋಕಗಳಿಗೆ ತೆರಳಿದನು. **ಲೋಮಪಾದ**ನೆಂಬ ರಾಜರ್ಷಿಯು ಮಗಳಾದ ಶಾಂತೆಯನ್ನು ಋಷ್ಯಶೃಂಗನಿಗೆ ಕೊಟ್ಟು ವಿಪುಲವಾದ ಸರ್ವಕಾಮಗಳನ್ನೂ ಪಡೆದನು. **ಮದಿರಾಶ್ವ**ನೆಂಬ ರಾಜರ್ಷಿಯು ಸುಮಧ್ಯಮಳಾದ ಕನ್ಯೆಯನ್ನು **ಹಿರಣ್ಯಹಸ್ತ**ನಿಗೆ ಕೊಟ್ಟು ದೇವತೆಗಳಿಂದ ಸ್ತುತಿಸಲ್ಪಡುವ ಲೋಕಗಳನ್ನು ಪಡೆದುಕೊಂಡನು. ಮಹಾತೇಜಸ್ವಿಯಾದ **ಪ್ರಸೇನಜಿತ**ನು ಕರುಗಳ ಸಹಿತವಾಗಿ ನೂರುಸಾವಿರ ಗೋಗಳನ್ನು ದಾನಮಾಡಿ ಶ್ರೇಷ್ಠವಾದ ಲೋಕಗಳಿಗೆ ಹೋದನು.

ಇವರೂ ಇನ್ನು ಹಲವರೂ ದಾನದಿಂದಲೂ ತಪಸ್ಸಿನಿಂದಲೂ ಶಿಷ್ಟಾತ್ಮರೂ ಜಿತೇಂದ್ರಿಯರೂ ಆಗಿದ್ದು ಸ್ವರ್ಗಕ್ಕೆ ತೆರಳಿರುತ್ತಾರೆ. ಅವರ ಕೀರ್ತಿಯು ಭೂಮಿಯಿರುವವರೆಗೂ ಪ್ರತಿಷ್ಠಿತವಾಗಿರುವದು. ದಾನ, ಯಜ್ಞ, ಪ್ರಜಾಸಂತತಿಯ ಪ್ರಾಪ್ತಿ- ಇವುಗಳಿಂದ ಇವರು ಸ್ವರ್ಗವನ್ನು ಪಡೆದುಕೊಂಡಿರುತ್ತಾರೆ.

* * * * *

## 20. ಬ್ರಾಹ್ಮಣನ ಕರ್ತವ್ಯ ಮತ್ತು ಕಾಲನದಿಯನ್ನು ದಾಟುವದಕ್ಕೆ ಉಪಾಯ*

ವೇದಗಳಲ್ಲಿ ಹೇಳಿರುವ ತ್ರಯೀವಿದ್ಯೆಯನ್ನು ಸಾಂಗವಾಗಿ ವಿಚಾರಿಸುತ್ತಿರಬೇಕು. ಋಕ್ಕು, ಸಾಮ, ಯಜುಸ್ಸು, ಅಥರ್ವಣ- ಇವುಗಳನ್ನು ಅಕ್ಷರಶಃ ತಿಳಿದುಕೊಳ್ಳಬೇಕು. ಇವುಗಳಲ್ಲಿ ಷಟ್ಕರ್ಮಗಳಲ್ಲಿ ವಿರಾಜಮಾನನಾದ ಪೂಜ್ಯನಾದ ಧರ್ಮದೇವತೆಯು ನೆಲೆನಿಂತಿರುತ್ತಾನೆ. ವೇದವಾದಗಳಲ್ಲಿ ಕುಶಲರಾದವರೂ ಅಧ್ಯಾತ್ಮವಿದ್ಯೆಯಲ್ಲಿ ಕುಶಲರಾಗಿರುವವರೂ ಆದ ಸತ್ಯವಂತರಾದ ಮಹಾಭಾಗ್ಯಶಾಲಿಗಳು ಸೃಷ್ಟಿಪ್ರಲಯಗಳ ತತ್ತ್ವವನ್ನು ಅರಿತುಕೊಳ್ಳುತ್ತಾರೆ. ದ್ವಿಜನಾದವನು ಶಿಷ್ಟರಂತೆ ಕರ್ಮವನ್ನು ಮಾಡುತ್ತಾ ಧರ್ಮದಿಂದ ವರ್ತಿಸಬೇಕು. ಪ್ರಾಣಿಗಳಿಗೆ ವಿರೋಧವಾಗದಂತೆ ವೃತ್ತಿಯನ್ನು ಪಡೆದುಕೊಳ್ಳುವದಕ್ಕೆ ಯತ್ನಿಸಬೇಕು.

ಸತ್ಪುರುಷರ ಸಂಪ್ರದಾಯದಿಂದ ವಿಜ್ಞಾನವನ್ನು ಪಡೆದುಕೊಂಡು ಶಿಷ್ಟನಾಗಿ ಶಾಸ್ತ್ರದಲ್ಲಿ ವಿಚಕ್ಷಣನಾಗಿ ಸ್ವಧರ್ಮಕ್ಕೆ ತಕ್ಕಂತೆ ಲೋಕದಲ್ಲಿ ಕ್ರಿಯೆಯನ್ನು ಮಾಡುತ್ತಿದ್ದು ಸತ್ಯಪ್ರತಿಜ್ಞನಾಗಿ ಗೃಹಸ್ಥನ ಷಟ್ಕರ್ಮಗಳಲ್ಲಿ ನಿರತನಾಗಿರುವವನೇ ದ್ವಿಜನು. ಇವನು ಪಂಚಯಜ್ಞಗಳನ್ನು ಸತತವಾಗಿ ಶ್ರದ್ಧೆಯಿಂದ ಮಾಡುತ್ತಿರಬೇಕು. ಧೃತಿವಂತನಾಗಿ ಎಚ್ಚರಿಕೆಯಿಂದಿರುತ್ತಾ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಧರ್ಮಜ್ಞನಾಗಿ ಜಿತಾತ್ಮನಾಗಿ ಹರ್ಷಮದಕ್ರೋಧಗಳಿಲ್ಲದೆ ಇರುವ ಬ್ರಾಹ್ಮಣನು ಎಂದಿಗೂ ಕೆಳಕ್ಕೆ ಬೀಳುವದಿಲ್ಲ. ದಾನ, ಅಧ್ಯಯನ, ಯಜ್ಞ, ತಪಸ್ಸು, ಲಜ್ಜೆ, ಋಜುತ್ವ, ದಮ-

---

* ಸಂಪುಟ 39; ಸಂಚಿಕೆ 7; ಮಾರ್ಚ್ 1970

ಇವುಗಳಿಂದ ತೇಜಸ್ಸು ವೃದ್ಧಿಯಾಗುತ್ತದೆ; ಪಾಪವೂ ಕುಗ್ಗುತ್ತದೆ. ಪಾಪರಹಿತನಾಗಿರುವವನೂ ಮೇಧಾವಿಯಾಗಿರುವವನೂ ಅಲ್ಪಾಹಾರಿಯೂ ಜಿತೇಂದ್ರಿಯನೂ ಆಗಿದ್ದುಕೊಂಡು ಬ್ರಹ್ಮಪದವನ್ನು ಪಡೆಯಲು ಯತ್ನಿಸುತ್ತಿರಬೇಕು. ಅಗ್ನಿಗಳನ್ನೂ ಬ್ರಾಹ್ಮಣರನ್ನೂ ಅರ್ಚಿಸುತ್ತಿರಬೇಕು. ದೇವತೆಗಳನ್ನು ನಮಸ್ಕರಿಸುತ್ತಿರಬೇಕು, ವಕ್ರವಾದ ಮಾತನ್ನು ತ್ಯಜಿಸಬೇಕು. ಅಧರ್ಮಸಹಿತ ವಾಗಿರುವ ಹಿಂಸೆಯನ್ನು ಬಿಡಬೇಕು. ಈ ಪ್ರಾಚೀನವೃತ್ತಿಯು ಬ್ರಾಹ್ಮಣನಿಗೆ ವಿಹಿತವಾಗಿರುತ್ತದೆ. ಜ್ಞಾನಸಹಿತವಾದ ಸಂಪ್ರದಾಯದಿಂದ ಕರ್ಮವನ್ನು ಮಾಡುತ್ತಿರುವವನು ಕರ್ಮಗಳಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.

ಪಂಚೇಂದ್ರಿಯಗಳ ಜಲದಿಂದ ಪೂರಿತವಾಗಿ ಭಯಂಕರವಾಗಿರುವ ಲೋಭವೆಂಬ ದಡವುಳ್ಳದ್ದಾಗಿ ದಾಟಲಶಕ್ಯವಾಗಿರುವ ಮನ್ಯುವೆಂಬ ಕೆಸರಿನಿಂದ ಮಾಡಿರುವ ಎದುರಿಸಲಸದಳವಾದ ನದಿಯನ್ನು ಬುದ್ಧಿವಂತನು ದಾಟುವನು. ಅತ್ಯಂತ ಮೋಹಕವಾದ ಕಾಲವು ಪ್ರತೀಕಾರ ಮಾಡಲಶಕ್ಯವಾದ ದೈವದೃಷ್ಟವಾದ ಮಹಾಬಲದಿಂದೊಡಗೂಡಿ ಎದ್ದುಬಂದಿರುವದೆಂದು ನಿತ್ಯವೂ ತಿಳಿಯಬೇಕು. ಕಾಲವೆಂಬ ಹೆಚ್ಚಿನ ನೀರಿನಿಂದಲೂ ವರ್ಷಗಳೆಂಬ ಸುಳಿಗಳಿಂದಲೂ ತಿಂಗಳುಗಳೆಂಬ ಹೆದ್ದೆರೆಗಳಿಂದಲೂ ಋತುಗಳೆಂಬ ಸೆಳವಿನಿಂದಲೂ ಪಕ್ಷಗಳೆಂಬ ಆಪಿನ ಕಡ್ಡಿಗಳಿಂದಲೂ ನಿಮೇಷೋನ್ಮೇಷಗಳೆಂಬ ನೊರೆಯಿಂದಲೂ ಹಗಲು ರಾತ್ರೆಗಳೆಂಬ ನೀರಿನಿಂದಲೂ ಕಾಮವೆಂಬ ಭೀಕರವಾದ ಮೊಸಳೆಯಿಂದಲೂ ವೇದಯಜ್ಞವೆಂಬ ದೋಣಿಯಿಂದಲೂ ಧರ್ಮವೆಂಬ ದ್ವೀಪದಿಂದಲೂ ಭೂತಗಳ ಅರ್ಥಕಾಮಗಳ ರೂಪವಾದ ಜಲದಿಂದಲೂ ಯುಗಗಳೆಂಬ ಮಡುಗಳಿಂದ ಕೂಡಿರುವ ಮಧ್ಯಭಾಗದಿಂದಲೂ ಕೂಡಿದ ಬ್ರಹ್ಮವೆಂಬ ಪರ್ವತದಿಂದ ಹುಟ್ಟಿದ ಕಾಲವೆಂಬ ಪ್ರವಾಹದಲ್ಲಿ ಬಿದ್ದಿರುವ – ಬ್ರಹ್ಮನು ಸೃಷ್ಟಿಸಿರುವ ಪ್ರಾಣಿಗಳು ಯಮಲೋಕಕ್ಕೆ ತೆರಳುತ್ತಿರುವವು.

ಇದನ್ನು ಪ್ರಜ್ಞಾಮಯವಾದ ಹರಿಗೋಲುಗಳಿಂದ ವಿವೇಕಿಗಳು ದಾಟುವರು. ಬುದ್ಧಿಹೀನರಾದವರು ದಾಟಲರಿಯದೆ ಇರುವರು. ಅವರು ಏನುತಾನೆ ಮಾಡಿಯಾರು? ಪ್ರಾಜ್ಞನಾದವನೊಬ್ಬನೇ ದಾಟಿಯಾನೇ ಹೊರತು ಮಿಕ್ಕವರು ದಾಟಲಾರರೆಂಬುದು ಯುಕ್ತವೇ ಅಷ್ಟೆ? ಪ್ರಾಜ್ಞನಾದವನು ಗುಣದೋಷಗಳನ್ನು

ದೂರದಿಂದಲೇ ಎಲ್ಲೆಲ್ಲಿಯೂ ನೋಡುತ್ತಿರುವನು; ಸಂಶಯಾತ್ಮನೂ ಚಂಚಲ ಚಿತ್ತವುಳ್ಳವನೂ ಆದ ಅಲ್ಪಬುದ್ಧಿಯವನು ಕಾಲಗ್ರಸ್ತನಾಗಿಯೇ ಇರುವನು. ಅಪ್ರಾಜ್ಞನಾದ್ದರಿಂದ ಅವನು ಈ ನದಿಯನ್ನು ದಾಟಲಾರನು. ಕುಳಿತಿರುವವನು ನಡೆಯಲಾರನಲ್ಲವೆ? ಏಕೆಂದರೆ ಅವನಲ್ಲಿ ಹರಿಗೋಲು ಇರುವದಿಲ್ಲ. ಅವನು ಮೋಹದಿಂದ ಮಹಾದೋಷವನ್ನೇ ಹೊಂದಿರುತ್ತಾನೆ. ಕಾಮವೆಂಬ ಮೊಸಳೆಯು ಯಾವನನ್ನು ಹಿಡಿದುಕೊಂಡಿರುವದೋ ಅವನಿಗೆ ಜ್ಞಾನವೂ ಹರಿಗೋಲಾಗ ಲಾರದು.

ಆದ್ದರಿಂದ ಮುಳುಗಿಹೋಗದೆ ಮೇಲಕ್ಕೇಳುವದಕ್ಕೆಂದು ಜಾಣನಾದವನು ಪ್ರಯತ್ನಿಸಬೇಕು. ಅದಕ್ಕಾಗಿ ಬ್ರಾಹ್ಮಣನಾಗಬೇಕು; ಅಂದರೆ ಬ್ರಹ್ಮಜ್ಞಾನವನ್ನು ಪಡೆಯಬೇಕು. ಶುದ್ಧಕರ್ಮಿಗಳ ವಂಶದಲ್ಲಿ ಹುಟ್ಟಿದವನು ಮಾತಾಪಿತ್ರಾಚಾರ್ಯ ರಿಂದ ಅನುಶಿಷ್ಟನಾಗಿ ಇಜ್ಯಾಧ್ಯಯನದಾನಗಳೆಂಬ ಮೂರು ಕರ್ಮಗಳನ್ನು ಮಾಡುತ್ತಾ ಅದರಿಂದ ಮೇಲಕ್ಕೆದ್ದು ಕಾಲನದಿಯನ್ನು ದಾಟುವ ಪ್ರಯತ್ನವನ್ನು ಮಾಡಬೇಕು. ಸಂಸ್ಕಾರವನ್ನು ಹೊಂದಿ, ದಾಂತನಾಗಿ ನಿಯಮದಲ್ಲಿದ್ದುಕೊಂಡು ಅಂತಃಕರಣವನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಪ್ರಾಜ್ಞನಿಗೆ ಇಹದಲ್ಲಿಯೂ ಪರದಲ್ಲಿಯೂ ಶೀಘ್ರವಾಗಿ ಸುಖವು ಆಗುವದು.

ಗೃಹಸ್ಥನಾದವನು ಕ್ರೋಧವನ್ನು ಮಾಡದೆ ಅಸೂಯೆಯಿಲ್ಲದೆ, ಪಂಚಮಹಾ ಯಜ್ಞಗಳನ್ನು ಮಾಡುತ್ತಾ ವಿಘಸಾಶಿಯಾಗಿರಬೇಕು. ಸತ್ಪುರುಷರ ಧರ್ಮದಲ್ಲಿರಬೇಕು; ಶಿಷ್ಟರಂತೆ ಕ್ರಿಯೆಯನ್ನು ಆಚರಿಸುತ್ತಿರಬೇಕು. ಜನರಿಗೆ ತೊಂದರೆಯಾಗದಂತೆ ಅನಿಂದಿತವಾದ ವೃತ್ತಿಯನ್ನು ಕೈಗೊಳ್ಳಲು ಯತ್ನಿಸಬೇಕು. ಶ್ರುತಿವಿಜ್ಞಾನದ ತತ್ತ್ವವನ್ನು ಅರಿತುಕೊಂಡು, ವಿಚಕ್ಷಣನಾಗಿ ಸ್ವಧರ್ಮಕ್ಕನುಗುಣವಾಗಿ ಕ್ರಿಯೆಯನ್ನು ಮಾಡುತ್ತಾ ಸಂಕರಕ್ಕೆ ಅವಕಾಶವೀಯದೆ ಇರಬೇಕು. ಕ್ರಿಯಾವಂತನೂ ಶ್ರದ್ಧಾವಂತನೂ ಅಸೂಯಾರಹಿತನೂ ಆಗಿರುವ ಪ್ರಾಜ್ಞನು ಧರ್ಮಾಧರ್ಮಗಳ ವಿಶೇಷವನ್ನು ಅರಿತುಕೊಂಡು ದುಸ್ತರವಾದದ್ದೆಲ್ಲವನ್ನೂ ದಾಟುವನು. ಧೃತಿವಂತನೂ ಅಪ್ರಮತ್ತನೂ ಧರ್ಮನಿಷ್ಠನೂ ಅಂತಃಕರಣವನ್ನು ಬಿಗಿಹಿಡಿದುಕೊಂಡಿರುವವನೂ ಹರ್ಷಭಯಕ್ರೋಧಗಳಿಲ್ಲದವನೂ ಆದ ಬ್ರಾಹ್ಮಣನು ಕುಸಿದುಬೀಳುವದಿಲ್ಲ, ಇದೇ ಪುರಾತನವಾದ ಶಿಷ್ಟಾಚಾರವೆಂದು ಬ್ರಾಹ್ಮಣನಿಗೆ ವಿಧಿಸಲ್ಪಟ್ಟಿದೆ. ಶಾಸ್ತ್ರಜ್ಞಾನವುಳ್ಳವ

ನಾಗಿ ಕರ್ಮಗಳನ್ನು ಮಾಡುತ್ತಿದ್ದರೆ ಎಲ್ಲೆಲ್ಲೂ ಸಿದ್ಧಿಯನ್ನು ಹೊಂದುವನು. ಅವಿಚಕ್ಷಣನಾದವನು ಅಧರ್ಮವನ್ನು ಧರ್ಮವೆಂದು ಮಾಡುವನು, ಅಧರ್ಮದಂತಿರುವ ಧರ್ಮವನ್ನು ಮಾಡುತ್ತಾ ಶೋಕಿಸುತ್ತಿರುವವನು. ಧರ್ಮವನ್ನು ಮಾಡುವೆನೆಂದು ಅಧರ್ಮವನ್ನೂ, ಅಧರ್ಮಕಾಮನಾಗಿ ಧರ್ಮವನ್ನೂ ಅವನು ಮಾಡುತ್ತಾನೆ. ಬಾಲಿಶನಾಗಿರುವ ಆ ದೇಹಿಯು ಈ ಎರಡನ್ನೂ ಅರಿಯದೆ ಕಾಲಜಲದಲ್ಲಿ ಹುಟ್ಟುತ್ತಲೂ ಸಾಯುತ್ತಲೂ ಇರುವನು.

* * * * *

## 21. ಧ್ಯಾನಯೋಗ*

ಬಳಿಕ ವ್ಯಾಸರಿಂತೆಂದರು: ಹೀಗೆ ಕಾಲನದದ ಪ್ರವಾಹದಿಂದ ಮುಳುಗುತ್ತಲೂ ಏಳುತ್ತಲೂ ಕೊಚ್ಚಿಕೊಂಡುಹೋಗುತ್ತಿರುವಾತನು ಇದರಿಂದ ಪಾರಾಗುವದಕ್ಕೆ ಜ್ಞಾನವೆಂಬ ಹರಿಗೋಲನ್ನು ಆಶ್ರಯಿಸಬೇಕು. ಪ್ರಜ್ಞೆಯಿಂದ ತತ್ತ್ವದ ನಿಶ್ಚಯವನ್ನು ಮಾಡಿಕೊಂಡಿರುವ ಧೀರರು ಅಜ್ಞರನ್ನು ಹರಿಗೋಲುಗಳಿಂದ ದಾಟಿಸುತ್ತಾರೆ; ಅಜ್ಞರಾದವರು ಮತ್ತೊಬ್ಬರನ್ನಾಗಲಿ ತಮ್ಮನ್ನಾಗಲಿ ಎಂದಿಗೂ ದಾಟಿಸಲಾರರು.

ಚಿತ್ತದೋಷಗಳನ್ನೆಲ್ಲ ಕತ್ತರಿಸಿಕೊಂಡಿರುವ ಮುನಿಯು ಯುಕ್ತನಾಗಿ, ದೇಶ, ಕರ್ಮ, ಅನುರಾಗ, ಅರ್ಥ, ಉಪಾಯ, ಅಪಾಯ, ನಿಶ್ಚಯ, ಚಕ್ಷುಸ್ಸು, ಆಹಾರ, ಸಂಹಾರ, ಮನಸ್ಸು, ದರ್ಶನ – ಎಂಬೀ **ಹನ್ನೆರಡು ಯೋಗ**ಗಳನ್ನು ಮಾಡಬೇಕು. (ಧ್ಯಾನವನ್ನು ಮಾಡುವಾತನು) ಸಮವಾದ ಮಟ್ಟದಲ್ಲಿದ್ದು ಪವಿತ್ರವಾಗಿ ನಿರ್ಜನವಾಗಿರುವ, ಅರಣ್ಯಗುಹಾದಿ ಏಕಾಂತಸ್ಥಲದಲ್ಲಿದ್ದು ಮನಸ್ಸಿಗೆ ಅನುಕೂಲವಾದ ದೇಶವನ್ನಾಶ್ರಯಿಸುವದು **ದೇಶಯೋಗ**; ಆಹಾರ, ವಿಹಾರ, ನಿದ್ರೆ, ಎಚ್ಚರ– ಇವುಗಳು ಹಿತಮಿತವಾಗಿರುವದು **ಕರ್ಮಯೋಗ**; ಭಗವತ್ಪ್ರಾಪ್ತಿಯಲ್ಲಿಯೂ ಅದರ ಸಾಧನದಲ್ಲಿಯೂ ಪ್ರೇಮವಿರುವದು **ಅನುರಾಗಯೋಗ**; ತನಗೆ ಅತ್ಯಂತಾವಶ್ಯವಾಗಿರುವ ಸಾಮಗ್ರಿಗಳನ್ನು ಮಾತ್ರ ಇಟ್ಟುಕೊಂಡಿರುವ **ಅರ್ಥಯೋಗ**; ಧ್ಯಾನಕ್ಕೆ ಅನುಕೂಲವಾದ ಸ್ಥಿರಸುಖಾಸನವನ್ನು ಅಳವಡಿಸಿ

---

* ಸಂಪುಟ 39; ಸಂಚಿಕೆ 2; ಏಪ್ರಿಲ್ 1970

ಕೊಳ್ಳುವದು **ಉಪಾಯಯೋಗ**; ಪುತ್ರದಾರಗೃಹಾದಿಗಳಲ್ಲಿ ಮನಸ್ಸು ಹಾಕದಂತೆ ಮಾಡಿಕೊಳ್ಳುವದು **ಅಪಾಯಯೋಗ**; ಗುರುಶಾಸ್ತ್ರವಚನದಲ್ಲಿ ಅಚಲಶ್ರದ್ಧೆಯಿರುವದು **ನಿಶ್ಚಯಯೋಗ**; ಚಕ್ಷುಸ್ಸನ್ನು ನಾಸಿಕಾಗ್ರದಲ್ಲಿಟ್ಟುಕೊಳ್ಳುವದು **ಚಕ್ಷುಯೋಗ**; ಶುದ್ಧಸಾತ್ತ್ವಿಕ ಭೋಜನವನ್ನಿಟ್ಟುಕೊಳ್ಳುವದು **ಆಹಾರಯೋಗ**; ಬಾಹ್ಯವಿಷಯಗಳಲ್ಲಿ ಸ್ವಭಾವದಿಂದ ಪ್ರವರ್ತಿಸುವ ಇಂದ್ರಿಯಮನಸ್ಸುಗಳನ್ನು ಹಿಂತಿರುಗಿಸಿಕೊಳ್ಳುವದು **ಸಂಹಾರಯೋಗ**; ಮನಸ್ಸಿನ ಸಂಕಲ್ಪವಿಕಲ್ಪಗಳನ್ನು ನಿಲ್ಲಿಸಿ ಏಕಾಗ್ರಗೊಳಿಸಿಕೊಳ್ಳುವದು **ಮನೋಯೋಗ**; ಜನ್ಮಮೃತ್ಯಜರಾರೋಗಗಳಲ್ಲಿರುವ ದುಃಖದೋಷವನ್ನು ಕಂಡುವಿರಕ್ತನಾಗುವದು **ದರ್ಶನಯೋಗ**. ಯಾವನಿಗೆ ಉತ್ತಮಜ್ಞಾನವು ಬೇಕೆಂಬ ಇಚ್ಛೆಯಿರುವದೋ, ಅವನು ವಾಗಾದೀಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯಿಂದ ವಶಪಡಿಸಿಕೊಳ್ಳಬೇಕು; ಯಾವನಿಗೆ ನಿತ್ಯಶಾಂತಿಯು ಬೇಕೆನಿಸುವದೋ ಅವನು ಜ್ಞಾನದಿಂದ ಬುದ್ಧಿಯನ್ನು ಹಿಡಿದಿಟ್ಟುಕೊಳ್ಳಬೇಕು. ಈ ಯೋಗಗಳ ಅನುದರ್ಶನ ವನ್ನು ಮಾಡಿಕೊಂಡಿರುವಾತನು, ಅತ್ಯಂತದಾರುಣನಾಗಿರಲಿ, ಸರ್ವವೇದಗಳನ್ನೂ ಬಲ್ಲವನಾಗಿರಲಿ ಅಥವಾ ಒಂದು ಋಕ್ಕನ್ನೂ ಅರಿಯದ ದ್ವಿಜನಾಗಿರಲಿ, ಧಾರ್ಮಿಕನಾದ ಯಜ್ಞಕರ್ತೃವಾಗಿರಲಿ, ಅತ್ಯಂತಪಾಪಕರ್ಮಿಯಾಗಿರಲಿ, ಪುರುಷ ಶ್ರೇಷ್ಠನೇ ಆಗಿರಲಿ, ಕ್ಲಿಷ್ಟಜೀವಿಯಾಗಿರಲಿ ಜರಾಮರಣರೂಪದ ಅತಿದುಸ್ತರವಾದ ಸಂಸಾರವನ್ನು ಅವಶ್ಯವಾಗಿ ದಾಟುವನು. ಹೀಗೆ ಫಲಪರ್ಯಂತವಾಗಿ ಈ ಯೋಗವನ್ನು ಅಭ್ಯಾಸ ಮಾಡಿದವನು, ಯೋಗಜಿಜ್ಞಾಸುವೇ ಆಗಿದ್ದರೂ ವೇದೋಕ್ತ ಕರ್ಮಾನುಷ್ಠಾನಫಲವನ್ನು ಮೀರುತ್ತಾನೆ.

ಧರ್ಮವೆಂಬ ಕೂರುವ ಇರಚಿ, ಲಜ್ಜೆಯೆಂಬ ಕಮಾನು, ಉಪಾಯಾಪಾಯ ಗಳೆಂಬ ಮೂಕಿನ ಪಟ್ಟಿ, ಅಪಾನವೆಂಬ ಅಚ್ಚು, ಪ್ರಾಣವೆಂಬ ನೊಗ, ಪ್ರಜ್ಞೆ ಎಂಬ ಆಯಕಟ್ಟು, ಜೀವವೆಂಬ ಲಗಾಮು, ಚೇತನವೆಂಬ ಸೊಗಸಾದ ಕೊರಳಕಣ್ಣಿ, ಆಚಾರಗ್ರಹಣವೆಂಬ ಚಕ್ರದ ಹಳಿ, ದರ್ಶನಸ್ಪರ್ಶನಘ್ರಾಣಶ್ರವಣಗಳೆಂಬ ವಾಹನ ಗಳು, ಪ್ರಜ್ಞೆ ಎಂಬ ಗುಂಬ, ಸರ್ವತಂತ್ರಗಳೆಂಬ ಕೊರಡೆ, ಜ್ಞಾನವೆಂಬ ಸಾರಥಿ- ಇವುಗಳಿಂದ ಕೂಡಿರುವ ಈ ಯೋಗರಥದಮೇಲೆ ಕ್ಷೇತ್ರಜ್ಞನು ಕುಳಿತಿರುವನು, ಇದು ಮೆಲ್ಲಮೆಲ್ಲಗೆ ನಡೆಯುತ್ತಿರುವದು. ಶ್ರದ್ಧಾದಮಪೂರ್ವಕವಾಗಿ ಮುನ್ನಡೆಯುತ್ತಿದ್ದರೂ ತ್ಯಾಗವೆಂಬ ಸೂಕ್ಷ್ಮಗುಣವು ಹಿಂಗಡೆ ಕಾಯ್ದುಕೊಂಡಿರುತ್ತದೆ.

ಮನೋಮಯವಾದ ಈ ರಥವು ಧ್ಯಾನವೆಂಬ ಶುದ್ಧಮಾರ್ಗದಲ್ಲಿ ಚಲಿಸುತ್ತಿರುವದು. ಜೀವಾತ್ಮಯುಕ್ತವಾದ ಈ ದಿವ್ಯರಥವು ಬ್ರಹ್ಮಲೋಕಕ್ಕೆ ಹೋಗುವ ಮಹಿಮೆಯುಳ್ಳದ್ದು.

ಇನ್ನು ಯೋಗರಥದ ಮೇಲೆ ಕುಳಿತು ಸಾಧನವನ್ನು ಮಾಡುವ ಇಚ್ಛೆಯುಳ್ಳವನಾಗಿ ಅವಿನಾಶಿಯಾದ ಪರಬ್ರಹ್ಮವನ್ನು ಮುಟ್ಟಬೇಕೆಂಬ ಮನಸ್ಸುಳ್ಳವನಿಗೆ ಬೇಗನೆ ಪಡೆಯುವ ವಿಧಾನವನ್ನು ತಿಳಿಯಿಸುವೆನು. (ಪೃಥ್ವ್ಯಪ್ತೇಜೋವಾಯ್ವಾಕಾಶಬುದ್ಧ್ಯಹಂಕಾರವಿಷಯದ) ಏಳುಧಾರಣೆಗಳನ್ನು ಮಾಡಬೇಕು, ಇವುಗಳ ಮೊದಲು ಬೆನ್ನುಹಿಡಿದ (ಗಂಧರಸರೂಪಸ್ಪರ್ಶಶಬ್ದ, ಬುದ್ಧ್ಯಹಂವೃತ್ತಿಗಳೆಂಬ) ಅಷ್ಟೇ ಸಂಖ್ಯೆಯ ಪ್ರಭಾವರಣೆಗಳು ಇರಬೇಕು. ಇದರಿಂದ ಸಾಧಕನು ಪೃಥಿವ್ಯಪ್ತೇಜೋವಾಯ್ವಾಕಾಶಬುದ್ಧ್ಯಹಂಕಾರ ಇವುಗಳ ಮೇಲೂ ಅವ್ಯಕ್ತದ ಮೇಲೂ ಐಶ್ವರ್ಯವನ್ನು ಕ್ರಮಕ್ರಮವಾಗಿ ಪಡೆದುಕೊಳ್ಳುವನು. ಈ ಯೋಗಾಭ್ಯಾಸದಲ್ಲಿ ಪ್ರವೃತ್ತನಾದವನು ಈ ಐಶ್ವರ್ಯಗಳ ಬಳಿಕ ಯಾವಯಾವ ಸಿದ್ಧಿಯನ್ನು ಪಡೆದುಕೊಳ್ಳುವನೆಂದರೆ, ಈ ಸ್ಥೂಲದೇಹದ ಅಭಿಮಾನವು ತಪ್ಪಿದ ಬಳಿಕ ಸೂಕ್ಷ್ಮದೃಷ್ಟಿಯ ನಿಮಿತ್ತದಿಂದ ರೂಪಗಳು ಕಾಣಬರುವವು. ಶಿಶಿರಋತುವಿನ ಕಾವಳವು ಆಕಾಶವನ್ನು ಮುಚ್ಚಿಕೊಂಡಿರುವಂತೆ ದೇಹಾಭಿಮಾನದಿಂದ ಮುಕ್ತನಾಗಿರುವ ಯೋಗಿಗೆ ಮೊದಲಿನ ಅನುಭವವಾಗುವದು; ಬಳಿಕ ಕಾವಳವು ತೊಲಗಲಾಗಿ ಎರಡನೆಯ ರೂಪದರ್ಶನವಾಗುವದು. ಆಕಾಶವೆಲ್ಲ ಜಲರೂಪ ವಾಗಿಯೇ ಕಾಣುವಂತೆ ತನ್ನನ್ನು ಜಲರೂಪವಾಗಿ ಕಂಡುಕೊಳ್ಳುವನು; ಅಬ್ರೂಪವನ್ನು ದಾಟಿದಾಗ ಎಲ್ಲೆಲ್ಲಿಯೂ ಅಗ್ನಿರೂಪವೇ ಕಾಣಿಸಿಕೊಳ್ಳುವದು. ಅದೂ ಮರೆಯಾಗಲು ಪೀತಶಸ್ತ್ರವಾದ ವಾಯುವೇ ಕಾಣಿಸಿಕೊಳ್ಳುವದು. ಅದರ ಆಕಾರವು ಉಣ್ಣೆಯ ಬಣ್ಣವಾಗಿರುತ್ತದೆ. ಬಳಿಕ ಶ್ವೇತಗತಿಯನ್ನು ಪಡೆದ ಸೂಕ್ಷ್ಮವಾಯುತತ್ತ್ವವು ಕಾಣಿಸಿಕೊಳ್ಳುವದು; ಆಗ ಬ್ರಹ್ಮದಲ್ಲಿ ಭೇದವನ್ನು ಪಡೆಯಲಿಚ್ಛಿಸುವ ಯೋಗಿಗೆ ಅಶುಕ್ಲವಾದ ಚಿತ್ತಸೂಕ್ಷ್ಮತ್ವವು ಪ್ರಾಪ್ತವಾಗುವದು.

ಈ ಸಿದ್ಧಿಗಳುಂಟಾದಾಗ ಯಾವ ಫಲಗಳುಂಟಾಗುವವೆಂಬುದನ್ನು ಹೇಳುವೆನು ಕೇಳು: ಪಾರ್ಥಿವೈಶ್ವರ್ಯವು ಸಿದ್ಧಿಯಾಗಲು ಯೋಗಿಗೆ ಸೃಷ್ಟಿಕರ್ತೃತ್ವದ ಶಕ್ತಿಯುಂಟಾಗುವದು. ಅವನು ಪ್ರಜಾಪತಿಯಂತೆ ಕ್ಷೋಭರಹಿತನಾಗಿ ತನ್ನ ಶರೀರದಿಂದ ಪ್ರಜೆಗಳನ್ನು ಸೃಜಿಸುವನು. ವಾಯುತತ್ತ್ವದ ಸಿದ್ಧಿಯಾಗಲು ಬೆರಳ

ತುದಿಯಿಂದಲೊ, ಕೈಕಾಲುಗಳಿಂದಲೊ– ತುಳಿದಮಾತ್ರದಿಂದ ತಾನೊಬ್ಬನೇ ಪೃಥಿವಿಯನ್ನು ಅಲುಗಾಡಿಸಲು ಶಕ್ತನಾಗುವನು ಎನ್ನುತ್ತಾರೆ, ಆಕಾಶತತ್ತ್ವ ರೂಪನಾದವನು ಆಕಾಶದಂತೆ ಸರ್ವವ್ಯಾಪಿಯಾಗಿ ಅಂತರ್ಧಾನವಾಗುವದಕ್ಕೆ ಶಕ್ತನಾಗುವನು. ಹೀಗೆಯೇ ಜಲತತ್ತ್ವದ ಸಿದ್ಧಿಯಾದಾಗ ಆಶಯಗಳನ್ನೆಲ್ಲ ಕುಡಿದುಬಿಡುವನು. ಅಗ್ನಿತತ್ತ್ವದ ಸಿದ್ಧಿಯಾದರೆ ಅವನ ತೇಜೋರೂಪವನ್ನು ಯಾರೂ ನೋಡುವದಕ್ಕೆ ಆಗದೆ ಇರುತ್ತದೆ. ಅಹಂಕಾರವನ್ನು ಗೆದ್ದುಕೊಂಡಾಗ ಐದು ಭೂತಗಳೂ ಅವನ ವಶವಾಗುವವು. ಪಂಚಭೂತಗಳಿಗೂ ಅಹಂಕಾರಕ್ಕೂ ಕಾರಣವಾಗಿರುವ ಬುದ್ಧಿಯು ಜಿತವಾದರೆ ಆ ಯೋಗಿಗೆ ನಿರ್ದುಷ್ಟವಾದ ಪ್ರತಿಭೆಯುಂಟಾಗಿ ವೃದ್ಧಿಯಾಗುವದು. ಬಳಿಕ ಈ ಜಗತ್ತೆಲ್ಲವೂ ಅವ್ಯಕ್ತದಲ್ಲಿ ಸೇರಿಹೋಗುವದು; ಆ ಅವ್ಯಕ್ತದಿಂದಲೇ ಅಲ್ಲವೆ, ವ್ಯಕ್ತವು ಹೊರಹೊರಟಿರುವದು?

ಅಪ್ಪ, ಅವ್ಯಕ್ತವಿದ್ಯೆಯನ್ನು ವಿವರವಾಗಿ ಹೇಳುವೆನು ಕೇಳು. ಮೊದಲು ಸಾಂಖ್ಯದರ್ಶನದ ಪ್ರಕಾರ ವ್ಯಕ್ತವಿದ್ಯೆಯ ಸ್ವರೂಪವನ್ನು ತಿಳಿಸುವೆನು ಕೇಳು: ಸಾಂಖ್ಯ, ಯೋಗ– ಈ ಎರಡು ದರ್ಶನಗಳಲ್ಲಿಯೂ ಇಪ್ಪತ್ತೈದು ತತ್ತ್ವಗಳು ಸಮಾನವಾಗಿರುತ್ತವೆ. ಆದರೆ ವಿಶೇಷವನ್ನು ಹೇಳುವೆನು ಕೇಳು: ಯಾವದು ಹುಟ್ಟುತ್ತದೆಯೋ ವೃದ್ಧಿಯಾಗುತ್ತದೆಯೋ ಜೀರ್ಣವಾಗಿ ನಾಶವಾಗುತ್ತದೆಯೋ – ಈ ನಾಲ್ಕು ಲಕ್ಷಣಗಳಿಂದೊಡಗೂಡಿರುವ ಅದು **ವ್ಯಕ್ತ**ವೆನಿಸುತ್ತದೆ. ಇದಕ್ಕೆ ವಿಪರೀತವಾಗಿರುವದಲ್ಲ, ಅದು **ಅವ್ಯಕ್ತ**ವೆನಿಸುತ್ತದೆ. ವೇದಗಳಲ್ಲಿಯೂ ಸಿದ್ಧಾಂತಗಳಲ್ಲಿಯೂ ಇಬ್ಬರು ಆತ್ಮರುಗಳನ್ನು ಹೇಳಿರುತ್ತದೆ: ಮೊದಲನೆಯವನಾದ ಜೀವನು ಜನ್ಮಾದಿಚತುರ್ಲಕ್ಷಣಯುಕ್ತನಾಗಿರುತ್ತಾನೆ; ಅವನು ಧರ್ಮಾರ್ಥಕಾಮ ಮೋಕ್ಷವೆಂಬ ಚತುರ್ವರ್ಗದಿಂದೊಡಗೂಡಿದವನೆಂದು ಹೇಳುತ್ತಾರೆ. ವ್ಯಕ್ತವು ಅವ್ಯಕ್ತದಿಂದ ಉಂಟಾಗುತ್ತದೆ; ವ್ಯಕ್ತವು ಜಡ, ಅವ್ಯಕ್ತವು ಚೇತನ. ವ್ಯಕ್ತವನ್ನು ಸತ್ತ್ವವೆಂದೂ **ಕ್ಷೇತ್ರಜ್ಞ**ವೆಂದೂ ಕರೆಯುತ್ತಾರೆ. ಹೀಗೆ ಇವೆರಡನ್ನೂ ತಿಳಿಸಿದ್ದಾಗಿದೆ. ವೇದಗಳಲ್ಲಿ ಇಬ್ಬರು ಆತ್ಮರುಗಳು ಇದಾರೆಂದೂ ಹೇಳಿದ್ದಾಗಿದೆ. ವಿಷಯಗಳಲ್ಲಿ ಆಸಕ್ತನಾದವನು ಯಾವಾಗ ಅವುಗಳಿಂದ ಹಿಂತಿರುಗುವನೋ ಆಗ ಅವನು ಮುಕ್ತನಾಗುತ್ತಾನೆ. ಸಾಂಖ್ಯದರ್ಶನದಲ್ಲಿ ಇದೇ ಮೋಕ್ಷದ ಲಕ್ಷಣವು.

ಯಾವನಿಗೆ ಮಮತ್ವವಾಗಲಿ, ಅಹಂಕಾರವಾಗಲಿ ಇರುವದಿಲ್ಲವೋ,

ಯಾವನು ಶೀತೋಷ್ಣಾದಿದ್ವಂದ್ವರಹಿತನಾಗಿರುವನೋ, ಸಂಶಯಗಳನ್ನೆಲ್ಲ ಕತ್ತರಿಸಿಕೊಂಡಿರುವನೋ, ಯಾವನಿಗೆ ಕ್ರೋಧವಾಗಲಿ ದ್ವೇಷವಾಗಲಿ ಇರುವದಿಲ್ಲವೋ, ಯಾವ ಮನುಷ್ಯನು ಸುಳ್ಳುಮಾತುಗಳನ್ನು ಆಡುವದಿಲ್ಲವೋ, ತನ್ನನ್ನು ಬಯ್ದರೂ ಹೊಡೆದರೂ ಮತ್ತೊಬ್ಬನಿಗೆ ಕೆಟ್ಟದ್ದನ್ನು ಚಿಂತಿಸದಿರುವನೋ ಯಾವನು ಎಲ್ಲರಲ್ಲಿಯೂ ಮಿತ್ರಭಾವದಿಂದಲೇ ಇರುತ್ತಿರುವನೋ ಯಾವನು ವಾಗ್ದಂಡ, ಕರ್ಮದಂಡ, ಮನೋದಂಡ– ಮೂರನ್ನೂ ತ್ಯಜಿಸಿರುವನೋ ಯಾವನು ಸರ್ವಭೂತಗಳಲ್ಲಿಯೂ ಸಮನಾಗಿ ವರ್ತಿಸುತ್ತಿರುವನೋ ಅವನು ಬ್ರಹ್ಮವನ್ನು ಮೀರಿದ ಪದವಿಯನ್ನು ಪಡೆಯುತ್ತಾನೆ.

ಯಾವನು ಏನನ್ನೂ ಇಚ್ಛಿಸುವದಿಲ್ಲವೋ, ಅನಿಚ್ಛೆಯನ್ನೂ ಮಾಡದಿರುವನೋ ಶರೀರಯಾತ್ರೆಯನ್ನು ಮಾತ್ರ ನಿರ್ವಹಿಸಿಕೊಂಡಿರುವನೋ ವಿಷಯಗಳಲ್ಲಿ ಲೋಲುಪನಾಗದೆ ವ್ಯಥೆಪಡದೆ, ಶಾಂತನಾಗಿರುವನೋ ಯಾವನು ಕರ್ಮದಲ್ಲಿ ತೊಡಗುವ ಸ್ವಭಾವವಾಗಲಿ, ಕರ್ಮವನ್ನು ಬಿಡುವ ಹವ್ಯಾಸವಾಗಲಿ ಇಲ್ಲದಿರುವನೋ, ಯಾವನಿಗೆ ಇಂದ್ರಿಯವು ಅನೇಕಾಗ್ರವಾಗಿರುವದಿಲ್ಲವೋ ಯಾವನ ಮನಸ್ಸು ವಿಕ್ಷಿಪ್ತವಾಗದೆ ಇರುವದೋ ಯಾವನು ಸರ್ವಭೂತಸಂಘಗಳಲ್ಲಿಯೂ ಮಿತ್ರಭಾವದಿಂದಿರುವನೋ, ಯಾವನು ಮಣ್ಣು ಹೆಂಟೆ, ಕಲ್ಲು, ಚಿನ್ನ– ಎಲ್ಲವುಗಳಲ್ಲಿಯೂ ಸಮಭಾವದಿಂದಿರುವನೋ ಯಾವ ವಿವೇಕಿಯು ತನ್ನ ನಿಂದೆ, ಹೊಗಳಿಕೆ– ಇವೆರಡರಲ್ಲಿಯೂ ಸಮನಾಗಿರುವನೋ ಯಾವನು ಯಾವ ಕಾಮಗಳಲ್ಲಿಯೂ ಸ್ಪೃಹಾರಹಿತನಾಗಿರುವನೋ, ಬ್ರಹ್ಮಚರ್ಯದಲ್ಲಿ ದೃಢವಾದ ನಿಯಮದಿಂದಿರುತ್ತಿರುವನೋ, ಯಾವನು ಎಲ್ಲಾ ಪ್ರಾಣಿಗಳಲ್ಲಿಯೂ ಹಿಂಸ್ರಸ್ವಭಾವವಿಲ್ಲದವನಾಗಿರುವನೋ ಇಂಥ **ಸಾಂಖ್ಯನು** ಮುಕ್ತನಾಗುವನು.

ಈಗ **ಯೋಗ**ದಿಂದ, ಯಾವ ನಿಮಿತ್ತಗಳಿಂದ ಮುಕ್ತನಾಗುತ್ತಾನೋ, ಅದನ್ನು ಹೇಳುವೆನು, ಕೇಳಿ ತಿಳಿದುಕೊ, ಯೋಗದಿಂದುಟಾದ ಐಶ್ವರ್ಯವನ್ನು ಅತಿಕ್ರಮಿಸಿರುವ ಯಾವಾತನು ಅವನ್ನು ದಾಟಿರುವನೋ ಅವನು ಮುಕ್ತನಾಗುತ್ತಾನೆ.

ಇಗೊ, ಭಾವಶುದ್ಧಿಯಿಂದ ಉಂಟಾಗುವ ಬುದ್ಧಿಯುನ್ನು ನಿನಗೆ ಹೇಳಿರುತ್ತೇನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಹೀಗೆ ಸಾಧನಮಾಡಿದವನು ನಿರ್ದ್ವಂದ್ವನಾಗುವನು, ಮತ್ತು ಬ್ರಹ್ಮಭಾವವನ್ನು ಪಡೆದುಕೊಳ್ಳುವನು.

* * * * *

## 22. ಬುದ್ಧಿಯ ಪ್ರಭಾವ, ಪ್ರಾಣಿಗಳಲ್ಲಿ ತಾರತಮ್ಯ*

ಬಳಿಕ ವ್ಯಾಸರಿಂತೆಂದರು: ಧೀರನಾದವನು ಜ್ಞಾನವೆಂಬ ಹರಿಗೋಲನ್ನು ಹಿಡಿದು ತನಗೆ ಶಾಂತಿಯನ್ನು ಕೋರಬೇಕು, ಮುಳುಗುತ್ತಲೂ ತೇಲುತ್ತಲೂ ಇರುವವನು ಜ್ಞಾನವನ್ನೇ ಅವಲಂಬಿಸಬೇಕು.

ಹೀಗೆನ್ನಲು ಶುಕನು ಕೇಳುತ್ತಾನೆ: ಜನ್ಮಮೃತ್ಯುಗಳೆರಡನ್ನೂ ದಾಟುವದಕ್ಕೆ ಬೇಕಾದ ಆ ಜ್ಞಾನವು, ಆ ವಿದ್ಯೆಯು ಯಾವದು? ಅದು ಪ್ರವೃತ್ತಿಲಕ್ಷಣವಾದ ವಿದ್ಯೆಯೊ, ನಿವೃತ್ತಿಲಕ್ಷಣವಾದ ವಿದ್ಯೆಯೊ? ತಂದೆಯೆ, ಇದನ್ನು ನನಗೆ ಹೇಳು.

ವ್ಯಾಸರು ಇದಕ್ಕೆ ಕೊಟ್ಟ ಉತ್ತರವೇನೆಂದರೆ:

"ಯಾರಿಗೆ ನಿಯಮದಿಂದ ಸ್ವಭಾವವೇ ಕಾರಣವೆಂಬುದು ಅಭಿಮತ ವಾಗಿರುತ್ತದೆಯೊ, ಅವರಿಗೆ – ನೊಸೆಹುಲ್ಲನ್ನು ಗಾಳಿಗೆ ತೂರುವವರಿಗೆ ಹುಲ್ಲೂ ಇಲ್ಲ, ಒಳಗಿನ ದಿಂಡೂ ಇಲ್ಲವಾಗಿರುವಂತೆ– ಯಾವ ತತ್ತ್ವವೂ ಸಿಕ್ಕುವದೇ ಇಲ್ಲ; ಯಾರು ಈ ಪಕ್ಷವನ್ನು ಅನುಸರಿಸಿ, ಸಾಧನದಿಂದ ಹಿಂಜರಿಯುತ್ತಾರೋ, ಸ್ವಭಾವವೇ ಕಾರಣವೆಂದು ಹಿಂಜರಿಯುವ ಅವರಿಗೆ ಶ್ರೇಯಸ್ಸು ಪ್ರಾಪ್ತವಾಗುವದಿಲ್ಲ. ಏಕೆಂದರೆ ಸ್ವಭಾವವೆಂಬುದು ವಿನಾಶಕ್ಕೆ ಕಾರಣವಾಗಿರುತ್ತದೆ. ಮನಸ್ಸಿನಲ್ಲುಂಟಾ ಗಿರುವ ಮೋಹದ ಕರ್ಮವೇ ಈ ಸ್ವಭಾವವಾದವು. ಸ್ವಭಾವ ಮತ್ತು ಪರಿಭಾವ– ಈ ಎರಡರ ತತ್ತ್ವವೇ ಇದು.

ಕ್ರೀಡಾಸ್ಥಾನಗಳನ್ನೂ ಮನೆಗಳನ್ನೂ ರೋಗಗಳಿಗೆ ಔಷಧಗಳನ್ನೂ ಪ್ರಜ್ಞಾವಂತರು ಏರ್ಪಡಿಸುತ್ತಾರೆ, ಜ್ಞಾನವಂತರು ಅವುಗಳನ್ನು ಮಾಡಿಕೊಳ್ಳುತ್ತಾರೆ. ಪ್ರಜ್ಞೆಯೇ ಅರ್ಥಗಳನ್ನು ದೊರಕಿಸಿಕೊಡುತ್ತದೆ; ಪ್ರಜ್ಞೆಯೇ ಶ್ರೇಯಸ್ಸನ್ನು ಪಡೆಯುತ್ತದೆ. ರಾಜರು ಇತರರಂತೆಯೇ ಇರುತ್ತಿದ್ದರೂ ಪ್ರಜ್ಞೆಯಿಂದ ರಾಜ್ಯವನ್ನು ಭೋಗಿಸು ತ್ತಿರುತ್ತಾರೆ. ಪ್ರಾಣಿಗಳಲ್ಲಿ ತಾರತಮ್ಯವು ಜ್ಞಾನದಿಂದಲೇ ಕಾಣಬರುತ್ತಿದೆ. ಪ್ರಾಣಿಗಳ ಸೃಷ್ಟಿಯು ವಿದ್ಯೆಯಿಂದಲೇ ಆಗಿರುತ್ತದೆ, ಇಲ್ಲಿ ವಿದ್ಯೆಯೊಂದೇ ಪರಗತಿ. ಸ್ಥಾವರ ಪ್ರಾಣಿಗಳಿಗಿಂತ ಜಂಗಮ ಪ್ರಾಣಿಗಳು ವಿಶಿಷ್ಟವಾಗಿರುತ್ತವೆ. ಏಕೆಂದರೆ ಅವುಗಳಲ್ಲಿ

---

* ಸಂಪುಟ 39; ಸಂಚಿಕೆ 9; ಮೇ 1970

ವ್ಯಾಪಾರವೆಂಬುದು ಹೆಚ್ಚಿಗೆಯಾಗಿರುತ್ತದೆಯಷ್ಟೆ? ಪ್ರಾಣಿಗಳಲ್ಲಿ ಬಹುಪಾದ ಪ್ರಾಣಿಗಳು, ದ್ವಿಪಾದಪ್ರಾಣಿಗಳು – ಎರಡೂ ಇವೆ. ಅವುಗಳೊಳಗೆ ದ್ವಿಪಾದ ಪ್ರಾಣಿಗಳೇ ವಿಶಿಷ್ಟವಾಗಿರುತ್ತವೆ. ಏಕೆಂದರೆ ಅವು ಅನ್ನವನ್ನು ಭುಂಜಿಸುತ್ತವೆ. ದ್ವಿಪಾದಪ್ರಾಣಿಗಳೊಳಗೆ ಪಾರ್ಥಿವ, ಅಪಾರ್ಥಿವ– ಎಂದು ಎರಡು ಬಗೆ. ಪಾರ್ಥಿವಪ್ರಾಣಿಗಳೊಳಗೆ ಮಧ್ಯಮಪ್ರಾಣಿಗಳು, ಅಧಮಪ್ರಾಣಿಗಳು– ಎಂದು ಎರಡು ಬಗೆ; ಅವುಗಳೊಳಗೆ ಮಧ್ಯಮಪ್ರಾಣಿಗಳು ವಿಶಿಷ್ಟ; ಏಕೆಂದರೆ ಅವು ಜಾತಿಧರ್ಮಗಳನ್ನು ಧಾರಣೆಮಾಡುತ್ತಿರುವವು, ಮಧ್ಯಮಪ್ರಾಣಿಗಳಲ್ಲಿ ಧರ್ಮ ವನ್ನರಿತವು, ಉಳಿದವು– ಎಂದು ಎರಡು ಬಗೆ; ಅವುಗಳಲ್ಲಿ ವೇದವನ್ನರಿತವುಗಳು ವಿಶಿಷ್ಟ, ಏಕೆಂದರೆ ವೇದವು ಅವುಗಳಲ್ಲಿ ನೆಲೆನಿಂತಿರುತ್ತದೆ. ವೇದಜ್ಞಪ್ರಾಣಿಗಳಲ್ಲಿ ಪ್ರವಚನಕರ್ತೃಗಳೆಂದೂ ಅದಕ್ಕಿಂತ ಬೇರೆಯೆಂದೂ ಎರಡು ಬಗೆ; ಅವುಗಳಲ್ಲಿ ಪ್ರವಚನಮಾಡುವ ಪ್ರಾಣಿಗಳೇ ವಿಶಿಷ್ಟ; ಏಕೆಂದರೆ ಅವುಗಳೇ ಸರ್ವಧರ್ಮಗಳನ್ನೂ ಧರಿಸಿರುತ್ತವೆ. ವೇದಗಳನ್ನೂ ವೇದೋಕ್ತವಾದ ಕರ್ಮಗಳನ್ನೂ ಫಲಗಳನ್ನೂ ಯಾರು ಅರಿತಿರುವರೋ ಅವರೇ ಪ್ರವಕ್ತೃಗಳಲ್ಲಿ ಶ್ರೇಷ್ಠರು; ಏಕೆಂದರೆ ಅವರಿಂದಲೇ ಧರ್ಮಸಹಿತವಾದ ವೇದಗಳು ಹೊರಕ್ಕೆ ಬಂದಿರುತ್ತವೆ. ಪ್ರವಕ್ತೃಗಳಲ್ಲಿ ಆತ್ಮಜ್ಞರೆಂದೂ ಮಿಕ್ಕವರೆಂದೂ ಎರಡು ಬಗೆ; ಅವರೊಳಗೆ ಆತ್ಮಜ್ಞಪ್ರಾಣಿಗಳೇ ವಿಶಿಷ್ಟ, ಏಕೆಂದರೆ ಅವು ಜನ್ಮಮೃತ್ಯುಗಳ ತತ್ತ್ವವನ್ನು ಅರಿತುಕೊಂಡಿರುವವು.

ಯಾವನು ಎರಡು ಧರ್ಮಗಳನ್ನೂ ಅರಿತುಕೊಂಡಿರುವನೋ ಅವನೇ ಸರ್ವಜ್ಞನು, ಸರ್ವವಿದನು, ಅವನೇ ತ್ಯಾಗಿಯು, ಸತ್ಯಸಂಕಲ್ಪನು, ಅವನೇ ಸತ್ಯಸ್ವರೂಪನು, ಶುಚಿಯು, ಸಮರ್ಥನು, ಬ್ರಹ್ಮಜ್ಞಾನದಲ್ಲಿ ಪ್ರತಿಷ್ಠನಾಗಿರುವವನನ್ನೇ ದೇವತೆಗಳು **ಬ್ರಾಹ್ಮಣ**ನೆಂದು ಎಣಿಸುತ್ತಾರೆ. ಅವನು ಶಬ್ದಬ್ರಹ್ಮದಲ್ಲಿ ನಿಷ್ಣಾತನಾಗಿರು ತ್ತಾನೆ. ಪರಬ್ರಹ್ಮದ ತತ್ತ್ವವನ್ನು ನಿಶ್ಚಿತವಾಗಿ ಅರಿತುಕೊಂಡಿರುತ್ತಾನೆ, ಅಷ್ಟ, ಒಳಗಿರುವ ಮತ್ತು ಹೊರಗಿರುವ ವಿಚಾರದಲ್ಲಿ ಅಧಿಯಾಜ್ಯಾಧಿದೈವತಗಳನ್ನು ಅರಿತಿರುವವರೇ **ದೇವತೆಗಳು;** ಅವರೇ **ದ್ವಿಜರು.** ಅವರಲ್ಲಿಯೇ ಈ ಜಗತ್ತೆಲ್ಲವೂ ಪ್ರತಿಷ್ಠಿತವಾಗಿರುತ್ತದೆ. ಅವರ ಮಹಿಮೆಗೆ ಸಮನಾದದ್ದು ಯಾವದೂ ಇಲ್ಲವೇ ಇಲ್ಲ. ಅದ್ಯಂತಗಳನ್ನೂ ಪ್ರಲಯವನ್ನೂ ಕರ್ಮವನ್ನೂ ಸರ್ವಪ್ರಕಾರದಿಂದಲೂ ಮೀರಿದವ ರಾಗಿ ಚತುರ್ವಿಧ ಪ್ರಾಣಿಗಳಿಗೂ ಅವರೇ ಒಡೆಯರಾಗಿ ಸ್ವಯಂಭುಗಳಾಗಿರುತ್ತಾರೆ.

## 23. ಕರ್ಮತತ್ತ್ವ, ಯುಗಧರ್ಮ, ಕಾಲಮಹತ್ವ*

**ವ್ಯಾಸರಿಂತೆಂದರು:** ಬ್ರಾಹ್ಮಣನಿಗೆ ಇದು ಪ್ರಾಚೀನಕಾಲದಿಂದ ವಿಹಿತ ವಾಗಿರುವ ವೃತ್ತಿಯು. ಜ್ಞಾನವಂತನಾಗಿಯೇ ಕರ್ಮಗಳನ್ನು ಮಾಡಿದರೆ ಎಲ್ಲೆಲ್ಲಿಯೂ ಸಿದ್ಧಿಯನ್ನು ಪಡೆಯುತ್ತಾನೆ. ಇಲ್ಲಿ ಸಂಶಯವುಂಟಾಗದಿದ್ದರೇ ಸಿದ್ಧಿಯಾದೀತು. ಇಲ್ಲಿ ಸಂಶಯವೇನೆಂದರೆ: ಕರ್ಮವು ಸ್ವಭಾವಸಿದ್ಧವೊ, ಜ್ಞಾನದಿಂದಾಗುವದೊ, ಇದಕ್ಕೆ ಉತ್ತರವೇನೆಂದರೆ: ವೈದಿಕಕರ್ಮವಾದರೆ ಜ್ಞಾನಜನ್ಯವಾಗಿರುತ್ತದೆ, (ಇಲ್ಲದಿದ್ದರೆ) ಸ್ವಾಭಾವಿಕವಾಗಿರುತ್ತದೆ. ಈ ವಿಷಯದಲ್ಲಿ ಉಪಪತ್ತಿಯನ್ನೂ ಅನುಭವವನ್ನೂ ಸೇರಿಸಿಕೊಂಡು ವರ್ಣಿಸುವೆನು ಕೇಳು:

ಕೆಲವರು ಪೌರುಷವೇ ಕರ್ಮಗಳಲ್ಲಿ ಪ್ರಧಾನವೆನ್ನುವರು, ದೈವ (ಅದೃಷ್ಟ) ವನ್ನೇ ಹೊಗಳುವರು, ಬೇರೆಯ ಕೆಲವು ಜನರು ಸ್ವಭಾವವನ್ನೇ ಹೆಚ್ಚೆನ್ನುತ್ತಿರುವರು. ಪೌರುಷ, ಕರ್ಮ, ದೈವ– ಇವು ಮೂರು ಕಾಲವ್ಯಾಪಾರದ ಸ್ವಭಾವದಿಂದ ಪ್ರಾಧಾನ್ಯವನ್ನು ಪಡೆಯುವವೆನ್ನುವರು; ಈ ಮೂರೂ ಬೇರೆಬೇರೆಯಾಗಿಯೇ ಕಾರಣವಾಗಿರುವವೆಂದು ಕೆಲವರು, ಹೀಗೆ ನಿರ್ಣಯಿಸುವದಕ್ಕೆ ಕಾರಣವಿಲ್ಲವೆಂದು ಕೆಲವರೆನ್ನುತ್ತಾರೆ. ಇದು 'ಹೀಗೆಯೇ', 'ಹೀಗಲ್ಲ', 'ಈ ಎರಡೂ ಆಗಬಹುದು', 'ಎಂದೂ ಆಗಲಾರದು'– ಎಂದು ಕರ್ಮದೃಷ್ಟಿಯವರು ಹೇಳುತ್ತಿರುವರು; ಸತ್ತ್ವನಿಷ್ಠರಾದವರು ಸಮದರ್ಶಿಗಳಾಗಿರುವರು.

ತ್ರೇತಾಯುಗದಲ್ಲಿಯೂ ದ್ವಾಪರಯುಗದಲ್ಲಿಯೂ ಕಲಿಯುಗದಲ್ಲಿಯೂ ಜನಿಸಿದವರು ಸಂಶಯಗ್ರಸ್ತರಾಗಿರುವರು; ಕೃತಯುಗದಲ್ಲಿ ಹುಟ್ಟಿದವರು ತಪಸ್ವಿಗಳೂ ಪ್ರಶಾಂತರೂ ಸತ್ತ್ವನಿಷ್ಠರೂ ಆಗಿರುತ್ತಾರೆ. ಆ ಸತ್ಯಯುಗದಲ್ಲಿ ಎಲ್ಲರೂ ಋಕ್ಕುಗಳಲ್ಲಿಯೂ ಸಾಮಗಳಲ್ಲಿಯೂ ಯಜಸ್ಸುಗಳಲ್ಲಿಯೂ ಭೇದದೃಷ್ಟಿಯಿಲ್ಲದವ ರಾಗಿರುವರು. ರಾಗದ್ವೇಷಗಳನ್ನು ತ್ಯಜಿಸಿದವರಾಗಿರುವರು. ಯಾವನು ತಪೋರೂಪ ವಾದ ಧರ್ಮದಿಂದ ಕೂಡಿದ ತಪೋನಿಷ್ಠನೂ ತತ್ಪರನೂ ಆಗಿರುತ್ತಾನೋ, ಅವನು ಅದರಿಂದ ಮನಸ್ಸಿನಿಂದ ಇಚ್ಛಿಸಿದ ಕಾಮಗಳನ್ನೆಲ್ಲ ಪಡೆದುಕೊಳ್ಳುವನು. ತಪಸ್ಸಿನಿಂದ ಮನುಷ್ಯನು ಬ್ರಹ್ಮತ್ವವನ್ನು ಪಡೆದುಕೊಂಡು ಜಗತ್ತನ್ನೇ ಸೃಷ್ಟಿಸುವನು.

---

* ಸಂಪುಟ 39; ಸಂಚಿಕೆ 10; ಜೂನ್ 1970

ಆ ಬ್ರಹ್ಮಭಾವವನ್ನು ಪಡೆದುಕೊಂಡವನು ಅದರಿಂದಲೇ ಸರ್ವಭೂತಗಳಿಗೂ ಪ್ರಭುವಾಗುವನು. ಆ (ಬ್ರಹ್ಮವು) ವೇದವಾದಗಳಲ್ಲಿ ಗಹನವಾಗಿರುವದೆಂದು ವೇದದರ್ಶಿಗಳು ಹೇಳಿರುತ್ತಾರೆ. ವೇದಾಂತಗಳಲ್ಲಿ ಯಾದರೋ ವ್ಯಕ್ತವಾಗಿರುವದು, ಕರ್ಮಯೋಗದ ಮೂಲಕ ಅದನ್ನು ಕಂಡುಕೊಳ್ಳಬಹುದು.

ಕ್ಷತ್ರಿಯರು ಪಶುಹಿಂಸಾರೂಪವಾದ ಯಜ್ಞದವರು, ವೈಶ್ಯರು ಹವಿರ್ಯಜ್ಞ ದವರು, ಶೂದ್ರರು ಪರಿಚರ್ಯರೂಪವಾದ ಯಜ್ಞದವರು. ಬ್ರಾಹ್ಮಣರು ಜಪಯಜ್ಞದವರು. ಕಾರ್ಯಕರ್ಮವನ್ನು ತಾತ್ಪರ್ಯದಿಂದ ಮಾಡುತ್ತಿರುವವನು ಸ್ವಾಧ್ಯಾಯದಿಂದ ದ್ವಿಜನೆನಿಸುವನು. ಮತ್ತೇನನ್ನಾದರೂ ಮಾಡಲಿ ಬಿಡಲಿ, ಮೈತ್ರಿಭಾವದಿಂದ ಕೂಡಿದಾತನು ಬ್ರಾಹ್ಮಣನೆನಿಸುವನು. ಸತ್ಯಯುಗದಲ್ಲಿಯೂ ತ್ರೇತಾಯುಗದಲ್ಲಿಯೂ ವೇದಗಳೂ ಯಜ್ಞಗಳೂ ವರ್ಣಾಶ್ರಮಗಳೂ ವಿಶುದ್ಧವಾಗಿರುತ್ತವೆ. ಆದರೆ ಇವು ದ್ವಾಪರಯುಗದಲ್ಲಿ ಆಯಸ್ಸು ಕಡಿಮೆಯಾಗುವ ಕಾರಣದಿಂದ ವಿಂಗಡವಾಗುವವು. ದ್ವಾಪರದಲ್ಲಿಯೂ ಕಲಿಯುಗದಲ್ಲಿಯೂ ವೇದಗಳು ನಾಶವಾಗುತ್ತಾ ಬರುವವು. ಕಲಿಯ ಅಂತದಲ್ಲಿ ಎಲ್ಲಿಯೋ ಕೆಲವು ಕಡೆಗಳಲ್ಲಿ ಕಾಣಿಸುತ್ತಿರುವವು, ಮಿಕ್ಕಕಡೆಗಳಲ್ಲಿ ಕಾಣಿಸದೆಯೂ ಹೋಗುವವಂತೆ; ಅಧರ್ಮದಿಂದ ಪೀಡಿತವಾಗಿ ಸ್ವಧರ್ಮಗಳು ಉತ್ಸನ್ನವಾಗುವವು. ಗೋಗಳ, ಭೂಮಿಯ, ನೀರಿನ, ಗಿಡಮೂಲಿಕೆಗಳ ರಸಗಳು, ಹಾಗೆಯೇ ಕಾಣದಾಗುವವು; ವೇದಗಳೂ ವೇದಧರ್ಮಗಳೂ ಆಶ್ರಮಗಳೂ ಅಧರ್ಮದಿಂದ ಮರೆಯಾಗುವವು; ಸ್ವಧರ್ಮನಿರತರಾಗಿರುವವರನ್ನು– ಸ್ಥಾವರಪ್ರಾಣಿಗಳನ್ನೂ ಜಂಗಮಪ್ರಾಣಿಗಳನ್ನೂ ಮಳೆಯು ಭೂಮಿಯ ಮೇಲೆ ಬಿದ್ದಾಗ ಹೇಗೆ ಸ್ಥಾವರಗಳನ್ನು ಪುಷ್ಟಿಗೊಳಿಸು ವದೋ– ಹಾಗೆಯೇ ವೇದಗಳನ್ನೂ ವೇದಾಂತಗಳನ್ನೂ ಪರಮೇಶ್ವರನು ಯುಗ ಯುಗದಲ್ಲಿಯೂ ಪ್ರಕಟಗೊಳಿಸುವನು. ಅನಾದ್ಯನಂತವಾದ ಕಾಲವು ಹೀಗೆ ಬೇರೆಬೇರೆಯಾಗುತ್ತಾ ನಾನು ಈ ಮೊದಲೇ ಹೇಳಿರುವಂತೆ ಪ್ರಜೆಗಳನ್ನು ಸೃಷ್ಟಿಸುತ್ತಲೂ ಭಕ್ಷಿಸುತ್ತಲೂ ಇರುವದು. ಈ ಕಾಲರೂಪವಾದ ತತ್ತ್ವವೇ ಪ್ರಾಣಿಗಳ ಸೃಷ್ಟಿಸ್ಥಿತಿಪ್ರಲಯಗಳಿಗೆ ಕಾರಣವಾಗಿರ ತ್ತದೆ. ಹೀಗೆ ಪ್ರಾಣಿಗಳು ಅಸಂಖ್ಯಾತವಾಗಿ ದ್ವಂದ್ವಯುಕ್ತವಾಗಿ ಸ್ವಭಾವದಿಂದಲೇ ಸೃಷ್ಟವಾಗುತ್ತಿರುವವು. ಅಪ್ಪ, ನೀನು ಕೇಳಿದ ಸೃಷ್ಟಿ, ಕಾಲ, ಧಾರಣೆ, ವೇದಗಳು, ಕರ್ತೃ, ಕ್ರಿಯೆ, ಫಲ– ಇವೆಲ್ಲವನ್ನೂ ಹೇಳಿರುತ್ತೇನೆ.

* * * * *

## 24. ಜ್ಞಾನಸಾಧನ, ಜ್ಞಾನಮಹಿಮೆ*

ಇಂತೆಂದ ವ್ಯಾಸಮಹರ್ಷಿಗಳ ವಚನವನ್ನು ಕೇಳಿದ ಶುಕನು ಅದನ್ನು ಬಹುವಾಗಿ ಕೊಂಡಾಡಿ ಮೋಕ್ಷಧರ್ಮ ವಿಷಯಕವಾದ ಪ್ರಶ್ನೆಯನ್ನು ಮಾಡಲು ಉಪಕ್ರಮಿಸಿದನು.

ಶುಕದೇವನಿಂತೆಂದನು: ಪ್ರಜ್ಞಾವಂತನೂ ಶ್ರೋತ್ರಿಯನೂ ಯಜನಶೀಲನೂ ಉತ್ತಮಪ್ರಜ್ಞೆಯನ್ನು ಸಂಪಾದಿಸಿಕೊಂಡಿರುವವನೂ ಅಸೂಯಾರಹಿತನೂ ಆಗಿರುವವನು ಭೂತಭವಿಷ್ಯತ್ಕಾಲಪರಿಚ್ಛೇದವಿಲ್ಲದ ಬ್ರಹ್ಮವನ್ನು ಹೇಗೆ ಪಡೆದುಕೊಳ್ಳುವನು? ಸಾಂಖ್ಯಮಾರ್ಗದಲ್ಲಾಗಲಿ ಯೋಗಮಾರ್ಗದಲ್ಲಾಗಲಿ ತಪಸ್ಸಿನಿಂದಲೊ, ಬ್ರಹ್ಮಚರ್ಯದಿಂದಲೊ, ಸರ್ವತ್ಯಾಗದಿಂದಲೊ, ಮೇಧಾಶಕ್ತಿಯಿಂದಲೊ- ಇವುಗಳೊಳಗೆ ಯಾವ ಸಾಧನದಿಂದ ಬ್ರಹ್ಮಪ್ರಾಪ್ತಿಯಾಗುವದು? ಈ ಪ್ರಶ್ನೆಗೆ ದಯವಿಟ್ಟು ಉತ್ತರವನ್ನು ಹೇಳೋಣಾಗಲಿ! ಮನಸ್ಸಿನ ಮತ್ತು ಇಂದ್ರಿಯಗಳ ಐಕಾಗ್ರ್ಯವು ಹೇಗೆ ದೊರಕೀತು? ಯಾವ ಉಪಾಯದಿಂದ ಅದು ದೊರಕೀತೊ, ಅದನ್ನು ದಯವಿಟ್ಟು ಹೇಳೋಣಾಗಬೇಕು.

ವ್ಯಾಸರು ಇದಕ್ಕೆ ಹೇಳಿದ್ದೇನೆಂದರೆ: ವಿದ್ಯಾತಪಸ್ಸುಗಳನ್ನು ಬಿಟ್ಟರೆ ಇಂದ್ರಿಯನಿಗ್ರಹವನ್ನು ಬಿಟ್ಟರೆ, ಸರ್ವತ್ಯಾಗವನ್ನು ಬಿಟ್ಟರೆ ಮತ್ತೇತರಿಂದಲೂ ಯಾವನೊಬ್ಬನಿಗೂ ಸಿದ್ಧಿಯುಂಟಾಗಲಾರದು. ಬ್ರಹ್ಮನು ಮಹಾಭೂತಗಳೆಲ್ಲವನ್ನೂ ಮೊದಲು ಸೃಷ್ಟಿಸಿರುತ್ತಾನೆ; ಶರೀರಗಳಲ್ಲಿ, ಪ್ರಾಣಿಮಾತ್ರದಲ್ಲಿ ಅವು ಹೆಚ್ಚಾಗಿ ಸೇರಿಕೊಂಡಿರುವವು, ಶರೀರಿಗಳಿಗೆ ಪೃಥ್ವಿಯಿಂದ ದೇಹ, ಅಪ್ಪಿನಿಂದ ಜಿಡ್ಡು, ಅಗ್ನಿಯಿಂದ ಚಕ್ಷುಸ್ಸುಗಳು, ವಾಯುವಿನಿಂದ ಪ್ರಾಣಾಪಾನಗಳು, ಕಣ್ಣುಮೂಗು ಮುಂತಾದ ಛಿದ್ರಗಳಲ್ಲಿ ಆಕಾಶವು; ಕಿವಿಗಳು, ತ್ವಕ್ಕು, ಚಕ್ಷುಸ್ಸುಗಳು, ಜಿಹ್ವೆ, ನಾಸಿಕೆ- ಈ ಐದೂ ವಿಷಯಾನುಭವಕ್ಕೆ ದ್ವಾರಗಳಾಗಿರುವವು. ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಇವು ಐದೂ ಆಯಾ ಇಂದ್ರಿಯಗಳಿಗೆ ವಿಷಯವಾಗಿರುವ ಇಂದ್ರಿಯಾರ್ಥಗಳೆಂದು ತಿಳಿಯಬೇಕು.

ಸಾರಥಿಯು ಕುದುರೆಗಳನ್ನು ವಶದಲ್ಲಿಟುಕೊಂಡಿರುವಂತೆ ಮನಸ್ಸು

* ಸಂಪುಟ 39; ಸಂಚಿಕೆ 11; ಜುಲೈ 1970

ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ನಡೆಯಿಸುತ್ತಿರುವದು. ಈ ಮನಸ್ಸನ್ನು ಕೂಡ ಹೃದಯುವನ್ನಾಶ್ರಯಿಸಿಕೊಂಡಿರುವ ಜೀವಾತ್ಮನು ವಶದಲ್ಲಿಟ್ಟುಕೊಂಡು ಪ್ರೇರಿಸುತ್ತಿರುವನು. ಇಂದ್ರಿಯಗಳಿಗೆಲ್ಲ ಹೇಗೆ ಮನಸ್ಸು ಒಡೆಯನಾಗಿರುವದೋ, ಹಾಗೆಯೇ ಮನಸ್ಸಿನ ನಿಗ್ರಹಾನುಗ್ರಹಗಳಿಗೂ ಆತ್ಮನು ಸ್ವಾಮಿಯಾಗಿರುತ್ತಾನೆ. ಇಂದ್ರಿಯಗಳು, ಇಂದ್ರಿಯಾರ್ಥಗಳು, ಶೀತೋಷ್ಣಾದಿ ಸ್ವಭಾವ, ಚೇತನ, ಮನಸ್ಸು, ಪ್ರಾಣಾಪಾನಗಳು, ಜೀವ– ಇವುಗಳು ದೇಹಿಗಳ ದೇಹಗಳಲ್ಲಿ ನಿತ್ಯವೂ ಇರುತ್ತವೆ.

ಬುದ್ಧಿಗೆ ಶರೀರವಾಗಲಿ, ಗುಣಗಳಾಗಲಿ, ಶಬ್ದವಾಗಲಿ, ಚೇತನವಾಗಲಿ, ಆಶ್ರಯವಲ್ಲ. ಏಕೆಂದರೆ ಬುದ್ಧಿಯೇ ತೇಜಸ್ಸನ್ನು (ಚೇತನವನ್ನು) ಸೃಷ್ಟಿಮಾಡುತ್ತಿರುವದು, ಆದರೆ ಗುಣಗಳನ್ನು ಮಾತ್ರ ಎಂದಿಗೂ ಉಂಟುಮಾಡುವದಿಲ್ಲ. ಈ ರೀತಿಯಲ್ಲಿ ಶರೀರದಲ್ಲಿ (ಐದು ಇಂದ್ರಿಯಗಳು, ಐದು ವಿಷಯಗಳು, ಸ್ವಭಾವ, ಚೇತನ, ಮನಸ್ಸು, ಪ್ರಾಣಾಪಾನಗಳೂ, ಜೀವ – ಎಂಬ ಈ) ಹದಿನಾರರಿಂದಲೂ ಆವೃತನಾಗಿರುವಾತನು ಹದಿನೇಳನೆಯವನಾದ ಪರಮಾತ್ಮನನ್ನು ಬುದ್ಧಿಯ ದ್ವಾರದಿಂದ ತನ್ನಲ್ಲಿಯೇ ಕಂಡುಕೊಳ್ಳುತ್ತಾನೆ.

ಈ ಪರಮಾತ್ಮನು ಚಕ್ಷುರಿಂದ್ರಿಯವೇ ಮುಂತಾದ ಯಾವ ಇಂದ್ರಿಯಗಳಿಗೂ ಗೋಚರನಲ್ಲ. ಮನಸ್ಸೆಂಬ ಪ್ರದೀಪದಿಂದ, ಪ್ರಕಾಶಿಸುತ್ತಾನೆ. ಶಬ್ದವಿಲ್ಲದ, ಸ್ಪರ್ಶವಿಲ್ಲದ, ರೂಪವಿಲ್ಲದ, ರಸವಿಲ್ಲದ, ಗಂಧವಿಲ್ಲದ ಅವ್ಯಯನಾಗಿರುವ ಅಶರೀರನಾದ ನಿರಿಂದ್ರಿಯನಾಗಿರುವ ಈ ಪರಮಾತ್ಮನನ್ನು ಶರೀರಗಳೊಳಗೇ ಇರುವನೆಂದು ಕಂಡುಕೊಳ್ಳಬೇಕು. ಮರ್ತ್ಯವಾದ ಸರ್ವದೇಹಗಳೊಳಗೂ ಅವ್ಯಕ್ತನಾಗಿ ಆಶ್ರಯಿಸಿಕೊಂಡಿರುವ ಈ ಪರಮಾತ್ಮನನ್ನು ಯಾವಾತನು ಶಾಸ್ತ್ರಾಚಾರ್ಯರುಗಳ ಉಪದೇಶದಂತೆ ಕಂಡುಕೊಳ್ಳುವನೋ ಅವನು ಶರೀರಪಾತವಾದ ಬಳಿಕ ಬ್ರಹ್ಮಭಾವವನ್ನೇ ಹೊಂದುವದಕ್ಕೆ ಸಮರ್ಥನಾಗುವನು.

ವಿದ್ಯೆ, ಉತ್ತಮವಂಶ– ಇವುಗಳಿಂದ ಕೂಡಿರುವ ಬ್ರಾಹ್ಮಣನಲ್ಲಿಯೂ ಗೋವಿನಲ್ಲಿಯೂ ಆನೆಯಲ್ಲಿಯೂ ನಾಯಿಯಲ್ಲಿಯೂ ಚಾಂಡಾಲನಲ್ಲಿಯೂ ಪಂಡಿತರು ಸಮದರ್ಶಿಗಳಾಗಿರುವರು. ಆ ಮಹಾತ್ಮನು ಸ್ಥಾವರಜಂಗಮ ರೂಪವಾದ ಸರ್ವಭೂತಗಳೊಳಗೂ ತಾನೊಬ್ಬನೇ ವಾಸವಾಗಿರುತ್ತಾನೆ. ಆತನಿಂದ

ಈ ಜಗತ್ತೆಲ್ಲವೂ ವ್ಯಾಪ್ತವಾಗಿರುತ್ತದೆ. ಯಾವಾಗ ಜೀವಾತ್ಮನೂ ಸರ್ವಭೂತ ಗಳೊಳಗೂ ಆತ್ಮನನ್ನೂ ಆತ್ಮನಲ್ಲಿ ಸರ್ವಭೂತಗಳನ್ನೂ ಕಂಡುಕೊಳ್ಳುವನೋ ಆಗ ಬ್ರಹ್ಮದಲ್ಲಿ ಬೆರೆತುಕೊಳ್ಳುವನು. ತನ್ನಲ್ಲಿ ಜ್ಞಾನಸ್ವರೂಪನಾದ ಆತ್ಮನು ಎಷ್ಟು ಪ್ರಮಾಣದಿಂದಿರುವನೋ ಮತ್ತೊಬ್ಬರಲ್ಲಿಯೂ ಅಷ್ಟೇ ಪ್ರಮಾಣದಿಂದ ಇರುತ್ತಿರುವನೆಂದು ಯಾವನು ಅರಿತಿರುವನೋ ಅವನು ಅಮೃತತ್ವಪ್ರಾಪ್ತಿಗೆ ತಕ್ಕವನಾಗುತ್ತಾನೆ.

ಸರ್ವಭೂತಗಳಿಗೂ ಆತ್ಮನಾಗಿದ್ದುಕೊಂಡು ವ್ಯಾಪಕನಾಗಿ ಭೂತಗಳಿಗೆ ಹಿತವನ್ನು ಕೋರುತ್ತಿರುವಾತನ ಗತಿಯ ಹಾದಿಯನ್ನು ಕಾಣದೆ ದೇವತೆಗಳೂ ಮೋಹಗೊಳ್ಳುತ್ತಿರುವರು; ಏಕೆಂದರೆ ಅವರು ಕಾಲಿಲ್ಲದವನ ಹೆಜ್ಜೆಯ ಗುರುತನ್ನು ಹುಡುಕುತ್ತಿರುವರು. ಆಕಾಶದಲ್ಲಿ ಪಕ್ಷಿಗಳ, ನೀರಿನಲ್ಲಿ ಮೀನುಗಳ ಹೆಜ್ಜೆಯ ಗುರುತು ಹೇಗೆ ಕಾಣದೆ ಇರುವದೋ ಹಾಗೆಯೇ ಜ್ಞಾನಿಗಳ ಗತಿಯ ಗುರುತೂ ಕಾಣದೆ ಇರುತ್ತದೆ. ಕಾಲವು ಎಲ್ಲಾ ಭೂತಗಳನ್ನೂ ತನ್ನಿಂದಲೇ ತಾನು ಜೀರ್ಣಿಸಿಕೊಳ್ಳುತ್ತಿರುವದು; ಆದರೆ ಆ ಕಾಲವು ಯಾವಾತನಲ್ಲಿ ಜೀರ್ಣವಾಗುತ್ತಿರು ವದೋ ಆತನನ್ನು ಈ ಲೋಕದಲ್ಲಿ ಯಾವಾತನೂ ಅರಿಯನು.

ಆ ಪರಮಾತ್ಮತತ್ತ್ವವನ್ನು ಮೇಲೆ, ಅಡ್ಡಡ್ಡಲಾಗಿ, ಕೆಳಗೆ ಎಲ್ಲಿಯೂ ಮತ್ತೆ ಮತ್ತೆ ಹುಡುಕಿದರೂ ಒಂದಿಷ್ಟೂ ಎಲ್ಲಿಯೂ ಹಿಡಿದುಕೊಳ್ಳುವದಕ್ಕೆ ಆಗುವಂತಿಲ್ಲ; ಈ ಲೋಕಗಳೆಲ್ಲವೂ ಆತನೊಳಗೇ ಇರುವವು, ಅವುಗಳ ಯಾವ ಅಂಶವೂ ಆತನ ಹೊರಗೆ ಇರುವದಿಲ್ಲ. ಒಬ್ಬನು ಬಿಲ್ಲಿನಿಂದ ಬಿಟ್ಟ ಬಾಣದಂತೆ ಸಂತತವಾಗಿ ಓಡುತ್ತಿದ್ದರೂ, ಮನೋವೇಗವುಳ್ಳವನಾಗಿದ್ದರೂ ಜಗತ್ಕಾರಣವಾಗಿರುವ ಬ್ರಹ್ಮದ ಅಂತವನ್ನು ಕಾಣುವದು ಆಗಲಾರದು, ಆ ಸೂಕ್ಷ್ಮವಾದ ಪರಮಾತ್ಮತತ್ತ್ವಕ್ಕಿಂತ ಸೂಕ್ಷ್ಮತರವಾದದ್ದು ಯಾವದೂ ಇರುವದಿಲ್ಲ, ಅದಕ್ಕಿಂತ ಸ್ಥೂಲತರವಾದದ್ದೂ ಯಾವದೂ ಇರುವದಿಲ್ಲ. ಅದಕ್ಕೆ ಎಲ್ಲೆಲ್ಲಿಯೂ ಪಾಣಿಪಾದಗಳಿರುವವು; ಅದು ಎಲ್ಲೆಲ್ಲಿಯೂ ಕಣ್ಣುಗಳೂ ಶಿರಸ್ಸುಗಳೂ ಮುಖಗಳೂ ಉಳ್ಳದ್ದು, ಎಲ್ಲಾ ಕಡೆಯಲ್ಲಿಯೂ ಶ್ರವಣೇಂದ್ರಿಯವುಳ್ಳದ್ದು, ಎಲ್ಲವನ್ನೂ ಅವರಿಸಿಕೊಂಡಿರುವದು. ಅದೇ ಅಣುವಿಗಿಂತಲೂ ಅಣುತರವಾಗಿರುವದು, ಮಹತ್ತಾಗಿರುವವುಗಳಿಗಿಂತಲೂ ಮಹತ್ತರವಾಗಿರುವದು; ಎಲ್ಲಾ ಪ್ರಾಣಿಗಳ ಒಳಗೂ ಚಲಿಸದೆ ಇದ್ದುಕೊಂಡಿದ್ದರೂ

ಕಾಣಿಸುತ್ತಿಲ್ಲ. ಈ ಆತ್ಮನಿಗೆ ಕ್ಷರ, ಅಕ್ಷರ– ಎಂದು ಎರಡು ಭಾಗವಿರುವದು. ಕ್ಷರಭಾಗವು ಎಲ್ಲಾ ಪ್ರಾಣಿಗಳಲ್ಲಿಯೂ ಇರುತ್ತದೆ; ಅಮೃತವಾದ ಅಕ್ಷರವು ಊರ್ಧ್ವತರಸ್ಥಿತಿಯಲ್ಲಿರುವದು.

ನವದ್ವಾರಗಳುಳ್ಳ ಪುರವನ್ನು ಸೇರಿಕೊಂಡಿರುವ ಹಂಸವು (ಜೀವನು) ನಿಯತ ವಾಗಿ ಸ್ವತಂತ್ರನಾಗಿರುವನು; ಅವನು ಚರಾಚರವಾದ ಸರ್ವಭೂತಗಳಿಗೂ ಈಶ್ವರನಾಗಿರುತ್ತಾನೆ. ಹಾನಿ, ಭಂಗ, ವಿಕಲ್ಪ – ಇವುಗಳೊಡಗೂಡಿರುವ ಹೊಸಹೊಸ ಶರೀರಗಳನ್ನು ಕೂಡಿಹಾಕಿಕೊಳ್ಳುತ್ತಿರುವದರಿಂದಲೂ ಅಜನಾಗಿರುವ ಈ ಆತ್ಮನು **'ಹಂಸನು'** ಎಂದು ಪಾರದರ್ಶಿಗಳು ಹೇಳುತ್ತಿರುವರು. ಹಂಸನೆನಿಸಿಕೊಂಡಿರುವನಾದರೂ ಅಕ್ಷರನಾಗಿರುವ ಕೂಟಸ್ಥನಾಗಿರುವ ಆ ಅಕ್ಷರವನ್ನು ಯಾವಾತನು ಅರಿತುಕೊಳ್ಳುವನೋ ಆತನು ಅಕ್ಷರವನ್ನು ಹೊಂದಿ ಜನ್ಮಪ್ರಾಣಬಂಧನಗಳನ್ನು ತಪ್ಪಿಸಿಕೊಳ್ಳುತ್ತಾನೆ.

* * * * *

## 25. ಯೋಗದಿಂದ ಪರಮಾತ್ಮಪ್ರಾಪ್ತಿ*

ವ್ಯಾಸರಿಂತೆಂದರು: ಎಲೈ ಸುಪುತ್ರನೆ, ನೀನು ಕೇಳಿದ್ದಕ್ಕೆ ಇದ್ದದ್ದು ಇದ್ದಂತೆ ಸಾಂಖ್ಯಜ್ಞಾನದಿಂದ ಕೂಡಿದ ಈ ವಚನವನ್ನು ನಿನಗೆ ಹೇಳಿದೆನು. ಇನ್ನು ಯೋಗಕೃತ್ಯವನ್ನು ನಿನಗೆ ಸಂಪೂರ್ಣವಾಗಿ ವಿವರಿಸುವೆನು; ಕೇಳು.

ಬುದ್ಧಿ, ಮನಸ್ಸು, ಇಂದ್ರಿಯಗಳನ್ನು ಸರ್ವವ್ಯಾಪ್ತಿಯಾದ ಆತ್ಮನಲ್ಲಿ ಒಂದುಮಾಡಿಕೊಳ್ಳುವದೆಂಬುದೇ ಸರ್ವೋತ್ತಮಜ್ಞಾನವು. ಆ ಇದನ್ನು ಉಪಶಾಂತನಾಗಿ ಇಂದ್ರಿಯಗಳನ್ನು ದಮನಮಾಡಿಕೊಂಡು ಅಧ್ಯಾತ್ಮ ಪರಿಶೀಲನೆಯನ್ನು ಮಾಡುತ್ತ ಆತ್ಮಾರಾಮನಾಗಿರುವ ಜ್ಞಾನಿಯಾದವನು ಪರಿಶುದ್ಧಕರ್ಮರತನಾಗಿದ್ದುಕೊಂಡು ಅರಿತುಕೊಳ್ಳಬೇಕು.

---

* ಸಂಪುಟ 39; ಸಂಚಿಕೆ 12; ಆಗಸ್ಟ್ 1970

ಕಾಮ, ಕ್ರೋಧ, ಲೋಭ, ಭಯ ಐದನೆಯದಾದ ನಿದ್ರೆ- ಎಂಬಿವು **ಯೋಗದೋಷ**ಗಳೆಂದು ಬಲ್ಲವರು ಹೇಳುತ್ತಾರೆ. ಇವುಗಳನ್ನು ಮೊದಲು ನಾಶಗೊಳಿಸಬೇಕು. ಕ್ರೋಧವನ್ನು ಮನಃಶಾಂತಿಯಿಂದಲೂ ಕಾಮವನ್ನು ಸಂಕಲ್ಪತ್ಯಾಗದಿಂದಲೂ ಗೆಲ್ಲುತ್ತಾರೆ. ವಿವೇಕಿಯಾದವನು ಸತ್ತ್ವಗುಣವನ್ನು ಸೇವಿಸುವದರಿಂದ ನಿದ್ರೆಯನ್ನು ನಾಶಗೊಳಿಸಿಕೊಳ್ಳಬೇಕು. ಧೃತಿಯಿಂದ ಶಿಶ್ನೋದರಗಳನ್ನು ಕಾಪಾಡಿಕೊಳ್ಳಬೇಕು. ಪಾಣಿಪಾದಗಳನ್ನು ಚಕ್ಷುರಿಂದ್ರಿಯದಿಂದ ಕಾಪಾಡಿಕೊಳ್ಳಬೇಕು. ಚಕ್ಷುಃಶ್ರೋತ್ರಗಳನ್ನು ಮನಸ್ಸಿನಿಂದಲೂ ಮನೋವಾಕ್ಕುಗಳನ್ನು ಕರ್ಮದಿಂದಲೂ ಎಚ್ಚರಿಕೆಯಿಂದ ಭಯವನ್ನೂ ದಂಭವನ್ನು ಪ್ರಾಜ್ಞರ ಸೇವೆಯಿಂದಲೂ ತೊಲಗಿಸಿಕೊಳ್ಳಬೇಕು. ಹೀಗೆ ಈ ದೋಷಗಳನ್ನು ನಿತ್ಯವೂ ಆಲಸ್ಯರಹಿತನಾಗಿ ಗೆದ್ದುಕೊಳ್ಳಬೇಕು.

ಅಗ್ನಿಗಳನ್ನೂ ಬ್ರಾಹ್ಮಣರನ್ನೂ ಅರ್ಚಿಸುತ್ತಿರಬೇಕು, ದೇವತೆಗಳನ್ನು ನಮಸ್ಕರಿಸುತ್ತಿರಬೇಕು. ಕಾಮಯುಕ್ತವಾದ, ಹಿಂಸಾಯುಕ್ತವಾದ, ಮನಸ್ಸನ್ನು ನೋಯಿಸುವ ವಚನವನ್ನು ಬಿಡಬೇಕು. ತೇಜೋಮಯವಾದ ಬ್ರಹ್ಮವೇ ಬೀಜವು, ಈ ಜಗತ್ತೆಲ್ಲವೂ ಅದರ ಕಾರ್ಯವು. ಭೂತಭವ್ಯಾತ್ಮಕವಾದ ಸ್ಥಾವರಜಂಗಮ ರೂಪವೆಲ್ಲವೂ ಇದರ ವೀಕ್ಷಣಮಾತ್ರದಿಂದಾಗಿರುತ್ತದೆ.

ಧ್ಯಾನ, ಅಧ್ಯಯನ, ದಾನ, ಸತ್ಯ, ಲಜ್ಜೆ, ಋಜುಭಾವ, ಕ್ಷಮಾಗುಣ, ಶೌಚ, ಆಚಾರಸಂಶುದ್ಧಿ, ಇಂದ್ರಿಯನಿಗ್ರಹ- ಇವುಗಳಿಂದ ತೇಜಸ್ಸು ವೃದ್ಧಿಯಾಗುವದು; ಪಾಪವೂ ನಾಶವಾಗುವದು. ಹೀಗೆ ಸಾಧನವನ್ನು ಮಾಡುವಾತನಿಗೆ ಸರ್ವಾರ್ಥಗಳೂ ಸಿದ್ಧಿಯಾಗುವವು, ವಿಜ್ಞಾನವು ಪ್ರಾಪ್ತವಾಗುವದು.

ಸರ್ವಭೂತಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿ ಬೇಕಾದದ್ದು ಸಿಕ್ಕಲಿ, ಸಿಕ್ಕದಿರಲಿ- ಜೀವನವನ್ನು ನಿರ್ವಹಿಸುತ್ತಾ ಪಾಪಗಳನ್ನು ನೀಗಿಕೊಂಡು ತೇಜಸ್ವಿಯಾಗಿ ಮಿತಾಹಾರಿಯೂ ಜೀತೇಂದ್ರಿಯನೂ ಆಗಿ ಕಾಮಕ್ರೋಧಗಳನ್ನು ವಶದಲ್ಲಿಟ್ಟುಕೊಂಡು ಬ್ರಹ್ಮಪದವನ್ನು ಸೇರುವದಕ್ಕೆ ಇಚ್ಛೆಯನ್ನು ಮಾಡುತ್ತಿರಬೇಕು.

ಮನಸ್ಸನ್ನೂ ಇಂದ್ರಿಯಗಳನ್ನೂ ಏಕಾಗ್ರವಾಗಿಟ್ಟುಕೊಂಡು ಸಮಾಹಿತ ಮನಸ್ಕನಾಗಿ ಪೂರ್ವರಾತ್ರೆಯಲ್ಲಿಯೂ ಅಪರರಾತ್ರೆಯಲ್ಲಿಯೂ ಆತ್ಮನಲ್ಲಿ ಮನಸ್ಸನ್ನು

ಇಟ್ಟುಕೊಂಡಿರಬೇಕು. ಜೀವನ ಪಂಚೇಂದ್ರಿಯಗಳಲ್ಲಿ ಒಂದು ಇಂದ್ರಿಯವು ಅವಕಾಶವನ್ನು ಕೊಡುತ್ತಿದ್ದರೂ ಚಕ್ಕಳದ ಚೀಲದ ಒಂದು ರಂಧ್ರದಿಂದ ನೀರು ಸೋರುವಂತೆ ಇವನ ಪ್ರಜ್ಞೆಯು ಸೋರಿಹೋಗುವದು. ಮತ್ಸ್ಯಘಾತಕನು ಕೆಟ್ಟ ಮೀನನ್ನು ಹಿಡಿದುಕೊಳ್ಳುವಂತೆ ಮನಸ್ಸನ್ನು ಮೊದಲು ಬಿಗಿಹಿಡಿದುಕೊಳ್ಳಬೇಕು. ಬಳಿಕ ಶ್ರೋತ್ರೇಂದ್ರಿಯವನ್ನೂ, ಆಮೇಲೆ ಚಕ್ಷುರಿಂದ್ರಿಯವನ್ನೂ ಜಿಹ್ವೇಂದ್ರಿಯ ವನ್ನೂ ಘ್ರಾಣೇಂದ್ರಿಯವನ್ನೂ ಯೋಗಿಯು ಹಿಡಿತದಲ್ಲಿಟ್ಟುಕೊಳ್ಳಬೇಕು.

ಆದ್ದರಿಂದ ಯತಿಯಾದವನು ಈ ಐದು ಇಂದ್ರಿಯಗಳನ್ನೂ ಹಿಡಿದು ಮನಸ್ಸಿನಲ್ಲಿ ನಿಲ್ಲಿಸಿಕೊಳ್ಳಬೇಕು. ಹಾಗೆಯೇ ಸಂಕಲ್ಪವನ್ನು ಮಾಡದಂತೆ ತಗ್ಗಿಸಿ ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಿಕೊಂಡಮೇಲೆ ಯಾವಾಗ ಅವು ಪ್ರಸನ್ನವಾಗುವವೋ ಆಗ ಬ್ರಹ್ಮವು ತಾನೇ ಬೆಳಗುವದು. ಹೊತ್ತಿಸಿದ ಬೆಂಕಿಯು ಹೊಗೆಯಿಲ್ಲದೆ ಬೆಳಗುವಂತೆಯೂ ತಪಿಸುತ್ತಿರುವ ಸೂರ್ಯನಂತೆಯೂ ಆಕಾಶದಲ್ಲಿ ಥಳಾರೆಂಬ ಮಿಂಚಿನ ತೇಜಸ್ಸಿನಂತೆಯೂ ಆತ್ಮನು ತನ್ನ ಆತ್ಮನಲ್ಲಿ ತೋರಿಕೊಳ್ಳುವನು. ಪ್ರತಿಯೊಂದೂ ಅವನಲ್ಲಿಯೂ ಆತನು ಎಲ್ಲದರಲ್ಲಿಯೂ ವ್ಯಾಪಕನಾಗಿರುವದರಿಂದ ಅವನಲ್ಲಿಯೇ ಎಲ್ಲವೂ ಕಾಣಿಸಿಕೊಳ್ಳುವವು. ಆ ಪರಮಾತ್ಮನನ್ನು ವಿವೇಕಿಗಳೂ ಧೃತಿಮಂತರೂ ಮಹಾಪ್ರಾಜ್ಞರೂ ಸರ್ವಪ್ರಾಣಿಗಳ ಹಿತದಲ್ಲಿಯೂ ರತರಾದ ಬ್ರಾಹ್ಮಣರೂ ಕಾಣುವರು.

ಈ ರೀತಿಯಾಗಿ ಗೊತ್ತಾದ ಕಾಲದವರೆಗೆ ನಿಯಮಯುಕ್ತನಾಗಿ ಏಕಾಂತ ಸ್ಥಾನದಲ್ಲಿ ಆಸನದಲ್ಲಿ ಕುಳಿತು ಒಬ್ಬನೇ ಅನುಷ್ಠಾನಮಾಡುತ್ತಾ ಇದ್ದರೆ ಅಕ್ಷರಸ್ವರೂಪವಾದ ಬ್ರಹ್ಮಾತ್ಮತ್ವವನ್ನು ಪಡೆಯುವನು. ಅನುಷ್ಠಾನಕಾಲದಲ್ಲಿ ಹೆಚ್ಚಿನ ಮೋಹವೂ ಭ್ರಮೆಯೂ ಸುತ್ತಾಡುವಿಕೆಯೂ ಘ್ರಾಣೇಂದ್ರಿಯ, ಶ್ರವಣೇಂದ್ರಿಯ, ಚಕ್ಷುರಿಂದ್ರಿಯ, ರಸ, ಸ್ಪರ್ಶ, ಆಕಾಶ ಚಲನೆ, ಪ್ರಜ್ಞೆ- ಇಂಥ ಅದ್ಭುತಗಳೂ ಕಾಣಿಸಿಕೊಳ್ಳುವವು. ಅವು ಯೋಗಕ್ಕೆ ಅಡ್ಡಿಯಾಗಿರುತ್ತವೆ. ಅವುಗಳನ್ನು ಯೋಗಶಕ್ತಿ ಯಿಂದ ತಡೆಗಟ್ಟಿ ಅಸಡ್ಡೆಮಾಡಿ ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಳ್ಳಬೇಕು.

ಮುನಿಯಾದವನು ತ್ರಿಕಾಲದಲ್ಲಿಯೂ- ಪರ್ವತದ ಶಿಖರ, ದೇವಾಲಯ, ಅಥವಾ ಮರದ ಕೊಂಬೆಗಳಮೇಲೆ ಕುಳಿತುಕೊಂಡು ಯೋಗಾಭ್ಯಾಸವನ್ನು ಮಾಡುತ್ತಿರಬೇಕು. ಇಂದ್ರಿಯಗಳನ್ನು ಬಿಗಿಹಿಡಿದುಕೊಂಡು ಕೊಟ್ಟಡಿಯಲ್ಲಿಟ್ಟ

ರುವ ಧನರಾಶಿಯಲ್ಲಿ ಮನಸ್ಸಿಟ್ಟಿರುವವನಹಾಗೆ ಏಕಾಗ್ರತೆಯಿಂದ ಧ್ಯಾನ ಮಾಡುತ್ತಿರಬೇಕು. ಯೋಗಕಾಲದಲ್ಲಿ ಕಳವಳಕ್ಕೀಡುಮಾಡಿಕೊಳ್ಳಬಾರದು. ಯಾವ ಉಪಾಯದಿಂದ ಚಂಚಲವಾದ ಮನಸ್ಸನ್ನು ಸಂಯಮಮಾಡುವುದಕ್ಕೆ ಆಗುವುದೋ ಆ ಉಪಾಯವನ್ನೇ ಸೇವಿಸುತ್ತಿರಬೇಕು; ಅಲ್ಲಿಂದ ಮನಸ್ಸನ್ನು ಅಲುಗಾಡಿಸಿಕೊಳ್ಳ ಬಾರದು. ಯಾರೂ ಇಲ್ಲದ ಬೆಟ್ಟದ ಗವಿಗಳು, ದೇವಾಲಯಗಳು, ಹಾಳುಮನೆಗಳು– ಇವುಗಳನ್ನು ವಾಸಕ್ಕಾಗಿ ಬಳಸಿಕೊಳ್ಳಬೇಕು.

ಯೋಗಿಯಾದವನು ವಾಕ್ಕಾಯಮನಗಳಲ್ಲಿ ಯಾವದೊಂದರಿಂದಲೂ ಮತ್ತೊಂದು ವಸ್ತುವಿನಲ್ಲಿ ಆಸಕ್ತನಾಗಬಾರದು. ಉಪೇಕ್ಷಕನಾಗಿ ಮಿತಾಹಾರ ದಿಂದಿದ್ದುಕೊಂಡು, ಲಾಭಾಲಾಭಗಳಲ್ಲಿ ಸಮನಾಗಿರಬೇಕು. ತನ್ನನ್ನು ಯಾರು ಹೊಗಳಿದರೂ ಯಾರೊಬ್ಬರು ನಿಂದಿಸಿದರೂ ಅವರಲ್ಲಿ ಸಮದರ್ಶಿಯಾಗಿದ್ದು ಕೊಂಡು ಒಳ್ಳೆಯದು, ಕೆಟ್ಟದ್ದು– ಯಾವದನ್ನೂ ಚಿಂತಿಸದೆ ಇರಬೇಕು. ಯಾವದಾದರೂ ಸಿಕ್ಕಿದರೆ ಉಬ್ಬಬಾರದು, ಸಿಕ್ಕದೆ ಇದ್ದರೆ ಚಿಂತಿಸಬಾರದು; ಎಲ್ಲಾ ಪ್ರಾಣಿಗಳಲ್ಲಿಯೂ ಸಮನಾಗಿದ್ದುಕೊಂಡು ಗಾಳಿಯಂತೆ ಇದ್ದುಕೊಂಡಿರಬೇಕು.

ಈ ರೀತಿಯಲ್ಲಿ ಸ್ವಸ್ಥಾತ್ಮನಾಗಿರುವ ನಿತ್ಯಯುಕ್ತನಾದ ಸತ್ಪುರುಷನಿಗೆ ಆರು ತಿಂಗಳೊಳಗಾಗಿ ಶಬ್ದವನ್ನು ಮೀರಿದ ಪರಬ್ರಹ್ಮದ ಪ್ರಾಪ್ತಿಯಾಗುವದು. ವೇದನೆಯಿಂದ ನರಳುತ್ತಿರುವ ಪ್ರಜೆಗಳನ್ನು ಕಂಡಾಗಲೂ ಮಣ್ಣು ಹೆಂಟೆ, ಕಲ್ಲು, ಚಿನ್ನ– ಇವುಗಳಲ್ಲೂ ಸಮದೃಷ್ಟಿಯಿಂದಿರುತ್ತಿರಬೇಕು. ಭ್ರಾಂತಿಯಿಂದ ಈ ಮಾರ್ಗ ವನ್ನು ಎಂದಿಗೂ ಬಿಡಬಾರದು. ವರ್ಣದಲ್ಲಿ ಕೀಳಾಗಿರಲಿ, ಹೆಂಗಸೇಆಗಿರಲಿ, ಧರ್ಮದಲ್ಲಿ ಕಾಂಕ್ಷೆ ಇದ್ದರೆ ಅವರು ಈ ಮಾರ್ಗದಿಂದ ಪರಮಗತಿಯನ್ನು ಪಡೆಯುವರು. ಮನೋನಿಗ್ರಹವನ್ನು ಮಾಡಿಕೊಂಡು ಯೋಗಿಯು ಅಜನೂ, ಪುರಾಣನೂ, ಜರಾರಹಿತನೂ, ಸನಾತನನೂ, ಅಣುವಿಗಿಂತಲೂ ಅಣುವಾಗಿಯೂ ಮಹತ್ತಿಗಿಂತಲೂ ಮಹತ್ತರವೂ ಆಗಿರುವ ಆ ತತ್ತ್ವವನ್ನೇ ನಿಶ್ಚಲೇಂದ್ರಿಯಗಳಿಂದ ಕಂಡದ್ದೆಲ್ಲವನ್ನೂ ಅದೆಂದೇ ಕಾಣುವನು. ಮಹರ್ಷಿಯು ಹೇಳಿದ ಈ ವಚನವನ್ನು ಮನಸ್ಸಿನಿಂದ ಸಮಾಲೋಚನೆಮಾಡಿ ಈ ಪರಮೇಷ್ಠಿಸಾಮ್ಯತ್ವವನ್ನು ಕಂಡುಕೊಂಡ ವಿವೇಕಿಗಳು ಆಭೂತಸಂಪ್ಲವಗತಿಯನ್ನೇ ಪಡೆದುಕೊಳ್ಳುವರು.

* * * * *

## ಭಾಗ – III

# ಶುಕಾನುಪ್ರಶ್ನ

**(241 ರಿಂದ 255 ಮತ್ತು 321)**

## 26. ಕರ್ಮಜ್ಞಾನಗಳ ತಾರತಮ್ಯ, ಬ್ರಹ್ಮಪ್ರಾಪ್ತಿಗೆ ಉಪಾಯ*

ಶುಕನು ಕೇಳಿದನೆಂತೆಂದರೆ: ತಂದೆಯೆ, 'ಕರ್ಮವನ್ನು ಮಾಡು' ಎಂದೂ 'ಕರ್ಮವನ್ನು ಬಿಡು' ಎಂದೂ ಇಂತು ಎರಡು ಬಗೆಯ ವೇದವಚನವಿದೆಯಷ್ಟೆ? ವಿದ್ಯೆಯಿಂದ ಯಾವ ದಿಕ್ಕಿಗೆ ಹೋಗುವರು? ಕರ್ಮದಿಂದ ಯಾವ ದಿಕ್ಕಿಗೆ ಹೋಗುವರು? ಇದನ್ನು ಕೇಳಬೇಕೆಂಬ ಇಚ್ಛೆಯಾಗಿದೆ. ದಯವಿಟ್ಟು ಇದನ್ನು ಹೇಳಬೇಕು. ಇವೆರಡೂ ಒಂದಕ್ಕೊಂದು ಪ್ರತಿಕೂಲವಾಗಿ ಪರಸ್ಪರ ವಿರುದ್ಧ ವಾಗಿವೆಯಲ್ಲವೆ?

ಭೀಷ್ಮರು ಹೇಳುತ್ತಾರೆ: ಹೀಗೆನ್ನಲು ಮಗನನ್ನು ಕುರಿತು ಪರಾಶರಪುತ್ರರಾದ ವ್ಯಾಸರಿಂತೆಂದರು; "ಕರ್ಮಮಯವಾದ ಮತ್ತು ಜ್ಞಾನಮಯವಾದ ಈ ಕ್ಷರಾಕ್ಷರಮಾರ್ಗಗಳನ್ನು ಹೇಳುವೆನು. ವಿದ್ಯೆಯಿಂದ ಯಾವ ಗತಿಯನ್ನು ಹೊಂದುವರು ಮತ್ತು ಕರ್ಮದಿಂದ ಯಾವ ಗತಿಯನ್ನು ಪಡೆಯುವರು– ಎಂಬುದನ್ನು ಹೇಳುವೆನು, ಇದನ್ನು ಏಕಾಗ್ರಚಿತ್ತದಿಂದ ಕೇಳು. ಇವೆರಡರ ಅಂತರವು ಗಹ್ವರವಾಗಿರುತ್ತದೆ. 'ಧರ್ಮವಿದೆ' ಎಂದು ಒಬ್ಬನೆಂದಾಗ 'ಧರ್ಮವಿಲ್ಲ'ಎಂದು ಮತ್ತೊಬ್ಬನೆಂದರೆ ಹೇಗೆ ಕ್ಲೇಶವಾಗುವದೋ ಹಾಗೆಯೇ ನನಗೆ ಈ ಪ್ರಶ್ನೆಯು ಕ್ಲೇಶದಾಯಕವಾಗಿರುತ್ತದೆ.

ಪ್ರವೃತ್ತಿಧರ್ಮ, ನಿವೃತ್ತಿಧರ್ಮ– ಎಂದು ಎರಡು ಧರ್ಮಗಳನ್ನು ತಿಳಿಸುವದಕ್ಕೆ ವೇದಗಳು ಹೊರಟಿರುತ್ತವೆ. ಜೀವನು ಕರ್ಮದಿಂದ ಬದ್ಧನಾಗುತ್ತಾನೆ, ವಿದ್ಯೆಯಿಂದ ಮುಕ್ತನಾಗುತ್ತಾನೆ: ಆದ್ದರಿಂದ ಪಾರವನ್ನು ಕಂಡಿರುವ ಯತಿಗಳು ಕರ್ಮವನ್ನು ಮಾಡದೆ ಇರುವರು. ಕರ್ಮವನ್ನು ಮಾಡಿದವನು ಶರೀರವನ್ನು ತ್ಯಜಿಸಿದಬಳಿಕ ಹದಿನಾರು ಕಲೆಗಳುಳ್ಳ ಶರೀರವನ್ನು ಧರಿಸಿ ಹುಟ್ಟುತ್ತಾನೆ.

---

* ಸಂಪುಟ 40; ಸಂಚಿಕೆ 1; ಸೆಪ್ಟೆಂಬರ್ 1970

ವಿದ್ಯೆಯಿಂದ ನಿತ್ಯವೂ ಅವ್ಯಕ್ತವೂ ಅವ್ಯಯವೂ ಆದ ಪರಮಾತ್ಮನನ್ನು ಪಡೆಯುವನು.

ಅಲ್ಪಬುದ್ಧಿಯ ಕೆಲವು ಜನರು ಕರ್ಮವನ್ನು ಹೊಗಳುತ್ತಾರೆ; ಅದರಿಂದ ಅವರು ದೇಹಜಾಲಗಳಲ್ಲಿ ಆಸಕ್ತರಾಗಿರುತ್ತಾರೆ. ಆದರೆ ಯಾರು ಧರ್ಮದ ನೈಪುಣ್ಯವನ್ನು ಕಂಡುಕೊಂಡು ಹೆಚ್ಚಿನ ಬುದ್ಧಿಯನ್ನು ಪಡೆದುಕೊಂಡಿರುವರೋ ಅವರು ನದಿಯ ನೀರನ್ನು ಕುಡಿಯುತ್ತಿರುವವರು, ಹೇಗೆ ಗುಂಡಿಯ ನೀರನ್ನು ಹೊಗಳುವದಿಲ್ಲವೋ ಹಾಗೆ, ಕರ್ಮವನ್ನು ಹೊಗಳುವದಿಲ್ಲ. ಕರ್ಮದಿಂದ ಸುಖ ದುಃಖಗಳು, ಜನ್ಮಮರಣಗಳು– ಎಂಬ ಫಲವನ್ನು ಪಡೆಯುವರು; ಆದರೆ ಜ್ಞಾನದಿಂದ ಎಲ್ಲಿಗೆ ಹೋದರೆ ಶೋಕರಹಿತರಾಗಿರಬಹುದೋ ಅಲ್ಲಿಗೆ ಜ್ಞಾನಿಯು ಹೋಗುತ್ತಾನೆ.

ಆ ಗತಿಯನ್ನು ಪಡೆದಾತನು ಸಾಯುವದಿಲ್ಲ, ಹುಟ್ಟುವದಿಲ್ಲ. ಅವ್ಯಕ್ತವೂ ಅಚಲವೂ ಧ್ರುವವೂ ಆಗಿರುವ ಅವ್ಯಾಕೃತವೂ ಅನಾಯಾಸವೂ ವಿಯೋಗ ರಹಿತವೂ ಆದ ಪರಮಬ್ರಹ್ಮವು ಎಲ್ಲಿರುವದೋ ಅಲ್ಲಿಗೆ ಹೋಗಿ ಮುಟ್ಟಿದವನು ಮತ್ತೆ ಹುಟ್ಟುವದಿಲ್ಲ; ಅಲ್ಲಿಗೆ ಹೋದವನು ಮತ್ತೆ ಹಿಂತೆರಳುವದಿಲ್ಲ. ಆ ಪರಬ್ರಹ್ಮವನ್ನು ಪಡೆದುಕೊಂಡವರನ್ನು ಶೀತೋಷ್ಣಸುಖದುಃಖಾದಿದ್ವಂದ್ವಗಳಾಗಲಿ ಮನಸ್ಸಿನ ದುಷ್ಟವೃತ್ತಿಯಾಗಲಿ ಬಾಧಿಸುವದಿಲ್ಲ. ಅವರು ಎಲ್ಲೆಲ್ಲಿಯೂ ಸಮಬುದ್ಧಿ ಯಿಂದಿರುವರು; ಮೈತ್ರೀಭಾವದಿಂದ ವರ್ತಿಸುವರು; ಸರ್ವಪ್ರಾಣಿಗಳ ಹಿತದಲ್ಲಿಯೂ ರತರಾಗಿರುವರು.

ವಿದ್ಯಾಮಯನಾದ ಪುರುಷನೇ ಬೇರೆ, ಕರ್ಮಮಯನಾದ ಪುರುಷನೇ ಬೇರೆ. ಚಂದ್ರನು ಅಮಾವಾಸ್ಯೆಯದಿನವೂ ಸೂಕ್ಷ್ಮವಾದ ಕಲೆಯಿಂದ ಕೂಡಿಯೇ ಇರುತ್ತಾನಲ್ಲವೆ? ಹಾಗೆ. ಇದನ್ನು ಒಬ್ಬ ಮಂತ್ರದ್ರಷ್ಟೃವಾದ ಋಷಿಯು ವಿಸ್ತರವಾಗಿ ಹೇಳಿರುತ್ತಾನೆ. ಕೋರೆಯಾಗಿರುವ ದಾರದಂತೆ ಇರುವ ಚಂದ್ರನನ್ನು ಕಂಡು ಪೂರ್ಣಚಂದ್ರನನ್ನು ಊಹಿಸುವಂತೆ ವಿದ್ಯಾಮಯಪುರುಷನನ್ನೂ ತಿಳಿಯಬೇಕು. ಮನಸ್ಸು, ಇಂದ್ರಿಯಗಳು– ಎಂಬ ಕರ್ಮಗುಣಾನ್ವಿತನಾಗಿರುವ ಹನ್ನೊಂದು ವಿಕಾರಗಳಿಂದ ಕೂಡಿದ ಕಲಾಸಾಮಗ್ರಿಗಳಿಂದ ಕೂಡಿರುವ ಜೀವನು ದೇಹಧಾರಿ ಯಾಗುವನು ಎಂದು ಊಹಿಸಬಹುದು. ಅದೇ ಶರೀರದಲ್ಲಿ ಕಮಲದೆಲೆಯಲ್ಲಿರುವ ನೀರಿನ ತೊಟ್ಟಿನಂತೆ– ಆಶ್ರಯಿಸಿಕೊಂಡಿರುವ ದೇವನೇ ಯೋಗದಿಂದ ಚಿತ್ತವನ್ನು ಜಯಿಸಿಕೊಂಡಿರುವ ಕ್ಷೇತ್ರಜ್ಞನೆಂದು ಅರಿಯಬೇಕು.

ತಮಸ್ಸು, ರಜಸ್ಸು, ಸತ್ತ್ವ– ಇವು ಜೀವಗುಣರೂಪವಾಗಿರುತ್ತವೆ. ಜೀವತ್ವವು ಆತ್ಮನಲ್ಲಿ ತೋರುತ್ತಿರುವದು, ಆತ್ಮನು ಪರಮಾತ್ಮನ ಅಂಶವೇ ಎಂದು ತಿಳಿಯಬೇಕು. ಸಚೇತನವಾಗಿರುವದೆಲ್ಲ ಜೀವಾಶ್ರಿತವಾಗಿರುವದೆನ್ನುವರು; ಅವನೇ ಎಲ್ಲವನ್ನೂ ವ್ಯಾಪಾರದಲ್ಲಿ ತೊಡಗಿಸುತ್ತಲೂ, ಜೀವಿಸುವಂತೆ ಮಾಡುತ್ತಲೂ ಇರುತ್ತಾನೆ. ಆ ಜೀವನಿಗಿಂತಲೂ ಯಾವಾತನು ಏಳು ಭುವನಗಳನ್ನೂ ಸೃಷ್ಟಿಸಿರುವನೋ ಆ ಪರಮಾತ್ಮನು ಶ್ರೇಷ್ಠನೆಂದು ಕ್ಷೇತ್ರತತ್ತ್ವವನ್ನು ಬಲ್ಲವರು ಹೇಳುತ್ತಿರುವರು.

* * * * *

# 27. ಬ್ರಹ್ಮಚರ್ಯಾಶ್ರಮ*

ಬಳಿಕ ಶುಕನು ಕೇಳಿದ್ದೇನೆಂದರೆ: ಕ್ಷರದಿಂದ ಮೊದಲಾಗಿ ಆಗುವ ಸೃಷ್ಟಿಯನ್ನೂ ಶಬ್ದಾದಿವಿಷಯಗಳಿಂದೊಡಗೂಡಿದ ಇಂದ್ರಿಯಗಳು, ಬುದ್ಧಿಯ ಶಕ್ತಿಯಿಂದ ಆಗುವ ಅತಿಸರ್ಗ, ಆತ್ಮನ ಸನ್ನಿಧಿಯಲ್ಲಿ ಆಗುವ ಈ ಸೃಷ್ಟಿಗಳನ್ನೂ ಕೇಳಿದ್ದಾಯಿತು. ಕಾಲಾನುಸಾರವಾಗಿ ಸತ್ಪುರುಷರ ವರ್ತನೆಗಳು ಹೇಗೆ ಆಗುವವು? ಯಾವ ಆಚಾರಗಳನ್ನು ಅನುಸರಿಸಿ ಸತ್ಪುರುಷರು ವರ್ತಿಸುತ್ತಿರುವರು? ಇದನ್ನು ಮತ್ತೂ ಒಮ್ಮೆ, ಕೇಳಬೇಕೆಂಬ ಇಚ್ಛೆಯುಂಟಾಗಿದೆ. ವೇದದಲ್ಲಿ ಕರ್ಮವನ್ನು ಮಾಡು, ಬಿಡು– ಎಂಬೀ ಪರಿಯಲ್ಲಿ ವಚನವಿದೆಯಲ್ಲ, ಅದರ ನಿಶ್ಚಯವನ್ನು ಹೇಗೆ ಅರಿತುಕೊಳ್ಳಲಿ?– ಅದನ್ನು ಬಿಡಿಸಿ ಹೇಳುವನಾಗು; ಲೋಕವೃತ್ತದ ತತ್ತ್ವವನ್ನು ಅರಿತುಕೊಂಡು ಗುರುಬೋಧೆಯಿಂದ ಪವಿತ್ರನಾಗಿ ಸಮಸ್ತಾಭಿಮಾನದಿಂದಲೂ ಮುಕ್ತನಾಗಿ ಪರಮಾತ್ಮನ ದರ್ಶನವನ್ನು ಮಾಡಿಕೊಳ್ಳಲು ಬಯಸುತ್ತಿದೇನೆ.

ಆಗ **ವ್ಯಾಸರಿಂತೆಂದರು:** ಪೂರ್ವದಲ್ಲಿ ಬ್ರಹ್ಮದೇವನು ಹೇಗೆ ವರ್ತಿಸಬೇಕೆಂದು ವಿಧಿಸಿದ್ದನೋ ಅದರಂತೆಯೇ ಬಹುಪ್ರಾಚೀನರಾದ ಪರಮರ್ಷಿಗಳಾದ ಸತ್ಪುರುಷರು ಆಚರಿಸಿದರು, ಪರಮರ್ಷಿಗಳು **ಬ್ರಹ್ಮಚರ್ಯ**ದಿಂದಲೇ ಪರಲೋಕಗಳನ್ನು ಜಯಿಸಿಕೊಂಡರು. ಆದ್ದರಿಂದ ಶ್ರೇಯಸ್ಸಾಗಬೇಕೆಂಬವನು ಅದನ್ನೇ ಅನುಸರಿಸಿ

---

* ಸಂಪುಟ 40; ಸಂಚಿಕೆ 2; ಅಕ್ಟೋಬರ್ 1970

ತನ್ನಲ್ಲಿಯೇ ಶ್ರೇಯಸ್ಸಾಧನವನ್ನು ಹುಡುಕಿಕೊಳ್ಳಬೇಕು. ಕಾಡಿನಲ್ಲಿ ಗೆಡ್ಡೆಗೆಣಸುಗಳನ್ನೂ ಹಣ್ಣುಹಂಪಲುಗಳನ್ನೂ ತಿಂದು ಜೀವಿಸುತ್ತಾ ಹೆಚ್ಚಿನ ತಪಸ್ಸನ್ನು ಮಾಡುತ್ತಾ ಪುಣ್ಯತೀರ್ಥಗಳಿಗೆ ಹೋಗಿಬರುತ್ತಾ ಯಾವ ಪ್ರಾಣಿಗಳಿಗೂ ಹಿಂಸೆಯನ್ನು ಮಾಡದೆ ಇರಬೇಕು. ಬಳಿಕ ಹೊಗೆಯು ನಿಂತ ಮೇಲೆ, ಧಾನ್ಯವನ್ನು ಕುಟ್ಟುವದು ನಿಂತಬಳಿಕ ತಕ್ಕಕಾಲದಲ್ಲಿ ಭಿಕ್ಷಾಚರ್ಯೆಯನ್ನು ಮಾಡುತ್ತಿದ್ದರೆ ಬ್ರಹ್ಮಭಾವಕ್ಕೆ ಅರ್ಹನಾಗುತ್ತಾನೆ. ಒಬ್ಬರನ್ನೂ ಸ್ತುತಿಸದೆ, ಯಾರನ್ನೂ ನಮಸ್ಕರಿಸದೆ ಶುಭಾಶುಭಕರ್ಮಗಳನ್ನು ಬಿಟ್ಟು ಏನುಸಿಕ್ಕಿದರೆ ಅದನ್ನು ತಿನ್ನುತ್ತಾ ಒಂಟಿಯಾಗಿ ಸಂಚರಿಸುತ್ತಿರು.

ಆಗ **ಶುಕನಿಂತೆಂದನು:** ಕರ್ಮವನ್ನು ಮಾಡು, ಮಾಡದಿರು– ಎಂಬೀ ವೇದವಚನವು ಲೌಕಿಕದೃಷ್ಟಿಯಿಂದ ವಿಚಾರಮಾಡಿದರೆ ವಿರುದ್ಧವಾಗಿದೆಯಲ್ಲ! ಇದು ಶಾಸ್ತ್ರಪ್ರಮಾಣಕ್ಕೆ ಹೊಂದಿಕೆಯಾಗಿದೆಯೊ, ಇಲ್ಲವೊ! ಶಾಸ್ತ್ರವೇ ಪರಸ್ಪರ ವಿರುದ್ಧವಾಗಿ ಹೇಗೆ ಹೇಳೀತು? ಕರ್ಮಗಳಿಗೆ ವಿರುದ್ಧವಾಗದಂತೆ ಹೇಗೆ ಮೋಕ್ಷಪ್ರಾಪ್ತಿಯಾದೀತು?

ಭೀಷ್ಮರಿಂತೆಂದರು: ಹೀಗೆಂದು ಶುಕರು ಹೇಳಲು ಗಂಧವತಿ (ಸತ್ಯವತಿ)ಯ ಮಕ್ಕಳಾದ ವ್ಯಾಸರು ಹೀಗೆಂದು ಉತ್ತರವನ್ನು ಹೇಳಿದರು. **ವ್ಯಾಸರು ಹೇಳಿದ್ದೇನೆಂದರೆ:** "ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ"– ಇವರೆಲ್ಲರೂ ಶಾಸ್ತ್ರೋಕ್ತರೀತಿಯಲ್ಲಿ ಸ್ವಧರ್ಮವನ್ನು ಆಚರಿಸುತ್ತಿದ್ದರೆ ಪರಮಗತಿಯನ್ನೈದು ವರು. ಒಬ್ಬನೇ ಈ ಆಶ್ರಮಗಳನ್ನು ವಿಧ್ಯುಕ್ತರೀತಿಯಿಂದ ರಾಗದ್ವೇಷಗಳಿಲ್ಲದೆ ಕ್ರಮವಾಗಿ ಅನುಸರಿಸಿದರೆ ಅವನು ಪರಮಪದವಿಗೆ ಅರ್ಹನಾಗುವನು. ಇದು ನಾಲ್ಕು ಮೆಟ್ಟಿಲುಗಳುಳ್ಳ ನಿಚ್ಚಣಿಕೆಯು. ಈ ನಿಚ್ಚಣಿಕೆಯುನ್ನೇರಿದಾತನು ಬ್ರಹ್ಮಲೋಕದಲ್ಲಿ ಪರಮಪೂಜ್ಯನಾಗುವನು.

ಆಯುಸ್ಸಿನ ನಾಲ್ಕನೆ ಒಂದಂಶವನ್ನು ಬ್ರಹ್ಮಚಾರಿಯಾದವನು ಅಸೂಯೆ ಯಿಲ್ಲದೆ ಗುರುವಿನ ಬಳಿಯಲ್ಲಿಯೋ ಗುರುಪುತ್ರನ ಬಳಿಯಲ್ಲಿಯೋ ಧರ್ಮಾರ್ಥಕೋವಿದನಾಗಿರುವನಾಗಿ ಕಳೆಯಬೇಕು. ಗುರುವು ನಿದ್ರಿಸಿದ ಬಳಿಕ ಕಡಿಮೆಯತರದ ಸ್ಥಾನದಲ್ಲಿ ಮಲಗಿ ನಿದ್ರಿಸಬೇಕು; ಬೆಳಗ್ಗೆ ಎದ್ದವನು ಶಿಷ್ಯನು ಅಥವಾ ಆಳು ಮಾಡುವ ಕೆಲಸಗಳನ್ನೆಲ್ಲ ದಕ್ಷತೆಯಿಂದ ಮಾಡುತ್ತಾ ಗುರುವಿನ

ಬಳಿಯಲ್ಲಿಯೇ ಇರುತ್ತಾ; ಎಲ್ಲ ಕೆಲಸಗಳನ್ನು ಜಾಣತನದಿಂದ ಮಾಡುತ್ತಿರಬೇಕು. ಉತ್ತಮ ಗತಿಯನ್ನೈದಬೇಕೆಂಬ ಇಚ್ಛೆಯಿಂದ ಗುರುವಿನ ಸೇವೆಯನ್ನು ಮಾಡಿ ಉಳಿದ ಕಾಲದಲ್ಲಿ ಅಧ್ಯಯನಮಾಡಬೇಕು. ಯಾರೊಬ್ಬರನ್ನೂ ನಿಂದಿಸದೆ, ಕರೆದ ಕೂಡಲೆ ಗುರುವಿನ ಬಳಿಯಲ್ಲಿ ಸಿದ್ಧನಾಗುತ್ತಿರಬೇಕು. ಶುಚಿಯಾಗಿ ದಕ್ಷನಾಗಿ ಗುರುವಿಗೆ ಇಷ್ಟವಾದದ್ದನ್ನೇ ನುಡಿಯುತ್ತಾ ಜಿತೇಂದ್ರಿಯನಾಗಿ ಗುರುವಿನ ಕಡೆಗೇ ಕಣ್ಣಿಟ್ಟುಕೊಂಡಿರಬೇಕು. ಆತನು ಉಂಡಮೇಲೆಯೇ ಊಟಮಾಡಬೇಕು, ಅವನು ಪಾನಮಾಡದೆ ಇರುವಾಗ ತಾನು ಜಲಪಾನವನ್ನೂ ಮಾಡಬಾರದು; ಆತನು ನಿದ್ರಿಸದೆ ಇರುವಾಗ ತಾನೂ ನಿದ್ರಿಸಬಾರದು. ಎರಡೂ ಕೈಗಳಿಂದ ಆತನ ಕಾಲುಗಳನ್ನು ಮುಟ್ಟಿ ನಮಸ್ಕರಿಸಬೇಕು. ಬಲಗಾಲನ್ನು ಬಲಗೈಯಿಂದ, ಎಡಕಾಲನ್ನು ಎಡಗೈಯಿಂದ ಮುಟ್ಟಿ ನಮಸ್ಕರಿಸಬೇಕು. ನಮಸ್ಕರಿಸಿದಮೇಲೆಯೇ, 'ಭಗವಂತನೆ, ಹೇಳಿಕೊಡಬೇಕು' ಎಂದು ಕೇಳಿಕೊಳ್ಳಬೇಕು. ಇದಲ್ಲದೆ 'ಇನ್ನೂ ಏನನ್ನಾದರೂ ಹೇಳಿದರೆ ಅದನ್ನೂ ಮಾಡುವೆನು' ಎನ್ನಬೇಕು. ಹೀಗೆ ಎಲ್ಲವನ್ನೂ ಗುರುವಿನ ಅನುಮತಿಯನ್ನು ಪಡೆದುಮಾಡುತ್ತಾ ಅದನ್ನು ಮಾಡಿದಮೇಲೆ ಮತ್ತೆ ಮಾಡಿದ್ದನ್ನು ತಿಳಿಸುತ್ತಾ ಬರಬೇಕು. ಯಾವ ಗಂಧಗಳನ್ನೂ ಅಥವಾ ರಸವಸ್ತುಗಳನ್ನೂ ಬ್ರಹ್ಮಚಾರಿಯಾಗಿರುವಾಗ ಸೇವಿಸಕೂಡದು. ಅವುಗಳನ್ನು **ಸಮಾವರ್ತನೆ**ಯಾದ ಬಳಿಕವೇ ಸೇವಿಸಬೇಕು– ಎಂಬುದು ಧರ್ಮಶಾಸ್ತ್ರಗಳ ನಿಶ್ಚಯವು.

ಬ್ರಹ್ಮಚಾರಿಗೆಂದು ಯಾವಯಾವ ನಿಯಮಗಳನ್ನು ಸವಿಸ್ತರವಾಗಿ ಹೇಳಿರುತ್ತದೆಯೋ ಅವುಗಳೆಲ್ಲವನ್ನೂ ಪರಿಪಾಲನೆಮಾಡುತ್ತಾ ಗುರುವಿನ ಬಳಿಯಲ್ಲಿ ವಾಸಿಸುತ್ತಿರಬೇಕು. ಇಂಥ ಬ್ರಹ್ಮಚಾರಿಯು ಯಥಾಶಕ್ತಿಯಾಗಿ ಗುರುವಿಗೆ ಪ್ರಿಯವಾದದ್ದನ್ನು ಕಾಣಿಕೆಯಾಗಿ ಕೊಟ್ಟು ಆಶ್ರಮಗಳನ್ನು ಒಂದೊಂದಾಗಿ ಸೇವಿಸಬೇಕು. ಆಯುಸ್ಸಿನ ಚತುರ್ಥಾಂಶವು ವೇದವ್ರತದಿಂದಲೂ ಉಪವಾಸ ದಿಂದಲೂ ಕಳೆಯಲಾಗಿ ಗುರುವಿಗೆ ದಕ್ಷಿಣೆಯನ್ನು ಕೊಟ್ಟಬಳಿಕ ವಿಧ್ಯುಕ್ತವಾದ ರೀತಿಯಲ್ಲಿ ಸಮಾವೃತ್ತನಾಗಬೇಕು. ಧರ್ಮಕ್ಕನುಗುಣವಾಗಿ ಪತ್ನಿಯ ಪಾಣಿಗ್ರಹಣವನ್ನು ಮಾಡಿ, ಅಗ್ನಿಯನ್ನು ಆಧಾನಮಾಡಿಕೊಂಡು ನಿಯಮದಿಂದ ಗೃಹಸ್ಥನಾಗಿ, ಆಯುಸ್ಸಿನ ದ್ವಿತೀಯಭಾಗವನ್ನು ಕಳೆಯಬೇಕು.

* * * * *

# 28. ಗೃಹಸ್ಥಾಶ್ರಮ*

ಆಯುಸ್ಸಿನ ಎರಡನೆಯ ಭಾಗವನ್ನು ಗೃಹಸ್ಥನಾಗಿ ಕಳೆಯಬೇಕು. ಧರ್ಮಕ್ಕೆ ಅನುಸಾರವಾಗಿ ಪತ್ನಿಯನ್ನು ಸ್ವೀಕರಿಸಿ ಅಗ್ನ್ಯಾಧಾನವನ್ನು ಮಾಡಿಕೊಂಡು ಆಶ್ರಮಧರ್ಮವನ್ನು ಕಾಪಾಡಿಕೊಳ್ಳುತ್ತಿರಬೇಕು.

ಗೃಹಸ್ಥವೃತ್ತಿಗಳು ನಾಲ್ಕೆಂದು ಬಲ್ಲವರು ಹೇಳುವರು: **ಕುಸೂಲಧಾನ್ಯ**ವೇ (ಗಳಗೆತುಂಬುವಷ್ಟು ಧಾನ್ಯವನ್ನು ಕೂಡಿಟ್ಟುಕೊಳ್ಳುವದು) ಮೊದಲನೆಯದು. **ಕುಂಭಧಾನ್ಯ**ವೆಂಬುದು (ಗಡಿಗೆಹಿಡಿಯುವಷ್ಟು ಕೂಡಿಡುವದು) ಇನ್ನೊಂದು. **ಅಶ್ವಸ್ತನ**(ನಾಳೆಗಾಗಿ ಇಟ್ಟುಕೊಳ್ಳದೆ ಇರುವದು)ವೃತ್ತಿಯು ಮೂರನೆಯದು. **ಕಾಪೋತಿ**(ಉಂಛ)ವೃತ್ತಿಯು ನಾಲ್ಕನೆಯದು. ಇವುಗಳೊಳಗೆ ಮುಂದು ಮುಂದಿನದು ಹಿಂದುಹಿಂದಿನದಕ್ಕಿಂತ ಉತ್ತಮವು. ಕೊನೆಯ ವೃತ್ತಿಯವನು ಎಲ್ಲರಿಗಿಂತಲೂ ಧರ್ಮಜಯಿಯಾಗಿರುತ್ತಾನೆ. ಮೊದಲನೆಯ ವೃತ್ತಿಯವನು (ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂಬ ಆರು ಕರ್ಮಗಳುಳ್ಳವನು; ಎರಡನೆಯವನು ಅಧ್ಯಯನ, ಯಜನ, ದಾನ- ಎಂಬ) ಮೂರು ಕರ್ಮಗಳುಳ್ಳವನು; ಮೂರನೆಯವನು (ಅಧ್ಯಯನ, ದಾನ- ಎಂಬ) ಎರಡೇ ಕರ್ಮಗಳುಳ್ಳವನು; ನಾಲ್ಕನೆಯವನಾದರೊ, ಬ್ರಹ್ಮಯಜ್ಞ(ವೇದಾಧ್ಯಯನ) ದಲ್ಲಿಯೇ ಇರುತ್ತಿರುವವನು.

ಗೃಹಸ್ಥನಾದವನಿಗೆ ಮಹಾನಿಯಮಗಳನ್ನು ಹೇಳಿರುತ್ತಾರೆ: ತನಗಾಗಿ ಅನ್ನವನ್ನು ಮಾಡಿಕೊಳ್ಳಬಾರದು. (ದೇವತಾ, ಪಿತೃ, ಅತಿಥಿ- ಇವರಿಗಾಗಿಯೇ ಅನ್ನವನ್ನು ಬೇಯಿಸತಕ್ಕದ್ದು). ಸುಮ್ಮನೆ ಪಶುಹಿಂಸೆಯನ್ನು ಮಾಡಬಾರದು (ಯಜ್ಞಾರ್ಥವಾಗಿ ಮಾಡಬಹುದು). ಯಜ್ಞದಲ್ಲಿ ಪ್ರಾಣಿಗಳನ್ನಾಗಲಿ, ಉಳಿದ ಹವಿಷ್ಯಗಳನ್ನಾಗಲಿ ಯಜುರ್ಮಂತ್ರದಿಂದ ಸಂಸ್ಕಾರಮಾಡಬೇಕು. ಹಗಲಾಗಲಿ, ರಾತ್ರಿಯ ಮೊದಲುಭಾಗ, ಕೊನೆಯಭಾಗ- ಇವುಗಳಲ್ಲಾಗಲಿ ನಿದ್ರಿಸಬಾರದು; ಎರಡು ಭೋಜನಗಳ ನಡುವೆ ಏನನ್ನೂ ತಿನ್ನಬಾರದು. ಋತುಕಾಲದಲ್ಲಿ ಹೊರತು

---

* ಸಂಪುಟ 40; ಸಂಚಿಕೆ 3; ನವೆಂಬರ್ 1970

ಮಿಕ್ಕಕಾಲದಲ್ಲಿ ಹೆಂಡತಿಯನ್ನು ತನ್ನ ಜೊತೆಯಲ್ಲಿ ಮಲಗಿಸಿಕೊಳ್ಳಬಾರದು. ಈತನ ಮನೆಯಲ್ಲಿ, ಅತಿಥಿಬ್ರಾಹ್ಮಣನು ಊಟವಿಲ್ಲದೆ, ಸತ್ಕಾರವಿಲ್ಲದೆ ವಾಸಮಾಡುವದಕ್ಕೆಡೆಗೊಡಬಾರದು. ಅತಿಥಿಯಾಗಿ ಬಂದ ವೇದವಿದ್ಯಾ ಪಾರಂಗತರು, ಶ್ರೋತ್ರಿಯರು, ಸ್ವಧರ್ಮದಿಂದ ಜೀವಿಸುವವರು, ಜಿತೇಂದ್ರಿಯರು, ಕರ್ಮನಿಷ್ಠರು, ತಪಸ್ವಿಗಳು – ಇವರನ್ನು ಹವ್ಯಕವ್ಯಗಳಿಂದ ಪೂಜಿಸುತ್ತಿರಬೇಕು. ಧರ್ಮಧ್ವಜಿಯಾಗಿ ವೇಷಧಾರಿಯಾದವನು, ನಿಷ್ಕಾರಣವಾಗಿ ಅಗ್ನಿಹೋತ್ರವನ್ನು ಬಿಟ್ಟವನು, ಗುರುದ್ರೋಹಿ–ಇವರಿಗೂ ಅನ್ನದಾನಮಾಡಬೇಕೆಂಬ ವಿಧಿಯಿದೆ. (ಬ್ರಹ್ಮಚಾರಿ, ಸಂನ್ಯಾಸಿ– ಇಂಥ) ತಮಗಾಗಿ ಅಡಿಗೆಮಾಡಿಕೊಳ್ಳದವರಿಗೂ ಗೃಹಸ್ಥನು ಅನ್ನದಾನಮಾಡತಕ್ಕದ್ದು. ಯಾವಾಗಲೂ **ವಿಘಸಾಶಿ**ಯಾಗಿರಬೇಕು, ಅಮೃತ ಭೋಜನನಾಗಿರಬೇಕು. ಅಮೃತವೆಂದರೆ ಯಜ್ಞಶೇಷವು, ಅದನ್ನು ಹವಿಸ್ಸಿಗೆ ಸಮಾನವೆಂದು ತಿಳಿಯಬೇಕು. ಕುಟುಂಬದವರು ಉಂಡಮೇಲೆ ಮಿಕ್ಕದ್ದನ್ನು ಯಾವನು ಉಣ್ಣುತ್ತಾನೋ ಅವನು **ವಿಘಸಾಶಿ. ಯಜ್ಞಶೇಷವೇ** ಅಮೃತವು.

ತನ್ನ ಪತ್ನಿಯಲ್ಲಿ ನಿರತನಾಗಿ ಜಿತೇಂದ್ರಿಯನಾಗಿ, ಅಸೂಯಾರಹಿತನಾಗಿ, ಋತ್ವಿಜರು, ಪುರೋಹಿತರು, ಆಚಾರ್ಯ, ಸೋದರಮಾವ, ಅತಿಥಿ, ಆಶ್ರಿತ, ವೃದ್ಧರು, ಹುಡುಗರು, ರೋಗಿಗಳು, ವೈದ್ಯರು, ಜ್ಞಾನಿಗಳು, ಸಂಬಂಧಿಗಳು, ಬಾಂಧವರು, ಮಾತಾಪಿತೃಗಳು, ಅಣ್ಣತಮ್ಮಂದಿರು, ಪುತ್ರ, ಪತ್ನಿ, ಮಗಳು, ದಾಸವರ್ಗ– ಇವರಲ್ಲಿ ಯಾರೊಡನೆಯೂ ವಿವಾದವನ್ನು ಮಾಡಬಾರದು. ಇವರೊಡನೆ ಕಲಹವನ್ನು ಬಿಟ್ಟವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ. ಇವರೊಡನೆ ಜಗಳವಾಡದೆ ಸುಮ್ಮನಿರುವಾತನು ಎಲ್ಲಾ ಲೋಕಗಳನ್ನೂ ಜಯಿಸಿಕೊಳ್ಳುವನೆಂಬುದರಲ್ಲಿ ಸಂಶಯವಿಲ್ಲ. ಆಚಾರ್ಯನು ಬ್ರಹ್ಮಲೋಕಕ್ಕೆ ಒಡೆಯನು, ತಂದೆಯು ಪ್ರಜಾಪತಿಲೋಕಕ್ಕೆ ಪ್ರಭು, ಅತಿಥಿಯು ಇಂದ್ರ ಲೋಕಕ್ಕೊಡೆಯ, ಋತ್ವಿಜನು ದೇವಲೋಕಕ್ಕೆ ಪತಿ, ಕುಟುಂಬದಲ್ಲಿರುವ ಸ್ತ್ರೀಯರು ಅಪ್ಸರಲೋಕಕ್ಕೆ ಅಧಿಪತಿಗಳು, ಯತಿಗಳು ವಿಶ್ವೇದೇವತೆಗಳ ಲೋಕಕ್ಕೆ ಪತಿಗಳು, ಸಂಬಂಧಿಬಾಂಧವರು ದಿಕ್ಕುಗಳಿಗೆ, ತಾಯಿಯೂ ಸೋದರಮಾವನೂ ಪೃಥಿವಿಗೆ, ವೃದ್ಧರೂ ಹುಡುಗರೂ ರೋಗಿಗಳೂ ಕೃಶರೂ ಆಕಾಶಕ್ಕೆ ಯಜಮಾನರು.

ಅಣ್ಣನು ಪಿತೃಸಮಾನನು, ಹೆಂಡತಿಯೂ ಮಗನೂ ತನ್ನ ಶರೀರವೇ, ದಾಸವರ್ಗವು ತನ್ನ ನೆರಳಿದ್ದಂತೆ, ಮಗಳು ಇನ್ನೂ ಹೆಚ್ಚಿನ ಕೃಪೆಗೆ ಪಾತ್ರಳು. ಆದ್ದರಿಂದ ಇವರು ಏನಾದರೂ ಬಿರುನುಡಿಗಳನ್ನಾಡಿದರೆ ಮನಸ್ಸಿನಲ್ಲಿ ನೊಂದುಕೊಳ್ಳದೆ ಸಹಿಸಿಕೊಳ್ಳಬೇಕು. ಗೃಹಸ್ಥಧರ್ಮದಲ್ಲಿ ತಾತ್ಪರ್ಯವುಳ್ಳ ವಿವೇಕಿಯು ಧರ್ಮಶೀಲನಾಗಿ ಬೇಸರದೆ ಇರಬೇಕು. ಯಾವನೂ ಅರ್ಥಕ್ಕಾಗಿ ಕಟ್ಟುಬಿದ್ದು ಧರ್ಮವನ್ನಾಚರಿಸಬಾರದು. ಗೃಹಸ್ಥನ ಮೂರು ವೃತ್ತಿಗಳೊಳಗೆ ಉತ್ತರೋತ್ತರ ವಾದದ್ದು ಶ್ರೇಷ್ಠವಾಗಿರುತ್ತದೆ.

ಹೀಗೆಂದೇ ನಾಲ್ಕು ಆಶ್ರಮಗಳೊಳಗೆ ಮುಂದುಮುಂದಿನದು ಹಿಂದಿನದಕ್ಕಿಂತ ಹೆಚ್ಚಿನದೆನ್ನುವರು. ತನ್ನ ಶ್ರೇಯಸ್ಸನ್ನು ಬಯಸುವವನು ಮೇಲೆ ಹೇಳಿದಂತೆ ತನ್ನತನ್ನ ನಿಯಮಗಳನ್ನು ಕಾಪಾಡಿಕೊಳ್ಳಬೇಕು.

ಕುಂಭಧಾನ್ಯ, ಉಞ್ಛಶಿಲಾ, ಕಪೋತವೃತ್ತಿ- ಇವುಗಳನ್ನಾಶ್ರಯಿಸಿದವರು ಯಾವ ರಾಷ್ಟ್ರದಲ್ಲಿರುವರೋ ಆ ರಾಷ್ಟ್ರವು ಅಭಿವೃದ್ಧಿಯನ್ನು ಪಡೆಯುವದು. ಈ ಗೃಹಸ್ಥವೃತ್ತಿಗಳನ್ನು ವ್ಯಥೆಯಿಲ್ಲದೆ ಯಾವನು ಆಶ್ರಯಿಸಿರುವನೋ ಅವನು ತನ್ನ ಹಿಂದಿನ ಹತ್ತುತಲೆಮಾರಿನವರನ್ನೂ ಮುಂದಿನ ಹತ್ತುತಲೆಮಾರಿನವರನ್ನೂ ಪವಿತ್ರಗೊಳಿಸುವನು; ಅವನಿಗೆ ವಿಷ್ಣುಲೋಕವಾಸಿಗಳಿಗೆ ಸಮಾನವಾದ ಫಲವು ದೊರಕುವದು.

ಶರೀರೇಂದ್ರಿಯಗಳನ್ನು ಬಿಗಿಹಿಡಿದುಕೊಂಡಿರುವ ಗೃಹಸ್ಥರಿಗೆ ವೇದದೃಷ್ಟವಾದ ವಿಮಾನದಿಂದೊಡಗೂಡಿದ ಸುಪುಷ್ಪಿತವಾದ ಸ್ವರ್ಗಲೋಕವು ಲಭಿಸುವದು. ಬ್ರಹ್ಮದೇವನು ನಿಯತೇಂದ್ರಿಯರಾದ ಗೃಹಸ್ಥರಿಗೆ ಸ್ವರ್ಗಲೋಕವನ್ನು ಗೊತ್ತು ಮಾಡಿರುವನಾದ್ದರಿಂದ ಕ್ರಮಪ್ರಾಪ್ತವಾದ ಈ ಎರಡನೆಯ ಆಶ್ರಮವನ್ನು ಪಡೆದು ಧರ್ಮಾಚರಣೆಯನ್ನು ಮಾಡಿದಾತನು ಸ್ವರ್ಗಲೋಕದಲ್ಲಿ ಮಹಿಮೆಯಿಂದ ಮೆರೆಯುವನು.

ಈ ಆಶ್ರಮವಾದ ಬಳಿಕ ಇನ್ನೂ ಶ್ರೇಷ್ಠವಾದ ವಾನಪ್ರಸ್ಥಾಶ್ರಮವಿರುವದು. ಶರೀರವನ್ನು ದಂಡಿಸುತ್ತಾ ವನದಲ್ಲಿ ವಾಸಮಾಡುತ್ತಾ ತಪಸ್ಸನ್ನು ಮಾಡುವವರ ಆ ಆಶ್ರಮವನ್ನು ಇನ್ನು ವಿವರಿಸುವೆನು ಕೇಳು.

* * * * *

# 29. ವಾನಪ್ರಸ್ಥಾಶ್ರಮ*

**ಭೀಷ್ಮನಿಂತೆಂದನು:** ಯುಧಿಷ್ಠಿರನೆ, ಬಲ್ಲವರು ವಿಧಿಸಿರುವ ಗೃಹಸ್ಥವೃತ್ತಿಯನ್ನು ನಿನಗೆ ತಿಳಿಸಿರುತ್ತೇನೆ. ಬಳಿಕ ಯಾವ ಆಶ್ರಮವು ಉತ್ತಮವಾಗಿದೆಯೋ ಅದನ್ನು ಹೇಳುವೆನು ಕೇಳು. ಪತ್ನೀಸಂಯೋಗದಿಂದ ಮಾಡುವ ನಿಯಮಗಳಿಗೆ ಬೇಸತ್ತು ಆ ವೃತ್ತಿಯನ್ನು ಬಿಟ್ಟಿರುವ ಯಾವ ವಾನಪ್ರಸ್ಥರ ವೃತ್ತಿಯನ್ನು ಪುಣ್ಯದೇಶ ನಿವಾಸಿಗಳಾದವರು ವಿಚಾರಪೂರ್ವಕವಾಗಿ ಅನುಸರಿಸುವರೋ ಅದನ್ನು ಹೇಳುವೆನು ಕೇಳು.

ವ್ಯಾಸನು ಹೇಳಿದ್ದೇನೆಂದರೆ: ಗೃಹಸ್ಥನಾದವನು ತಲೆನರೆತಿದ್ದು, ಮಗನಿಗೂ ಮಗನಾದದ್ದನ್ನು ಕಂಡಾಗ ವನವನ್ನೇ ಆಶ್ರಯಿಸಬೇಕು. ಆಯುಸ್ಸಿನ ಮೂರನೆಯ ಭಾಗವನ್ನು ಈ ವಾನಪ್ರಸ್ಥಾಶ್ರಮದಲ್ಲಿದ್ದು ಕಳೆಯಬೇಕು. ದೇವತೆಗಳಿಗಾಗಿ ಯಾಗಮಾಡುತ್ತಾ ಅದೇ ಅಗ್ನಿಗಳ ಪರಿಚರ್ಯೆಯನ್ನು ಮಾಡುತ್ತಿರಬೇಕು.

ನಿಯಮಯುಕ್ತನಾಗಿ ನಿಯಮದಿಂದ ಆಹಾರವನ್ನು ಮೆಲ್ಲುತ್ತಾ ಆರನೆಯ ಭಾಗದಲ್ಲಿ ಭೋಜನಮಾಡಿ ಅಪ್ರಮಾದದಿಂದ ಅಗ್ನಿಹೋತ್ರ, ಗೋಸೇವೆ-ಮುಂತಾದ ಎಲ್ಲಾ ಯಜ್ಞಾಂಗಗಳನ್ನೂ ಸ್ವೀಕರಿಸಬೇಕು. ನೇಗಿಲನಿಂದ ಉತ್ತು ಬೆಳೆಯದ ವ್ರೀಹಿಯವಗಳನ್ನು ಅತಿಥಿಸೇವೆಯಾದನಂತರ ಉಳಿದ ವಿಘಸಾಶನವನ್ನುಣ್ಣುತ್ತಾ ಈ ಆಶ್ರಮದಲ್ಲಿಯೂ ಪಂಚಮಹಾಯಜ್ಞಗಳನ್ನಾಚರಿಸುತ್ತಿರಬೇಕು. ವಾನಪ್ರಸ್ಥಾಶ್ರಮದಲ್ಲಿಯೂ ಸದ್ಯಃಪ್ರಕ್ಷಾಲಕ, ಮಾಸಿಕಸಂಚಯ, ವಾರ್ಷಿಕಸಂಚಯ, ಹನ್ನೆರಡುವರ್ಷದ ಸಂಚಯ- ಎಂಬ ನಾಲ್ಕರಲ್ಲಿ ಒಂದನ್ನಾಶ್ರಯಿಸಿ ಅತಿಥಿ ಪೂಜೆಯನ್ನೂ ಯಜ್ಞಾನುಷ್ಠಾನವನ್ನೂ ಮಾಡುತ್ತಿರಬೇಕು. ಕೆಲವರು ಮಳೆಗಾಲದಲ್ಲಿ ಬಯಲಿನಲ್ಲಿಯೇ ಇರುವರು, ಚಳಿಗಾಲದಲ್ಲಿ ನೀರಿನಲ್ಲಿರುವರು, ಬೇಸಗೆಯಲ್ಲಿ ಪಂಚಾಗ್ನಿಗಳ ಮಧ್ಯೆ ತಪಸ್ಸುಮಾಡುವರು, ಸವನಕಾಲಗಳಲ್ಲಿ ಸ್ನಾನವನ್ನು ಮಾಡುತ್ತಿರುವರು. ಕೆಲವರು ಶುಕ್ಲಪಕ್ಷದಲ್ಲಿ ಕುದಿಸಿದ ಗಂಜಿಯನ್ನು ಕುಡಿಯುತ್ತಿರುವರು, ಇನ್ನು ಕೆಲವರು ಕೃಷ್ಣಪಕ್ಷದಲ್ಲಿ ಕುಡಿಯುವರು, ಅಥವಾ ಏನು ದೊರಕಿದರೆ ಅದನ್ನು ಭುಂಜಿಸುತ್ತಿರುವರು. ಕೆಲವರು ಗೆಡ್ಡೆಗಳನ್ನೂ ಕೆಲವರು

* ಸಂಪುಟ 40; ಸಂಚಿಕೆ 4; ಡಿಸೆಂಬರ್ 1970

ಹಣ್ಣುಗಳನ್ನೂ ಮತ್ತೆ ಕೆಲವರು ಹೂಗಳನ್ನೂ ದೃಢವ್ರತರಾಗಿ ಸೇವಿಸುತ್ತಿರುವರು. ಹೀಗೆ ವೈಖಾನಸಗತಿಯನ್ನಾಶ್ರಯಿಸಿರುವವರು ನ್ಯಾಯಾನುಸಾರವಾಗಿ ನಡೆಯುತ್ತಿರುವರು. ಈ ಆಶ್ರಮದವರಿಗೆ ಇವೇ ಮುಂತಾದ ದೀಕ್ಷೆಗಳು ಉಕ್ತವಾಗಿರುತ್ತವೆ.

ಇನ್ನು ನಾಲ್ಕನೆಯದಾಗಿ, ಗಾರ್ಹಸ್ಥ್ಯ ಮತ್ತು ವಾನಪ್ರಸ್ಥಾಶ್ರಮ- ಇವೆರಡಕ್ಕೂ ಬೇರೆಯಾಗಿರುವ ಔಪನಿಷದಧರ್ಮದ ಆಶ್ರಮವೂ ಉಂಟು. ಇದೇ ಯುಗದಲ್ಲಿ ಈ ವಾನಪ್ರಸ್ಥಾಶ್ರಮವನ್ನು ಅಗಸ್ತ್ಯರು, ಸಪ್ತರ್ಷಿಗಳು, ಮಧುಚ್ಛಂದಸ್ಸು, ಅಘಮರ್ಷಣ, ಸಾಂಕೃತಿ, ಸದಿವ, ತಣ್ಡಿ, ಯಥಾವಾಸ, ಅಕೃತಶ್ರಮ, ಅಹೋವೀರ್ಯ, ಶುಕ್ರಾಚಾರ್ಯ, ತಾಂಡ್ಯ, ಮೇಧಾತಿಥಿ, ಬುಧ, ಬಲವಂತ, ಕರ್ಣನಿರ್ವಾಕ, ಶೂನ್ಯಪಾಲ, ಕೃತಶ್ರಮ- ಇವರೆಲ್ಲರೂ ಈ ಧರ್ಮವನ್ನು ಅನುಸರಿಸಿ ಸ್ವರ್ಗವನ್ನು ಪಡೆದಿರುತ್ತಾರೆ. ಅಪ್ಪ, ಈ ಧರ್ಮವನ್ನು ಅನುಭವಿಸಿದ ಯಾಯಾವರಗಣಗಳು, ಉಗ್ರತಪಸ್ವಿಗಳಾದ ಋಷಿಗಳೂ ಧರ್ಮಕೌಶಲವನ್ನು ಅರಿತವರೂ ಆದವರು ಈ ಆಶ್ರಮದಲ್ಲಿ ಸೇರಿರುತ್ತಾರೆ. ಇನ್ನು ಬೇರೆಯವರಾದ ಅನೇಕ ಬ್ರಾಹ್ಮಣರು ವನವಾಸವನ್ನಾಶ್ರಯಿಸಿದರು. ವಾಲಖಿಲ್ಯರು, ಸೈಕತರು – ಇನ್ನು ಬೇರೆ ಅನೇಕರು ವೈಖಾನಸರು ಈ ಕರ್ಮಗಳಿಂದಾಗುವ ವಿಷಯಸುಖವನ್ನು ತ್ಯಜಿಸಿ ಧರ್ಮತತ್ಪರರಾಗಿ ಜಿತೇಂದ್ರಿಯರಾಗಿ ಧರ್ಮವನ್ನು ಪ್ರತ್ಯಕ್ಷಾನುಭವಕ್ಕೆ ತಂದುಕೊಂಡು ವನವನ್ನಾಶ್ರಯಿಸಿರುತ್ತಾರೆ. ನಕ್ಷತ್ರಗಳಿಗಿಂತ ಭಿನ್ನರಾಗಿ ದುರ್ಧರ್ಷರಾಗಿ ಜ್ಯೋತಿರ್ಗಣಗಳ ರೂಪದಿಂದ ಕಾಣಬರುತ್ತಿರುವರು.

**ಆಯುಸ್ಸಿನ ನಾಲ್ಕನೆಯ ಭಾಗವು ಬರಲಾಗಿ** ವಾನಪ್ರಸ್ಥ್ಯಧರ್ಮವನ್ನು ಬಿಟ್ಟುಬಿಡಬೇಕು. ಸದ್ಯಸ್ಕಾರ ಇಷ್ಟಿಯನ್ನು ಮಾಡಿ ತನ್ನ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟು ಆತ್ಮಯಾಜಿಯಾಗಿ, ಆತ್ಮರತನಾಗಿ, ಆತ್ಮಕ್ರೀಡನಾಗಿ, ಆತ್ಮಮಾತ್ರಾಶ್ರಯನಾಗಿ, ತನ್ನಲ್ಲಿಯೇ ಅಗ್ನಿಗಳನ್ನು ಸಮಾರೋಪ ಮಾಡಿಕೊಂಡು ತನ್ನದೆಂಬುದೆಲ್ಲವನ್ನೂ ಬಿಟ್ಟು ಎಲ್ಲಾ ಇಷ್ಟಿಗಳನ್ನೂ ಆತ್ಮನಲ್ಲಿಯೇ ಮಾಡುತ್ತಿರಬೇಕು. ಕರ್ಮಯಾಜಿಗಳ ಯಜ್ಞದಿಂದ ಆಗುವ ಫಲವೇ ಆತ್ಮಯಜ್ಞದಿಂದ ಆಗಬೇಕು. ಶರೀರಪಾತವಾಗುವ ವರೆಗೂ ಮೂರೂ ಅಗ್ನಿಗಳನ್ನು ಆತ್ಮನಲ್ಲಿಯೇ ಉತ್ತಮರೀತಿಯಿಂದ ಯಜನ

ಮಾಡುತ್ತಿರಬೇಕು. ಯಜುಸ್ಸಿನ ಮಂತ್ರಗಳನ್ನು ಉಚ್ಚರಿಸುತ್ತಾ ಐದಾರುಗ್ರಾಸಗಳ ಪ್ರಾಣಹವನವನ್ನು ಮಾಡಬೇಕು. ಬಳಿಕ ವಾನಪ್ರಸ್ಥಮುನಿಯು ಕೇಶಲೋಮನಖಗಳನ್ನು ವಪನಮಾಡಿಕೊಂಡು ಪವಿತ್ರನಾಗಿ ಆಶ್ರಮದಿಂದ (ಸಂನ್ಯಾಸದ) ಆಶ್ರಮವನ್ನು ಸೇರಬೇಕು. ಸರ್ವಭೂತಗಳಿಗೂ ಅಭಯವನ್ನು ಕೊಟ್ಟು ಯಾವ ದ್ವಿಜನು ಪ್ರವ್ರಜಿತನಾಗುವನೋ ಅವನಿಗೆ ತೇಜೋಮಯವಾದ ಲೋಕಗಳು ಸಿಕ್ಕುವವು; ಅವನು ಸತ್ತಬಳಿಕ ಆನಂತ್ಯವನ್ನು ಹೊಂದುವನು.

ಸುಶೀಲವೃತ್ತಿಯವನಾಗಿ ಕಲ್ಮಷವನ್ನೆಲ್ಲ ಕಳೆದುಕೊಂಡಿರುವವನು ಇಹಲೋಕಕ್ಕಾಗಿ ಅಥವಾ ಪರಲೋಕಕ್ಕಾಗಿ ಏನನ್ನು ಮಾಡುವದಕ್ಕೂ ಬಯಸುವದಿಲ್ಲ. ರೋಷಮೋಹಗಳಿಲ್ಲದೆ ಸಂಧಿವಿಗ್ರಹಗಳನ್ನು ಬಿಟ್ಟು ಆತ್ಮಜ್ಞನಾದ ಮಾನವನು ಉದಾಸೀನನಂತೆ ಇರುವನು. ತನ್ನ ಶಾಖೆಯ ಸೂತ್ರದ ಆಹುತಿಮಂತ್ರಗಳನ್ನು ಅರಿತಿರುವ, ಯಮಗಳನ್ನು ಆಚರಿಸುವದರಲ್ಲಿ ಸ್ವಲ್ಪವೂ ಚಲಿಸದ ಅವನಿಗೆ ಪುರುಷಾರ್ಥಪ್ರಾಪ್ತಿಯು ಆಗುವದು. ಇಂಥ ಜಿತೇಂದ್ರಿಯನೂ ಧರ್ಮಪರಾಯಣನೂ ಆದ ಆತ್ಮಜ್ಞಾನಿಗೆ ಆಗುವ ಗತಿಯ ವಿಷಯದಲ್ಲಿ ಯಾವ ಸಂಶಯವೂ ಇರುವದಿಲ್ಲ.

ಇದಾದ ಬಳಿಕ ಇದಕ್ಕಿಂತಲೂ ಉತ್ತಮವಾದ ಅತ್ಯಂತವಾದ ಸದ್ಗುಣಗಳಿಂದೊಡಗೂಡಿರುವ ಮೂರಕ್ಕೂ ಮೇಲೆ ಇರುವ ಉತ್ತಮವಾದ ನಾಲ್ಕನೆಯದಾದ ಆಶ್ರಮವು ಉಕ್ತವಾಗಿರುತ್ತದೆ. ಆ ಶ್ರೇಷ್ಠವಾದ ಆಶ್ರಮವನ್ನು ಹೇಳುತ್ತೇನೆ. ಪರಮಪರಾಯಣವಾದ ಅದನ್ನು ಕೇಳು.[1]

* * * * *

1 ಈ ಅಧ್ಯಾಯದಲ್ಲಿ ನಾಲ್ಕನೆಯ ಆಶ್ರಮದ ಪರಾಶ್ರಮದ ಪರಾಮರ್ಶವು ಇದ್ದರೂ ಅದನ್ನೆ ಪ್ರಧಾನವಾಗಿ ಮುಂದಿನ ಅಧ್ಯಾಯದಲ್ಲಿ ಹೇಳಲಾಗುವದು.

# 30. ಸಂನ್ಯಾಸಾಶ್ರಮ*

## (1)

**ಶುಕನು ಕೇಳಿದನೇನೆಂದರೆ:** ಹಿಂದಿನ ಎರಡು ಆಶ್ರಮಗಳಂತೆಯೇ ಈ ವಾನಪ್ರಸ್ಥಾಶ್ರಮದಲ್ಲಿಯೇ ಇದ್ದುಕೊಂಡಬಳಿಕ ಜ್ಞೇಯವಾದ ಪರತತ್ತ್ವವನ್ನು ಬಯಸಿದಾತನು ಹೇಗೆ ಶಕ್ತ್ಯನುಸಾರವಾಗಿ ತನ್ನ ಮನಸ್ಸನ್ನು ವಿನಿಯೋಗಿಸ ಬೇಕು?

ವ್ಯಾಸರು ಇಂತೆಂದರು: ಗಾರ್ಹಸ್ಥ್ಯ ಮತ್ತು ವಾನಪ್ರಸ್ಥ ಈ ಎರಡು ಆಶ್ರಮಗಳಿಂದ ಸಂಸ್ಕಾರವನ್ನು ಹೊಂದಿದಾತನು ಆ ಬಳಿಕ ಏನು ಮಾಡಬೇಕೋ ಅದರ ಪರಮಾರ್ಥವನ್ನು ಹೇಳುವೆನು ಕೇಳು: ಬ್ರಹ್ಮಚರ್ಯಾದ್ಯಾಶ್ರಮತ್ರಯದಲ್ಲಿ ಅಂತಃಕರಣದ ಕಷಾಯವನ್ನೆಲ್ಲ ಪಕ್ವಮಾಡಿ ಕಳೆದುಕೊಂಡಬಳಿಕ ಮುಂದಿನ ಸ್ಥಾನವಾದ ನಿರತಿಶಯವಾದ ಪಾರಿವ್ರಾಜ್ಯವನ್ನು ಸೇರಬೇಕು. ಅದನ್ನು ಅಭ್ಯಾಸಮಾಡಿ ಕೊಂಡು ಇರುವವರ ಧರ್ಮವನ್ನು ಹೇಳುವೆನು ಕೇಳು. ಪುರುಷಾರ್ಥಸಿದ್ಧಿಗಾಗಿ ಮತ್ತೊಬ್ಬರ ಸಹಾಯವಿಲ್ಲದೆ ತಾನೊಬ್ಬನೇ ಈ ಧರ್ಮವನ್ನು ಆಚರಿಸುತ್ತಿರಬೇಕು. ಯಾವಾತನು ಮತ್ತೊಬ್ಬರನ್ನು ಬಿಡದೆ ಅಥವಾ ತನ್ನನ್ನು ಮತ್ತೊಬ್ಬರು ಬಿಡದೆ ಇರುವಂತೆ ತಾನೊಬ್ಬನೇ ಧರ್ಮಾಚರಣೆಯಲ್ಲಿರುವನೋ ಅಗ್ನಿಯ ಆಧಾನವಿಲ್ಲದೆ, ಇಂಥದ್ದೊಂದು ತನ್ನ ಮನೆ ಎಂಬ ನಿಯಮವಿಲ್ಲದೆ ಕೇವಲ ಭಿಕ್ಷಾರ್ಥವಾಗಿ ಊರೊಳಕ್ಕೆ ಹೋಗುವನೋ ಅವನು ಸಂನ್ಯಾಸಿಯು. ನಾಳೆಗೆಂದು ಆಹಾರ ಸಂಗ್ರಹವನ್ನು ಮಾಡದೆ ಮೌನಿಯಾಗಿದ್ದುಕೊಂಡು ಅಂತಃಕರಣವನ್ನು ಸಮಾಧಾನಸ್ಥಿತಿಯಲ್ಲಿಟ್ಟುಕೊಂಡು ಅಲ್ಪಾಹಾರದಿಂದ ತೃಪ್ತನಾಗಿ ನಿಯತವಾಗಿ ಒಪ್ಪೊತ್ತು ಭೋಜನವನ್ನು ಮಾಡುತ್ತಾ ಇರಬೇಕು. ಭಿಕ್ಷಾಪಾತ್ರೆ, ವೃಕ್ಷಮೂಲದಲ್ಲಿ ವಾಸ, ಸಾಮಾನ್ಯವಸ್ತ್ರ, ಜೊತೆಯಲ್ಲಿ ಯಾರೂ ಇಲ್ಲದಿರುವಿಕೆ, ಸರ್ವಭೂತಗಳಲ್ಲಿ ಉಪೇಕ್ಷೆಯಿಂದ ಇರುವದು– ಇಷ್ಟೆ ಭಿಕ್ಷುವಿನ ಲಕ್ಷಣವು.

ಭಾವಿಗೆ ಅಂಜಿಕೊಂಡ ಆನೆಗಳಂತೆ ಯಾವನಲ್ಲಿ ವಾಕ್ಕುಗಳು ಬಂದು

---

* ಸಂಪುಟ 40; ಸಂಚಿಕೆ 5; ಜನವರಿ 1971

ಸೇರಿಕೊಳ್ಳುವವೋ ಮತ್ತೆ ಮಾತನಾಡಿದವನ ಬಳಿಗೆ ಹೋಗದೆ ಇರುವವೋ ಅಂಥವನು ಕೈವಲ್ಯಾಶ್ರಮದಲ್ಲಿರಬೇಕು. ಯಾವನೇ ಆಗಲಿ, ಅವಾಚ್ಯವನ್ನಾಡಿದ ನೆಂದು ಅವನಕಡೆಗೆ ಕಣ್ಣೆತ್ತಿ ನೋಡದೆ, ಅವನ ಮಾತನ್ನು ಕಿವಿಗೂ ಹಾಕಿಕೊಳ್ಳದೆ, ಮುಖ್ಯವಾಗಿ ಬ್ರಾಹ್ಮಣನು ಎಂದಿಗೂ ಪ್ರತ್ಯುತ್ತರವನ್ನು ಹೇಳದೆ ಇರಬೇಕು. ಬ್ರಾಹ್ಮಣನಿಗೆ ಯಾವದು ಒಳ್ಳೆಯದೋ ಅದನ್ನೇ ಆಡುತ್ತಿರಬೇಕು. ಯಾರಾದರೂ ನಿಂದೆಮಾಡಿದರೆ ಸುಮ್ಮನೆ ಇರಬೇಕು. ಹೀಗೆ ತನಗೆತಾನು ಚಿಕಿತ್ಸೆಯನ್ನು ಮಾಡಿಕೊಳ್ಳುತ್ತಿರಬೇಕು. ಯಾವಾತನು ತಾನೊಬ್ಬನೇ ಇದ್ದರೂ ಎಲ್ಲ ಆಕಾಶವೂ ತನ್ನಿಂದ ಪೂರ್ಣವಾಗಿರುವದೆಂದು ಅರಿತಿರುವನೋ, ಜನರಿಂದ ನಿಬಿಡವಾಗಿದ್ದರೂ ಆ ಸ್ಥಾನವೂ ಶೂನ್ಯಾಗಾರವಾಗಿರುವದೋ ಆತನನ್ನು ದೇವತೆಗಳು ಬ್ರಾಹ್ಮಣ ನೆನ್ನುವರು. ಯಾವದು ಸಿಕ್ಕಿದರೆ ಅದನ್ನು ಹೊದೆದುಕೊಂಡು, ಏನು ಸಿಕ್ಕಿದರೆ ಅಷ್ಟನ್ನು ತಿಂದು ತೃಪ್ತನಾಗುತ್ತಾ ಎಲ್ಲೆಂದರೆ ಅಲ್ಲಿ ಮಲಗುತ್ತಿರುವನಲ್ಲ ಆತನನ್ನು ದೇವತೆಗಳು ಬ್ರಾಹ್ಮಣನೆನ್ನುವರು. ಯಾವನು ಹಾವಿಗೆ ಅಂಜುವಂತೆ ಜನರ ಗುಂಪಿಗೆ ಹೆದರಿರುವನೋ, ನರಕಕ್ಕೆ ಅಂಜುವಂತೆ ರುಚಿರುಚಿಯಾದ ಭೋಜನದ ತೃಪ್ತಿಗೆ ಅಂಜುವನೋ, ಹೆಣಕ್ಕೆ ಅಂಜುವಂತೆ ಸ್ತ್ರೀಯರಿಗೆ ಹೆದರಿಕೊಳ್ಳುವನೋ ಅವನನ್ನು ದೇವತೆಗಳು ಬ್ರಾಹ್ಮಣನೆನ್ನುವರು. ಸನ್ಮಾನಕ್ಕಾಗಲಿ ಅಪಮಾನಕ್ಕಾಗಲಿ ಸಂತೋಷಗೊಳ್ಳದೆ, ಸಿಟ್ಟುಮಾಡದೆ, ಉಬ್ಬದೆ ಸರ್ವಪ್ರಾಣಿಗಳಿಗೂ ಅಭಯ ದಾತೃವಾಗಿರುವನೋ ಅವನನ್ನು ದೇವತೆಗಳು ಬ್ರಾಹ್ಮಣನೆನ್ನುವರು. ಯಾವನು ಮರಣವು ಹೆಚ್ಚೆನ್ನದೆ ಅಥವಾ ಬದುಕಿರುವದು ಹೆಚ್ಚೆನ್ನದೆ, ಆಳು ದಣಿಯ ಅಪ್ಪಣೆಯನ್ನು ಕಾಯ್ದಿರುವಂತೆ ಕಾಲವನ್ನೇ ನಿರೀಕ್ಷಿಸಿಕೊಂಡಿರುವನೋ ಅವನನ್ನು ದೇವತೆಗಳು ಬ್ರಾಹ್ಮಣನೆನ್ನುವರು. ಚಿತ್ತದಲ್ಲಿ ಯಾವ ದೋಷವೂ ಇಲ್ಲದೆ, ವಾಕ್ಕಿನಲ್ಲಿ ಯಾವ ದೋಷವೂ ಇಲ್ಲದೆ ಸರ್ವಪಾಪಗಳಿಂದಲೂ ನಿರ್ಮುಕ್ತನಾಗಿರುವ ಆ ಶತ್ರುಹೀನನಿಗೆ ಎಲ್ಲಿಯ ಭಯ? ಯಾವ ಭೂತಗಳಿಗೂ ಅಂಜದೆ, ಎಲ್ಲಾ ಪ್ರಾಣಿಗಳಿಗೂ ಅಭಯವನ್ನಿತ್ತು ಯಾವನಿರುವನೋ ಮೋಹರಹಿತನಾಗಿರುವ ಆತನಿಗೆ ಏತರಿಂದಲೂ ಭಯವಿರುವದಿಲ್ಲ.

* * * * *

# 30. ಸಂನ್ಯಾಸಾಶ್ರಮ

## (2)

**ವ್ಯಾಸರಿಂತೆಂದರು:** ಹೇಗೆ ಆನೆಯ ಹೆಜ್ಜೆಯ ಗುರುತಿನಲ್ಲಿ ಮಿಕ್ಕ ಪ್ರಾಣಿಗಳ ಹೆಜ್ಜೆಯ ಗುರುತುಗಳೆಲ್ಲವೂ ಸೇರಿಹೋಗಿರುವವೋ ಹಾಗೆಯೇ ಅಹಿಂಸೆಯಲ್ಲಿ ಮಿಕ್ಕ ಧರ್ಮಗಳೆಲ್ಲವೂ ಸೇರಿಕೊಂಡಿರುವವು. ಯಾವನು ಹಿಂಸೆಯನ್ನು ಆಚರಿಸುವದಿಲ್ಲವೋ ಅವನು ನಿತ್ಯವೂ ಅಮೃತನಾಗಿರುವನು. ಅಹಿಂಸಕನೂ ಸಮದರ್ಶಿಯೂ ಸತ್ಯವಾದಿಯೂ ಧೃತಿಮಂತನೂ ಜಿತೇಂದ್ರಿಯನೂ ಎಲ್ಲಾ ಭೂತಗಳಿಗೂ ಶರಣ್ಯನಾಗಿರುವಾತನೂ ಆಗಿ ನಿರತಿಶಯವಾದ ಗತಿಯನ್ನೈದುವನು.

ಹೀಗೆ ಪ್ರಜ್ಞಾನದಿಂದ ತೃಪ್ತನಾಗಿ ನಿರ್ಭಯನಾಗಿ ಯಾವ ಕಾಮವೂ ಇಲ್ಲದವನಿಗೆ ಮೃತ್ಯುವು ಅತಿಕ್ರಮಿಸಲಾರದು; ಅವನೇ ಮೃತ್ಯುವನ್ನು ಅತಿಕ್ರಮಿಸುವನು. ಸರ್ವಸಂಗಗಳಿಂದಲೂ ನಿರ್ಮುಕ್ತನಾಗಿ ಆಕಾಶದಂತೆ ಇರುವ, ತನ್ನದೆಂಬುದಿಲ್ಲದೆ ಏಕಾಕಿಯಾಗಿ ಚಲಿಸುತ್ತಿರುವ, ಶಾಂತನಾದ ಮುನಿಯು ಯಾವನೋ ಆತನನ್ನು ದೇವತೆಗಳು **'ಬ್ರಾಹ್ಮಣ'**ನೆನ್ನುವರು. ಯಾವನ ಬದುಕು ಧರ್ಮಕ್ಕಾಗಿಯೇ ಇರುವದೋ ಧರ್ಮವು ಶ್ರೀಹರಿಗೋಸ್ಕರವಾಗಿರುವದೋ, ದಿನರಾತ್ರೆಗಳೂ ಪುಣ್ಯಕ್ಕಾಗಿಯೇ ಇರುವವೋ ಅವನನ್ನು ದೇವತೆಗಳು 'ಬ್ರಾಹ್ಮಣ'ನೆನ್ನುವರು. ನಿಷ್ಕಾಮನೂ ಯಾವುದೇ ಕರ್ತವ್ಯವೂ ಇಲ್ಲದವನೂ ಯಾರೊಬ್ಬರನ್ನೂ ನಮಸ್ಕರಿಸದವನೂ ಸ್ತುತಿಸದವನೂ ಎಲ್ಲಾ ಬಂಧಗಳಿಂದಲೂ ಮುಕ್ತನಾದವನೂ ಆಗಿರುವವನು ಯಾವನೋ ಅವನನ್ನು ದೇವತೆಗಳು 'ಬ್ರಾಹ್ಮಣ'ನೆಂದು ತಿಳಿಯುವರು.

ಎಲ್ಲಾ ಪ್ರಾಣಿಗಳೂ ಸುಖದಲ್ಲಿ ಪ್ರೀತಿಯುಳ್ಳವರಾಗಿರುತ್ತಾರೆ, ಎಲ್ಲ ಪ್ರಾಣಿಗಳೂ ದುಃಖಕ್ಕೆ ಅಂಜುತ್ತಿರುತ್ತಾರೆ. ಅವರಿಗೆ ಅಂಜಿಕೆಯನ್ನುಂಟು ಮಾಡುವ ಕರ್ಮವನ್ನು ಮಾಡುವದರಲ್ಲಿ ಬೇಸತ್ತ ಶ್ರದ್ಧಾಳುವು ಅಂಥ ಕರ್ಮಗಳನ್ನು ಮಾಡಬಾರದು. ಪ್ರಾಣಿಗಳಿಗೆ ಅಭಯದಕ್ಷಿಣೆಯನ್ನು ಕೊಡುವ ದಾನವು ಎಲ್ಲಾ

---

* ಸಂಪುಟ 40; ಸಂಚಿಕೆ 6; ಫೆಬ್ರವರಿ 1971

ದಾನಗಳಿಗಿಂತಲೂ ಶ್ರೇಷ್ಠವಾಗಿರುವದು. ಯಾವನು ಹಿಂಸಾಪ್ರಧಾನವಾದ ಶರೀರದಭಿಮಾನವನ್ನು ಮೊದಲು ಬಿಡುವನೊ ಅವನು ಪ್ರಾಣಿಗಳಿಂದ ಅಭಯವನ್ನೂ ಅನಂತವಾದ ಮೋಕ್ಷವನ್ನೂ ಪಡೆಯುವನು. ಯಾವನು ತೆರೆದಬಾಯಿಯಲ್ಲಿ ಹವಿಸ್ಸನ್ನು ಹೋಮಮಾಡದೆಇರುವನೊ ಅವನ ಅಂಗವನ್ನೂ ಅಂಗಗಳನ್ನೂ ಶರೀರವನ್ನೂ, ಮಾಡಿದ ಅಥವಾ ಮಾಡದೆ ಇದ್ದ ಕರ್ಮವನ್ನೂ – ಈ ಎಲ್ಲವನ್ನೂ – ಲೋಕಕ್ಕೆ ನಾಭಿಯೂ ಜಗತ್ತಿಗೆಲ್ಲ ಪ್ರತಿಷ್ಠಾಸ್ವರೂಪನೂ ಆದ ವೈಶ್ವಾನರನು ವ್ಯಾಪಿಸಿಕೊಂಡಿರುವನು. ಆತ್ಮಯಾಜಿಯಾದವನು ಹೃದಯದಲ್ಲಿರುವ ವೈಶ್ವಾನರನಲ್ಲಿ ಇಂದ್ರಿಯಪ್ರಾಣಗಳೆಲ್ಲವನ್ನೂ ಹೋಮ ಮಾಡುತ್ತಿರುವನು. ಆತನ ಅಗ್ನಿಹೋತ್ರವು ಆತ್ಮನಲ್ಲಿ ಹುತವಾದದ್ದು ದೇವಲೋಕವೇ ಮುಂತಾದ ಸರ್ವಲೋಕಗಳಲ್ಲಿಯೂ ಇರುವ ಪ್ರಾಣಿಗಳಿಗೆ ತೃಪ್ತಿಯನ್ನುಂಟು ಮಾಡುವದು. ಅಕಾರಾದಿತ್ರಿವರ್ಣಗಳಿಂದ ಉಕ್ತನಾಗಿರುವ, ತ್ರಿಗುಣಾತ್ಮಕಮಾಯೆ ಯನ್ನು ನಿಯಮಿಸುತ್ತಿರುವ ಸುಪರ್ಣನಂತೆ ಸರ್ವಗತನೂ ಆಗಿರುವ ಈ ಜಗತ್ತಿನ ಪರಮಾತ್ಮನನ್ನು ಯಾರು ಅರಿತುಕೊಂಡಿರುವರೋ, ಅವರು ಸರ್ವಲೋಕ ಗಳಲ್ಲಿಯೂ ಪೂಜ್ಯರಾಗಿರುವರು, ಮತ್ತು ಮನುಷ್ಯರೂ ದೇವತೆಗಳೂ ಅವರ ಸರ್ವಕರ್ಮಗಳನ್ನೂ ಹೊಗಳುತ್ತಿರುವರು; ವೇದಗಳನ್ನೂ ವೇದ್ಯವಸ್ತುವನ್ನೂ ವಿಧಿಯನ್ನೆಲ್ಲವನ್ನೂ ನಿರುಕ್ತವನ್ನೂ ಪರಮಾರ್ಥವನ್ನೂ ಶರೀರಾತ್ಮನಲ್ಲಿಯೇ ಇರುವವೆಂದು ಯಾವನು ಅರಿತುಕೊಂಡಿರುವನೋ ಅವನ ಸ್ಥಿತಿಯನ್ನೇ ಬಯಸುತ್ತಿರುವರು. ಯಾವನು ಭೂಮಿಯಲ್ಲಿ ಆಸಕ್ತವಾಗಿರುವ, ದ್ಯುಲೋಕದಲ್ಲಿ ಅಪ್ರಮೇಯವಾಗಿರುವ, ಅಂಡದಲ್ಲಿ ಹಿರಣ್ಮಯನಾಗಿರುವ ಅಂಡಜಾತ್ಮನನ್ನು ಅಂತರಿಕ್ಷದಲ್ಲಿ ಹಾರಾಡುತ್ರಿರುವ ಪಕ್ಷಿಯನ್ನು ಅರಿತಿರುವನೋ, ಅವನು ಭೋಗ್ಯವಾದ ಈ ಶರೀರದಲ್ಲಿ ಜ್ಞಾನಮತಿಗಳಿಂದ ಬೆಳಗುತ್ತಿರುವನು. ಸುತ್ತುತ್ತಿರುವ ಮುಪ್ಪಿಲ್ಲದ, ಆರು ಗುಂಬಗಳುಳ್ಳ, ಹನ್ನೆರಡು ಹಾರೆಕೋಲುಗಳಿರುವ, ಸುಪರ್ಣಗಳುಳ್ಳ ಈ ಪ್ರಕಾರದ ವಿಶ್ವವು ಯಾವಾತನ ಮುಖದಲ್ಲಿ ಒಳಹೋಗುತ್ತಿರು ವದೋ, ಆ ಕಾಲಚಕ್ರವು ಹೃದಯಗುಹೆಯಲ್ಲಿರುತ್ತಿರುವದು. ಸುಪ್ರಸನ್ನನಾದ ಯಾವಾತನು ಜಗತ್ತಿಗೆ ಶರೀರವೊ ಆತನು ಸರ್ವಲೋಕಗಳನ್ನೂ ಪಡೆದವನು. ತನ್ನಲ್ಲಿರುವ ದೇವತೆಗಳನ್ನು ತೃಪ್ತಿಗೊಳಿಸುತ್ತಿರುವನು. ಅವರು ತೃಪ್ತರಾಗಿ ಈತನ ಮುಖವನ್ನು ತೃಪ್ತಿಗೊಳಿಸುವರು. ತೇಜೋಮಯನಾಗಿ, ನಿತ್ಯಮಯನಾಗಿ,

ಪ್ರಮಾಣನಾಗಿ, ಅನಂತವಾಗಿರುವ ಅಭಯುವಾಗಿರುವ ಲೋಕಗಳನ್ನು ಪಡೆಯುವನು. ಯಾವನಿಂದ ಪ್ರಾಣಿಗಳು ಎಂದಿಗೂ ಅಂಜುವದಿಲ್ಲವೋ ಆತನು ಪ್ರಾಣಿಗಳಿಗೆ ಎಂದಿಗೂ ಅಂಜುವದಿಲ್ಲ. ಆತನು ಮತ್ತೊಬ್ಬರಿಗೆ ನಿಂದನೀಯನಾಗಿರುವದಿಲ್ಲ, ತಾನೂ ಮತ್ತೊಬ್ಬರನ್ನು ನಿಂದಿಸುವದಿಲ್ಲ. ಮೋಹವು ಅವನಿಂದ ತೊಲಗಿರುವದು; ಕಲ್ಮಷವೆಲ್ಲ ತೊಲಗಿರುವದು. ಭಿಕ್ಷುಕನಾದವನು ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಭೋಗಗಳಲ್ಲಿ ಆಸಕ್ತನಾಗಿರುವದಿಲ್ಲ. ಆತನು ರೋಷಮೋಹಗಳಿಲ್ಲದೆ ಇರುವನು; ಮಣ್ಣುಹೆಂಟೆ, ಕಲ್ಲುತುಂಡು, ಚಿನ್ನ, ಇವುಗಳನ್ನು ಕಂಡರೂ ವಿಕಾರವಿಲ್ಲದ ಸ್ಥಿತಿಯಲ್ಲಿರುವನು, ದೋಷರಹಿತನಾಗಿರುವನು. ಯಾರೊಡನೆಯೂ ಸಂಧಿವಿಗ್ರಹಗಳನ್ನು ಮಾಡಿಕೊಳ್ಳದೆ ಇರುವನು, ನಿಂದಾಸ್ತುತಿಗಳಿಲ್ಲದೆ ಇರುತ್ತಾನೆ. ಪ್ರಿಯಾಪ್ರಿಯಗಳಿಲ್ಲದೆ, ಉದಾಸೀನನಂತೆಯೇ ವಿಹರಿಸುತ್ತಿರುವನು.[1]

* * * * *

## 31. ಪರಮಾತ್ಮದರ್ಶನ*

ವ್ಯಾಸರಿಂತೆಂದರು: ಪ್ರಕೃತಿಯ ವಿಕಾರಗಳಾಗಿರುವ ದೇಹಾದಿಗಳಿಗೆ ಕ್ಷೇತ್ರಜ್ಞನು ಅಧಿಷ್ಠಾತೃವಾಗಿರುವನು. ಅವು ಈತನನ್ನು ಅರಿಯವು, ಆದರೆ ಆತನು ಅವುಗಳನ್ನು ಅರಿಯುತ್ತಿರುವನು. ಮನಸ್ಸೆಂಬ ಏಳನೆಯದರೊಡನೆ ಸೇರಿಕೊಂಡಿರುವ ಪಂಚೇಂದ್ರಿಯಗಳಿಂದ ಆತನು– ಚೆನ್ನಾಗಿ ಪಳಗಿಸಿದ ಶ್ರೇಷ್ಠವಾದ ಕುದುರೆಗಳಿಂದ ಸಾರಥಿಯಾದವನು ಹೇಗೆ ವ್ಯವಹರಿಸುವನೋ ಹಾಗೆ ಮಾಡಬೇಕಾದ ಕಾರ್ಯವನ್ನು ನೆರವೇರಿಸುತ್ತಿರುವನು.

ಇಂದ್ರಿಯಗಳಿಗಿಂತ ಅರ್ಥಗಳು ಹೆಚ್ಚಿನವು, ಅರ್ಥಗಳಿಗಿಂತ ಮನಸ್ಸು ಹೆಚ್ಚಿನದು, ಮನಸ್ಸಿಗಿಂತಲೂ ಬುದ್ಧಿಯು ಹೆಚ್ಚಿನದು, ಬುದ್ಧಿಗಿಂತಲೂ ಮಹಾನ್

---

* ಸಂಪುಟ 40; ಸಂಚಿಕೆ 7; ಮಾರ್ಚ್ 1971

1 241ನೆಯ ಅಧ್ಯಾಯದಲ್ಲಿ 36ನೆಯ ಪದ್ಯದಿಂದ ಹಿಡಿದು ಕೊನೆಯವರೆಗೂ ನಿಶ್ಚಿತವಾದ ಅರ್ಥವು ಏನೆಂಬುದನ್ನು ಗೊತ್ತುಪಡಿಸುವದು ಕಷ್ಟ. ಅಕ್ಷರಾರ್ಥವನ್ನೇ ಬಲುಮಟ್ಟಿಗೆ ಬರೆಯಲಾಗಿದೆ.

ಆತ್ಮನು ಹೆಚ್ಚಿನವನು, ಮಹತ್ತಿಗಿಂತಲೂ ಅವ್ಯಕ್ತವು ಹೆಚ್ಚಿನದು, ಎಲ್ಲಕ್ಕೂ ಹೆಚ್ಚಿನ ಅವ್ಯಕ್ತಕ್ಕಿಂತ ಅಮೃತವು ಹೆಚ್ಚಿನದು. **ಅಮೃತ**ಕ್ಕಿಂತ ಹೆಚ್ಚಿನದು ಯಾವದೂ ಇಲ್ಲ; ಅದೇ ಎಲ್ಲಕ್ಕೂ ಕೊನೆ, ಅದೇ ಪರಗತಿ. ಈ ರೀತಿಯಲ್ಲಿ ಸರ್ವಪ್ರಾಣಿ ಗಳಲ್ಲಿಯೂ ಹೃದಯಗುಹೆಯಲ್ಲಿ ಗೂಢನಾಗಿರುವ ಆತ್ಮನು ಬೆಳಗಿತೋರದೆ ಇರುತ್ತಿರುವನು. ಆದರೆ ಸೂಕ್ಷ್ಮವಾದ ಏಕಾಗ್ರವಾದ ಬುದ್ಧಿಯಿಂದ ಸೂಕ್ಷ್ಮದರ್ಶನ ಪರರಾದವರು ಆತನನ್ನು ಕಾಣುವರು.

ಮನಃಷಷ್ಠವಾಗಿರುವ ಇಂದ್ರಿಯಗಳನ್ನೂ ಇಂದ್ರಿಯಾರ್ಥಗಳನ್ನೂ ಬುದ್ಧಿಪೂರ್ವಕವಾಗಿ ಅಂತರಾತ್ಮನಲ್ಲಿ ಲಯಗೊಳಿಸಿಕೊಂಡು, ಚಿಂತಿಸುವದಕ್ಕೆ ವಿಷಯವಾಗುವ ಬಹುವಿಷಯಗಳನ್ನು ಚಿಂತಿಸದೆ, ಮನಸ್ಸನ್ನು ವಿದ್ಯೆಯಿಂದ ಹಿಡಿದು ಧ್ಯಾನದಿಂದ ಉಪಶಮನಗೊಳಿಸಿ, ಏತಕ್ಕೂ ವಶನಾಗದೆ ಪ್ರಶಾಂತ ನಾದವನು ಅಮೃತಪದವನ್ನು ಸೇರುವನು. ಆದರೆ ಯಾವನು ಇಂದ್ರಿಯಗಳಿಗೆಲ್ಲ ವಶನಾಗಿರುವನೋ ಆ ಮರ್ತ್ಯನು ವಿವೇಕವನ್ನು ಕಳೆದುಕೊಂಡು ತನ್ನನ್ನೇ ಅವುಗಳಿಗೆ ಅರ್ಪಿಸಿ ಮೃತ್ಯುವನ್ನೈದುವನು.

ಸರ್ವಸಂಕಲ್ಪಗಳನ್ನೂ ತೊಲಗಿಸಿಕೊಂಡು ಚಿತ್ತವನ್ನು ಬುದ್ಧಿಯಲ್ಲಿ ನಿಲ್ಲಿಸಿ ಕೊಳ್ಳಬೇಕು. ಹೀಗೆ ಚಿತ್ತವನ್ನು ಬುದ್ಧಿಯಲ್ಲಿಟ್ಟುಕೊಂಡವನು ಕಾಲಂಜರ (ಕಾಲವನ್ನು ಜೀರ್ಣಿಸಿಕೊಳ್ಳುವವ)ನಾಗುವನು. ಚಿತ್ತವನ್ನು ಪ್ರಸನ್ನವಾಗಿ ಮಾಡಿಕೊಳ್ಳುವ ಯತಿಯು ಶುಭಾಶಯುಗಳನ್ನು ಮೀರಿ ಪ್ರಸನ್ನಾಂತಃಕರಣನಾಗಿ ತನ್ನ ಸ್ವರೂಪದಲ್ಲಿಯೇ ನೆಲೆನಿಂತು ಆತ್ಯಂತಿಕಸುಖವನ್ನು ಪಡೆದುಕೊಳ್ಳುವನು. ಪ್ರಸನ್ನವಾದ ಚಿತ್ತದ ಸ್ಥಿತಿಯು ಹೇಗಿರುವದೆಂದರೆ ಸುಷುಪ್ತಿಯಲ್ಲಿ ಸುಖವನ್ನನು ಭವಿಸುವಂತೆ, ಗಾಳಿಯಿಲ್ಲದೆಡೆಯಲ್ಲಿ ಅಲುಗಾಡದೆ ಇರುವ ದೀಪದಂತೆ ಅದು ಇರುತ್ತದೆ.

ಹೀಗೆ ಪೂರ್ವರಾತ್ರಿಯಲ್ಲಿಯೂ ಬೆಳಗಿನಜಾವದಲ್ಲಿಯೂ ತನ್ನನ್ನು ಪರಮಾತ್ಮನಲ್ಲಿ ಬೆರೆಯಿಸಿಕೊಂಡು, ಅಲ್ಪಹಾರನೂ ವಿಶುದ್ಧಾತ್ಮನೂ ಆಗಿರುವಾತನು ಆತ್ಮನ ಸ್ವರೂಪದಲ್ಲಿಯೇ ಆತ್ಮನನ್ನು ಕಂಡುಕೊಳ್ಳುವನು.

ಹೀಗೆ ಪುತ್ರಾನುಶಾಸನವು ಸರ್ವವೇದಗಳ ರಹಸ್ಯವು, ಕೇವಲ ಆಗಮದಿಂದ

ಅಥವಾ ಐತಿಹ್ಯದಿಂದ ಇದನ್ನು ಅರಿತುಕೊಳ್ಳಲಾಗದು; ಆತ್ಮಾನುಭವದಿಂದಲೇ ಅರಿತುಕೊಳ್ಳಬಹುದಾದದ್ದಿದು. ಧರ್ಮಾಖ್ಯಾನಗಳೂ ಸತ್ಯವಿಷಯಕಾಖ್ಯಾನಗಳೂ ಎಷ್ಟಿರುವವೋ ಅವುಗಳೆಲ್ಲದರ ಸಾರವಿದು. ಸರ್ವಋಕ್ಕುಗಳನ್ನೂ ಕಡೆದು ತೆಗೆದ ಅಮೃತವಿದು. ಮೊಸರಿನಿಂದ ಬೆಣ್ಣೆಯನ್ನು ಹೇಗೆ ತೆಗೆಯುವರೋ, ಕಟ್ಟಿಗೆಯಿಂದ ಹೇಗೆ ಬೆಂಕಿಯನ್ನು ಕಡೆದು ತೆಗೆಯುವರೋ– ಹಾಗೆಯೇ ವಿವೇಕಿಗಳ ಸಲುವಾಗಿ ಈ ಜ್ಞಾನವನ್ನು ಕಡೆದು ತೆಗೆದಿರುತ್ತದೆ.

ಈ ಪುತ್ರಾನುಶಾಸನವನ್ನು ಸ್ನಾತಕರಿಗೆ ಮಾತ್ರ ಹೇಳಬೇಕು. ಯಾವನು ಪ್ರಶಾಂತಚಿತ್ತನಲ್ಲವೋ ದಾಂತನಲ್ಲವೋ ತಪಸ್ವಿಯಲ್ಲವೋ ವೇದವನ್ನರಿತಿಲ್ಲವೋ, ಶುಶ್ರೂಷಾರತನಲ್ಲವೋ, ಅಸೂಯಾವಂತನಾಗಿರುವವನೋ, ಋಜುತ್ವವಿಲ್ಲದವನೋ, ಹೇಳಿದಂತೆ ವರ್ತಿಸುವನಲ್ಲವೋ, ಕರ್ಮಶಾಸ್ತ್ರದಿಂದ ಯಾವನ ಹೃದಯವು ಸುಟ್ಟುಹೋಗಿರುವದೋ, ಯಾವನು ಚಾಡಿಕೋರನೋ, ಅವನಿಗೆ ಇದನ್ನು ಹೇಳತಕ್ಕದ್ದಲ್ಲ. ಯಾವನು ತತ್ತ್ವಜ್ಞಾನದಲ್ಲಿ ಅಭಿಲಾಷೆಯಿರುವವನೋ, ಉತ್ತಮಗುಣಗಳುಳ್ಳವನೋ, ಪ್ರಶಾಂತನಾಗಿರುವನೋ, ತಪಸ್ವಿಯಾಗಿರುವನೋ, ಅಂಥ ಪ್ರಿಯಪುತ್ರನಿಗೆ ಅಥವಾ ವಿವೇಕಿಯಾದ ಶಿಷ್ಯನಿಗೆ ಹೇಳಬೇಕು, ಮತ್ತೆ ಯಾರಿಗೂ ಹೇಳಬಾರದು. ರತ್ನಪೂರ್ಣವಾದ ಭೂಮಿಯನ್ನೆಲ್ಲ ದಾನಮಾಡುವದಕ್ಕಿಂತಲೂ ಈ ಶಾಸ್ತ್ರವೇ ಹೆಚ್ಚು ಶ್ರೇಯಸ್ಕರವೆಂದು ವಿವೇಕಿಯು ತಿಳಿಯಬೇಕು.

ಇದಕ್ಕಿಂತಲೂ ಗುಹ್ಯತರವಾಗಿ ಅತಿಮಾನುಷವಾಗಿರುವ ಅಧ್ಯಾತ್ಮ ವಿದ್ಯೆಯನ್ನು ಮಹರ್ಷಿಗಳಿಗೆ ಮಾತ್ರ ಗೋಚರವಾಗಿರುವ, ಉಪನಿಷತ್ತುಗಳಲ್ಲಿ ಉಕ್ತವಾಗಿರುವ, ಅಧ್ಯಾತ್ಮತತ್ತ್ವವನ್ನು ಹೇಳುವೆನು, ನಿನ್ನ ಮನಸ್ಸಿನಲ್ಲಿ ಯಾವದರ ವಿಷಯಕ್ಕೆ ಎಳ್ಳಷ್ಟಾದರೂ ಸಂಶಯವಿರುವದೋ ಅದನ್ನು ಕೇಳು; ಅದನ್ನೆಲ್ಲ ಹೇಳುವೆನು. ಇನ್ನು ಏನಾದರೂ ಕೇಳುವದಿದ್ದರೆ ಅದನ್ನು ಕೇಳಿಬಿಡು, ಇನ್ನೇನು ಹೇಳಲಿ?

* * * * *

## 32. ಮಹಾಭೂತಾದಿತತ್ತ್ವಗಳ ವಿವೇಚನ*

ಶುಕನು ಕೇಳಿದನೇನೆಂದರೆ: ಭಗವಂತನಾದ ಋಷಿಶ್ರೇಷ್ಠನೆ, ಅಧ್ಯಾತ್ಮ ವೆಂಬುದನ್ನು ಇನ್ನೂ ವಿಸ್ತಾರವಾಗಿ ನನಗೆ ತಿಳಿಸಿಕೊಡು; ಅಧ್ಯಾತ್ಮವು ಹೇಗಿರುತ್ತದೆ, ಅದನ್ನು ಹೇಗೆ ಅರಿತುಕೊಳ್ಳಬೇಕು?

**ವ್ಯಾಸರು** ಹೇಳಿದ್ದೇನೆಂದರೆ: ಅಪ್ಪ, ಮನುಷ್ಯನಿಗೆ ಅಧ್ಯಾತ್ಮವೆಂದು ಶಾಸ್ತ್ರದಲ್ಲಿ ಯಾವದನ್ನು ಹೇಳುತ್ತಾರೋ, ಅದನ್ನು ಹೇಳುವೆನು; ಅದರ ವಿವರವನ್ನು ಕೇಳು: ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ– ಇವು ಭೂತಗಳೊಳಗೆ ಮಹಾಭೂತ ಗಳೆನಿಸುವವು. ಇವು ಸಾಗರದ ದೊಡ್ಡ ಅಲೆಗಳಿದ್ದಂತೆ ಇರುತ್ತವೆ. ಆಮೆಯು ಹೇಗೆ ತನ್ನ ಅಂಗಗಳನ್ನು ಹೊರಚಾಚಿ ಮತ್ತೆ ಹಿಂದಕ್ಕೆಳೆದು ಕೊಳ್ಳುತ್ತಿರುವದೋ ಅದರಂತೆ, ಮಹಾಭೂತಗಳು ತಮಗಿಂತ ಸೂಕ್ಷ್ಮತರದವು ಗಳಿಂದ ಹುಟ್ಟಿ ಅವುಗಳಲ್ಲಿಯೇ ಸೇರುತ್ತಿರುವವು. ಆದ್ದರಿಂದ ಸ್ಥಾವರಜಂಗಮವಾದ ಈ ಜಗತ್ತೆಲ್ಲವೂ ತನ್ಮಯವಾಗಿರುತ್ತದೆ. ಸೃಷ್ಟಿಯಲ್ಲಿಯೂ ಪ್ರಲಯದಲ್ಲಿಯೂ ಆಯಾ ರೂಪವೇ ಆಗುತ್ತವೆ– ಎಂದು ಹೇಳುತ್ತಾರೆ. ಸರ್ವಪ್ರಾಣಿಗಳಲ್ಲಿಯೂ ಐದೇ ಮಹಾಭೂತಗಳಿರುತ್ತಿದ್ದರೂ ಅವರವರ ಕರ್ಮಾನುಸಾರವಾಗಿ ಬೇರೆ ಬೇರೆಯಾಗಿರುವಂತೆ ಬ್ರಹ್ಮನು ಸೃಷ್ಟಿಸಿರುತ್ತಾನೆ.

**ಶುಕನು** ಇಲ್ಲಿ ಕೇಳುತ್ತಾನೇನೆಂದರೆ; ತಂದೆಯೆ, ಬ್ರಹ್ಮನು ಶರೀರದಲ್ಲಿ ಆ ಐದನ್ನೇ ಸೃಷ್ಟಿಸಿರುತ್ತಾನೆಂದು ಕಂಡುಕೊಳ್ಳುವದು ಹೇಗೆ? ಇಂದ್ರಿಯಗಳೂ ಗುಣಗಳೂ ಬೇರಬೇರೆಯಾಗಿರುವವಲ್ಲ, ಅವುಗಳನ್ನು ಮಹಾಭೂತಕಾರ್ಯ ಗಳೆಂದು ಹೇಗೆ ಗುರುತಿಸಬೇಕು?

**ವ್ಯಾಸರು** ಹೇಳಿದ್ದು: ಇದನ್ನು ನಿನಗೆ ಇದ್ದದ್ದು ಇದ್ದಂತೆ ತಿಳಿಯಹೇಳುವೆನು: ಏಕಾಗ್ರಮನಸ್ಕನಾಗಿ ಕೇಳು. ಶಬ್ದ, ಶ್ರೋತ್ರ, ಮತ್ತು ಇದರ ಛಿದ್ರಗಳು– ಇವೆಲ್ಲ ಆಕಾಶದಿಂದ ಉತ್ಪನ್ನವಾಗಿರುವವು. ಪ್ರಾಣ, ಪ್ರಾಣವ್ಯಾಪಾರಗಳು, ಸ್ಪರ್ಶ– ಇವು ಮೂರೂ ವಾಯುವಿನ ಗುಣಗಳು. ರೂಪ, ಚಕ್ಷುರಿಂದ್ರಿಯ, ಜಾಠರಾಗ್ನಿ–

---

* ಸಂಪುಟ 40; ಸಂಚಿಕೆ 8; ಏಪ್ರಿಲ್ 1971

ಇವು ಮೂರು ತೇಜಸ್ಸಿನಿಂದ ಆಗಿರುತ್ತವೆ. ರಸ, ರಸನೇಂದ್ರಿಯ, ಸ್ನೇಹ – ಇವು ಮೂರೂ ಅಪ್ಪಿನ ಗುಣಗಳು. ಗಂಧ, ಘ್ರಾಣೇಂದ್ರಿಯ, ಶರೀರದ ಸ್ಥೂಲಭಾಗ– ಇವು ಪೃಥ್ವಿಯ ಗುಣಗಳು. ಇಂದ್ರಿಯಗಳಿಂದೊಡ ಗೂಡಿದ ಶರೀರವು ಹೇಗೆ ಪಾಂಚಭೌತಿಕವಾಗಿದೆಯೆಂಬುದನ್ನು ತಿಳಿಸಿದ್ದಾಯಿತು. ವಾಯುವಿಗೆ ಸ್ಪರ್ಶವು ಗುಣವು, ರಸವು ಅಪ್ಪಿನ ಗುಣವು; ರೂಪವು ತೇಜಸ್ಸಿನ ಗುಣವು ಆಕಾಶದಿಂದುಟಾಗಿ ತೋರುವ ಗುಣವು ಶಬ್ದವು. ಮನಸ್ಸು, ಬುದ್ಧಿ, ಸ್ವಭಾವ (?) ಇವು ಮೂರು ಆಕಾಶದಿಂದಾಗಿರುತ್ತವೆ. ಗುಣಗಳ ಕಾರ್ಯವನ್ನು ಸೇರಿದವರು. ಗುಣಗಳನ್ನು ಎಂದಿಗೂ ಮೀರಲಾರರು.

ಹೇಗೆ ಆಮೆಯು ತನ್ನ ಅಂಗಗಳನ್ನು ಹೊರಚಾಚಿ ಹಿಡಿತದಲ್ಲಿಟ್ಟು ಕೊಳ್ಳುವದೋ ಹಾಗೆಯೇ ಬುದ್ಧಿಯು ಇಂದ್ರಿಯಗಳನ್ನು ಸೃಷ್ಟಿಸಿ ತನ್ನ ಅಧೀನದಲ್ಲಿಟ್ಟುಕೊಂಡಿರುತ್ತದೆ. ಅಂಗಾಲಿನಿಂದ ಮೇಲೂ ನೆತ್ತಿಯಕೆಳಗೂ ಏನೇನು ಕಾಣುತ್ತಿರುವದೋ ಅಷ್ಟರಲ್ಲಿಯೇ ಈ ಬುದ್ಧಿಯು ವ್ಯಾಪಾರವನ್ನು ಮಾಡುತ್ತಿರುವದು. ಬುದ್ಧಿಯೇ ಶಬ್ದಾದಿಗುಣಗಳನ್ನೂ ಇಂದ್ರಿಯಗಳನ್ನೂ ವ್ಯಾಪಾರಮಾಡಿಸುತ್ತಿರುವದು: ಆರನೆಯದಾದ ಮನಸ್ಸನ್ನೂ ಇಂದ್ರಿಯಗಳೈದನ್ನೂ ಬುದ್ಧಿಯೇ ಕೆಲಸಮಾಡಿಸುತ್ತಿರುವದು. ಬುದ್ಧಿಯಿಲ್ಲದಿದ್ದರೆ ಎಲ್ಲಿಯ ಗುಣಗಳು?

ಮಾನವನಲ್ಲಿ ಇಂದ್ರಿಯಗಳು ಐದು. ಆರನೆಯದು ಮನಸ್ಸು, ಬುದ್ಧಿಯೇ ಏಳನೆಯುದೆಂದು ಬಲ್ಲವರು ಹೇಳುತ್ತಾರೆ; ಕ್ಷೇತ್ರಜ್ಞನಾದರೂ ಇವಕ್ಕೆ ಎಂಟನೆಯವನೆನ್ನುವರು. ಚಕ್ಷುರಿಂದ್ರಿಯವು ನೋಡುವದಕ್ಕೆ. ಮನಸ್ಸು ಸಂಶಯ ವನ್ನು ಮಾಡುತ್ತಿರುತ್ತದೆ, ಬುದ್ಧಿಯು ನಿಶ್ಚಯಮಾಡುವದಕ್ಕೆ. ಇವುಗಳ ಸಾಕ್ಷಿಯೇ ಕ್ಷೇತ್ರಜ್ಞನೆನಿಸಿರುತ್ತಾನೆ.

ರಜಸ್ಸು, ತಮಸ್ಸು, ಸತ್ತ್ವ– ಇವು ಮೂರೂ ತನ್ನ ಕಾರಣವಾದ ಪ್ರಕೃತಿ ಯಿಂದುಂಟಾಗಿರುವವು; ಎಲ್ಲಾ ಪ್ರಾಣಿಗಳಲ್ಲಿಯೂ ಇವು ಸಾಧಾರಣವಾಗಿರುವವು. ಇವುಗಳನ್ನು ಅಲ್ಲಿ ಗುರುತಿಸಬೇಕು. ಇವುಗಳೊಳಗೆ ಯಾವದರಿಂದ ಸುಖವುಂಟಾಗು ವದೋ, ಪ್ರಶಾಂತವಾಗಿ, ಶುದ್ಧವಾಗಿ ತೋರುವದೋ ಅದು ಸತ್ತ್ವಗುಣದ ಕಾರ್ಯವೆಂದು ತಿಳಿಯಬೇಕು. ಆದರೆ ಯಾವ ವಸ್ತು ಅಥವಾ ಮನಸ್ಸು ಸಂತಾಪಯುಕ್ತವಾಗಿ ಕಾಣುವದೋ ಅದನ್ನು ರಜೋಗುಣದ ಕಾರ್ಯವೆಂದರಿಯ

ಬೇಕು. ಯಾವದಾದರೆ ಸಮ್ಮೋಹದಿಂದೊಡಗೂಡಿರುವುದೋ ಊಹಿಸಲಸದಳವಾಗಿ ಅರಿಯುವದಕ್ಕಾಗದೆ ಇರುವದೋ ಅದನ್ನು ತಮೋಗುಣದ ಕಾರ್ಯವೆಂದು ತಿಳಿಯಬೇಕು. ಅಂತೂ ಹೀಗೆ ಹೆಚ್ಚಿನ ಹರ್ಷ, ಪ್ರೇಮ, ಆನಂದ, ಸಮತೆ, ಸ್ವಸ್ಥಚಿತ್ತತೆ, ತಟ್ಟನೆ ಉಂಟಾದರೆ ಅದನ್ನು ಸತ್ತ್ವಗುಣದ ಕಾರ್ಯವೆಂದೂ ಅಭಿಮಾನ, ಸುಳ್ಳು ನುಡಿಯುವಿಕೆ, ಲೋಭ, ಮೋಹ, ಪ್ರಮಾದ, ಅವಿದ್ಯೆ, ಆಲಸ್ಯ ಇವೆಲ್ಲವೂ ರಜಸ್ಸಿನ ಕಾರ್ಯಗಳೆಂದೂ ಮೋಹ, ಅಸಹನೆ– ಏನೂ ತಿಳಿಯದೆ ಇರುವದು– ಇವುಗಳು ತಟ್ಟನೆ ಉಂಟಾದರೆ ಇವೆಲ್ಲ ತಮೋಗುಣದ ಕಾರ್ಯಗಳೆಂದೂ ನಿಶ್ಚಯಿಸಬೇಕು.

* * * * *

## 33. ಬುದ್ಧಿಯ ಹೆಚ್ಚುಗಾರಿಕೆ, ಪ್ರಕೃತಿಪುರುಷವಿವೇಕ*

**ವ್ಯಾಸರಿಂತೆಂದರು:** ಮನಸ್ಸು ಸಂಕಲ್ಪವನ್ನುಂಟುಮಾಡುತ್ತದೆ. ಬುದ್ಧಿಯು ನಿಶ್ಚಯಿಸುತ್ತದೆ. ಹೃದಯವು ಪ್ರಿಯಾಪ್ರಿಯವನ್ನು ತಿಳಿಯುತ್ತದೆ. ಹಿಂದಿನ ಕರ್ಮದ ಪ್ರೇರಣೆಯು ಮೂರುಬಗೆಯಾಗಿರುತ್ತದೆ. ಬುದ್ಧಿಯೇ ಮನುಷ್ಯನಲ್ಲಿ ಮುಖ್ಯವಾದದ್ದು. ಅದು ಯಾವಾಗ ತನ್ನಲ್ಲಿತಾನೆ ವಿಕಾರವನ್ನು ಹೊಂದುವದೋ, ಆಗ ಮನಸ್ಸಾಗುವದು. ಇಂದ್ರಿಯಗಳು ವಿಂಗಡಿಸಿಕೊಳ್ಳುವದರಿಂದ ಬುದ್ಧಿಯು ಮಾರ್ಪಡುತ್ತಿರುವದು ಹೇಗೆಂದರೆ: ಕೇಳುವಾಗ ಅದು ಶ್ರೋತ್ರವಾಗುವದು. ಮುಟ್ಟುವಾಗ ಸ್ಪರ್ಶೇಂದ್ರಿಯವಾಗುತ್ತದೆ, ಕಾಣುವಾಗ ಅದು ಚಕ್ಷುರಿಂದ್ರಿಯವಾಗುವದು, ಸವಿನೋಡುವಾಗ ರಸನೇಂದ್ರಿಯುವೆನಿಸುವದು, ಮೂಸುವಾಗ ಘ್ರಾಣಾವಯವವಾಗುವದು. ಹೀಗೆ ಬುದ್ಧಿಯು ಬೇರೆಬೇರೆಯ ಮಾರ್ಪಾಡುಗಳನ್ನು ಪಡೆಯುತ್ತಿರುವದು. ಈ ವಿಕಾರಗಳನ್ನು ಇಂದ್ರಿಯಗಳೆಂದು ಕರೆಯುತ್ತಾರೆ. ಅವುಗಳೊಳಗೆ ತಾನು ಕಾಣಿಸಿಕೊಳ್ಳದೆ ಪುರುಷನಿರುವನು, ಬುದ್ಧಿಯು ಸತ್ತ್ವದ ಮೂರು ಭಾವಗಳಲ್ಲಿಯೂ ತೋರುತ್ತಾ ಪುರುಷನನ್ನಾಶ್ರಯಿಸಿಕೊಂಡಿರುತ್ತಿರುವದು.

---

* ಸಂಪುಟ 40; ಸಂಚಿಕೆ 9; ಮೇ 1971

ಹೇಗೆಂದರೆ: ಒಮ್ಮೆ ಸಂತೋಷವನ್ನು ಹೊಂದುತ್ತಿರುವದು, ಇನ್ನೊಮ್ಮೆ ಶೋಕಿಸುತ್ತಿರುವದು; ಮತ್ತೊ ಒಮ್ಮೆ ಸುಖವೂ ಇಲ್ಲದೆ ದುಃಖವೂ ಇಲ್ಲದೆ ಇರುತ್ತಿರುವದು.

ಅಂಥ ಈ ಬುದ್ಧಿಯು– ನದಿಗಳನ್ನು ಪೋಷಿಸುತ್ತಾ ಅವುಗಳೆಲ್ಲಕ್ಕೂ ಹೆಚ್ಚಿನದಾಗಿರುವ ಸಮುದ್ರದಂತೆ– ಭಾವನೆಯ ಅವಸ್ಥೆಯಲ್ಲಿ ಈ ಮೂರು ಭಾವಗಳನ್ನು ಮೀರಿರುತ್ತದೆ. ಅದು ಯಾವಾಗ ಏನನ್ನಾದರೂ ಬಯಸು ವದೋ, ಆಗ ಅದು **ಮನಸ್ಸಾಗುವದು**. ಬುದ್ಧಿಗೆ ಇವುಗಳು ಬೇರೆಬೇರೆಯ ಸ್ಥಾನಗಳೆಂದು ಅರಿಯಬೇಕು. ಸಾಧಕನಾದವನು ಇಂದ್ರಿಯಗಳನ್ನೇ ಪೂರ್ಣವಾಗಿ ಗೆದ್ದುಕೊಳ್ಳಬೇಕು. ಬುದ್ಧಿಯು ಈ ಇಂದ್ರಿಯಗಳೊಡನೆ ಒಂದಾಗಿ ಯಾವಯಾವದನ್ನು ಅನುಸರಿಸುವದೋ, ಅದದರೊಡನೆ ಒಂದಾಗಿ, ಆಯಾ ಪದಾರ್ಥದಲ್ಲಿಯೇ ಭೇದವಿಲ್ಲದೆ ಸೇರಿಕೊಂಡಿರುತ್ತದೆ.

ಯಾವಯಾವ ಭಾವಗಳಿರುತ್ತವೆಯೋ ಅವುಗಳೆಲ್ಲವೂ ಈ ಮೂರರಲ್ಲಿಯೇ ಅಡಕವಾಗಿರುತ್ತವೆ. ಬಂಡಿಯ ಗಾಲಿಯ ಹಾರೆಕೋಲುಗಳು ಹೇಗೆ ಹಳಿಯ ಕಡೆಗೆ ಹೋಗಿ ಸೇರಿಕೊಂಡಿರುವವೋ ಇದರಂತೆ ಎಲ್ಲಾ ಭಾವಗಳೂ ಈ ಮೂರನ್ನು ಸೇರಿಕೊಂಡಿರುತ್ತವೆ. ಬುದ್ಧಿಯನ್ನು ಆಶ್ರಯಿಸಿ ಕೊಂಡಿರುವ ಇಂದ್ರಿಯಗಳು ತಟ್ಟನೆ ವಿಷಯಸಂಬಂಧದಿಂದ ಹೊರಕ್ಕೆ ಬರುತ್ತಿರುವಲ್ಲಿ ಮನಸ್ಸು ದೀಪದಂತೆ ಅವುಗಳನ್ನು ಕಾಣಿಸಿಕೊಡುತ್ತಿರುವದು.

ಇದೆಲ್ಲ ಈ ಸ್ವಭಾವವುಳ್ಳದ್ದು ಎಂದು ಅರಿತುಕೊಂಡವನು ಈ ವಿಷಯದಲ್ಲಿ ಭ್ರಾಂತನಾಗುವದಿಲ್ಲ. ಶೋಕಿಸದೆ ಹರ್ಷಕ್ಕೊಳಗಾಗದೆ ಯಾವಾಗಲೂ ನಿರ್ಮತ್ಸರನಾಗಿರುವನು. ಯಾರು ದುಷ್ಕರ್ಮಿಗಳೋ, ಅಶುದ್ಧಾಂತಃಕರಣವುಳ್ಳವರೋ ಕಾಮಕಾಮಿಗಳಾಗಿರುವರೋ ಅಂಥವರು ಇಂದ್ರಿಯಗಳಿಂದ ಈ ಆತ್ಮನನ್ನು ಕಂಡುಕೊಳ್ಳಲಾರರು. ಆದರೆ ಯಾವಾಗ ಮನುಷ್ಯನು ಮನಸ್ಸಿನ ಮೂಲಕ ಇಂದ್ರಿಯಗಳನ್ನು ಬಿಗಿಹಿಡಿದುಕೊಳ್ಳುವನೋ ಆಗ ಅವನಿಗೆ ದೀಪದ ಬೆಳಕಿನಲ್ಲಿ ಪದಾರ್ಥವು ಕಾಣುವಂತೆ ಆತ್ಮನು ಬೆಳಗಿ ತೋರಿಕೊಳ್ಳುವನು. ಹೇಗೆ ಕತ್ತಲೆಯು ಕಳೆದೊಡನೆ ಬೆಳಕು ಎಲ್ಲಾ ಪ್ರಾಣಿಗಳಿಗೂ ಗೋಚರವಾಗುವದೋ ಹಾಗೆಯೇ ಇದನ್ನರಿಯಬೇಕು. ಹೇಗೆ ನೀರಿನಲ್ಲಿ ಸಂಚರಿಸುವ ಹಕ್ಕಿಯು ನೀರಿನಲ್ಲಿ ಸಂಚರಿಸುತ್ತಿದ್ದರೂ ನೀರಿನ ಅಂಟಿಲ್ಲದೆ ಇರುತ್ತದೆಯೋ, ಹಾಗೆಯೇ ವಿಮುಕ್ತನಾದ

ಯೋಗಿಯಾದವನು ಗುಣಗಳ ದೋಷದಿಂದ ಲಿಪ್ತನಾಗದೆ ಇರುತ್ತಾನೆ. ಇದೇ ರೀತಿಯಲ್ಲಿಯೇ ಪ್ರಜ್ಞಾವಂತನಾದವನು ವಿಷಯಗಳನ್ನನುಭವಿಸಿದರೂ ಎಲ್ಲೆಲ್ಲಿಯೂ ಅಸಕ್ತನಾಗಿರುವದರಿಂದ ವಿಷಯದೋಷಗಳ ಅಂಟಿಲ್ಲದೆ ಇರುತ್ತಾನೆ. ಪೂರ್ವಕೃತ ಕರ್ಮದ ಸಂಸ್ಕಾರವನ್ನು ಪರಿತ್ಯಜಿಸಿ ಯಾವಾಗಲೂ ಆತ್ಮನಲ್ಲಿಯೇ ರತನಾಗಿರುವನು. ಸರ್ವಪ್ರಾಣಿಗಳಿಗೂ ಆತ್ಮನಾಗಿರುವದರಿಂದ ಗುಣಗಳಲ್ಲಿ ಸಂಗವಿಲ್ಲದಿರುವದರಿಂದ ಅವನಿಗೆ ಗುಣಗಳ ಲೇಪವುಂಟಾಗುವದಿಲ್ಲ.

ಆತ್ಮನು ಕೆಲಕೆಲವುವೇಳೆ ಬುದ್ಧಿಯನ್ನೂ ಗುಣಗಳನ್ನೂ ಚಲಿಸುವನು; ಗುಣಗಳೂ ಆತ್ಮನನ್ನು ಅರಿಯವು; ಅವನು ಗುಣಗಳನ್ನು ಯಾವಾಗಲೂ ಅರಿಯುತ್ತಿರುವನು. ಅವನು ಗುಣಗಳ ಸ್ರಷ್ಟೃವೂ ಇದ್ದಂತೆ ಅರಿತುಕೊಳ್ಳುವಾತನೂ ಆಗಿರುತ್ತಾನೆ. ಸೂಕ್ಷ್ಮವಾಗಿರುವ ಸತ್ವಕ್ಷೇತ್ರಜ್ಞರಿಗೆ ಈ ವೈಲಕ್ಷಣ್ಯವಿರುವದು. ಒಂದು ಗುಣಗಳನ್ನು ಕಲ್ಪಿಸಿಕೊಳ್ಳುವದು, ಇನ್ನೊಂದು ಕಲ್ಪಿಸುವದಿಲ್ಲ; ಇವೆರಡೂ ಸ್ವಭಾವದಿಂದಲೇ ಒಂದನ್ನೊಂದು ಕೂಡಿಕೊಂಡಿದ್ದರೂ ಅವರು ಬೇರೆಬೇರೆಯೇ ಆಗಿರುತ್ತಾರೆ. ಮೀನು ನೀರಿಗಿಂತ ಬೇರೆಯಾಗಿರುವಂತೆ, ಗುಂಗುರು ಅತ್ತಿಹಣ್ಣಿನಲ್ಲಿ ಸೇರಿಕೊಂಡಿದ್ದರೂ ಎರಡೂ ಹೇಗೆ ಬೇರೆಬೇರೆಯಾಗಿರುವವೋ, ನೊಸೆಯದಂಟು ಹೇಗೆ ಸೇರಿಕೊಂಡಿದ್ದರೂ ಬೇರೆಬೇರೆಯಾಗಿರುವವೋ ಹಾಗೆಯೇ ಈ ಇಬ್ಬರೂ ಒಬ್ಬರನ್ನೊಬ್ಬರು ಸೇರಿಕೊಂಡಿದ್ದರೂ ಬೇರೆಬೇರೆಯಾಗಿರುವರು.

* * * * *

## 34. ಜ್ಞಾನಸಾಧನ ಮತ್ತು ಜ್ಞಾನಿಯ ಲಕ್ಷಣವೂ ಮಹಿಮೆಯೂ*

**ವ್ಯಾಸರಿಂತೆಂದರು:** ಸತ್ತ್ವವು ಗುಣಗಳನ್ನು ಸೃಷ್ಟಿಸುತ್ತಿರುವದು, ಕ್ಷೇತ್ರಜ್ಞನು ಸ್ವತಂತ್ರನಾಗಿ, ಮಾರ್ಪಡುತ್ತಿರುವ ಗುಣಗಳನ್ನೆಲ್ಲ ಉದಾಸೀನನಂತೆ ನೋಡುತ್ತಾ ಅವಕ್ಕೆ ಅಧಿಷ್ಠಾತೃವಾಗಿರುತ್ತಾನೆ. ಸತ್ತ್ವವು ಸ್ವಭಾವದಿಂದಲೇ ಈ ಗುಣಗಳನ್ನೆಲ್ಲ, ಜೇಡರಹುಳುವು ನೂಲನ್ನು ಹೊರಕ್ಕೆ ಬಿಡುತ್ತಿರುವಂತೆ, ಸೃಷ್ಟಿಸುತ್ತಿರುವುದು.

---

* ಸಂಪುಟ 40; ಸಂಚಿಕೆ 10; ಜೂನ್ 1971

ಈ ಗುಣಗಳು ನಷ್ಟವಾದರೂ ತೊಲಗುವದಿಲ್ಲವೆಂದೂ ಅವುಗಳ ಪ್ರವೃತ್ತಿಯು ಆಗ ಕಾಣುವದಿಲ್ಲವೆಂದೂ ಕೆಲವರೆನ್ನುವರು: ಆಗ ಅವು ತೊಲಗಿಬಿಡುವವು ಎಂದು ಮತ್ತೆ ಕೆಲವರೆನ್ನುತ್ತಿರುವರು. ಈ ಎರಡು ಮತಗಳನ್ನೂ ವಿಚಾರಮಾಡಿ ತನ್ನ ಬುದ್ಧಿಗನುಸಾರವಾಗಿ ನಿಶ್ಚಯಿಸಬೇಕಾಗಿದೆ. ಈ ಪ್ರಕಾರ ದಿಂದಲೇ ಆತ್ಮನು ಗರ್ಭಶಾಯಿಯಾಗುತ್ತಿರುವನು.

ಆದ್ಯಂತಗಳಿಲ್ಲದವನು ಆತ್ಮನು. ಆತನನ್ನು ಅರಿತುಕೊಂಡು ಯಾವಾಗಲೂ ಕ್ರೋಧವನ್ನು ಮಾಡದೆ, ಹೃಷ್ಟನಾಗದೆ, ಮಾತ್ಸರ್ಯರಹಿತನಾಗಿ ವ್ಯವಹರಿಸುತ್ತಿರಬೇಕು. ಈ ರೀತಿಯಲ್ಲಿ ಚಿಂತಾಮಯವಾಗಿರುವ ಬುದ್ಧಿಯೆಂಬ ಗಟ್ಟಿಯಾಗಿರುವ ಅನಿತ್ಯವಾದ ಹೃದಯಗ್ರಂಥಿಯನ್ನು ಕಿತ್ತುಹಾಕಿ ಶೋಕರಹಿತನೂ ಸಂಶಯರಹಿತನೂ ಆಗಿ ಸುಖವಾಗಿರಬೇಕು. ನೆಲದಿಂದ ಜಾರಿ ಪೂರ್ಣಪ್ರವಾಹದ ನದಿಯಲ್ಲಿ ಮುಳುಗಿದ ಅಜ್ಞ ಜನರು ಹೇಗೆ ಸಂಕಟಪಡುವರೋ ಹಾಗೆಯೇ ಈ ಅಜ್ಞಾನಿಜನವು ಕ್ಲೇಶವನ್ನನುಭವಿಸುತ್ತಿರುವದೆಂದು ತಿಳಿ, ಆದರೆ ಗಟ್ಟಿನೆಲದ ಮೇಲೆ ಸಂಚರಿಸುತ್ತಿರುವವನು ತಾನು ಸಂಚರಿಸುತ್ತಿರುವ ನೆಲದ ತತ್ತ್ವವನ್ನು ಅರಿತುಕೊಂಡಿರುವದರಿಂದ ಹೇಗೆ ಕ್ಲೇಶವನ್ನು ಅನುಭವಿಸದೆ ಇರುತ್ತಾನೋ ಹಾಗೆಯೇ ಶುದ್ಧಚೈತನ್ಯಸ್ವರೂಪನಾದ ಆತ್ಮನನ್ನು ಸೇರಿದವನು ಸಂಸಾರದುಃಖವನ್ನು ಅನುಭವಿಸದೆ ಇರುತ್ತಾನೆ.

ಹೀಗೆಂದು ಪ್ರಾಣಿಗಳ ಗತಿಯನ್ನೂ ಆಗತಿಯನ್ನೂ ಚೆನ್ನಾಗಿ ಅರಿತುಕೊಂಡು ಅವುಗಳ ಅವಸ್ಥೆಗಳ ತಾರತಮ್ಯವನ್ನು ಅರಿತುಕೊಂಡಾತನು ಉತ್ತಮವಾದ ಶಾಂತಿಯನ್ನು ಹೊಂದುವನು. ಮನುಷ್ಯನು, ಅದರಲ್ಲಿಯೂ ಬ್ರಾಹ್ಮಣನು ಹುಟ್ಟಿದ್ದಕ್ಕೆ ಸಾರ್ಥಕ್ಯವೆಂದರೆ ಇದೊಂದೇ; ಆತ್ಮಜ್ಞಾನ ಮತ್ತು ಅದನ್ನು ಪಡೆದುಕೊಳ್ಳುವದಕ್ಕೆ ಸಾಕಾದಷ್ಟು ಶಾಂತಿ. ಅಜ್ಞರಿಗೆ ಯಾವದು ಅತ್ಯಂತ ಭಯಕ್ಕೆ ಕಾರಣವಾಗಿರುತ್ತದೆಯೋ ಅದು ಜ್ಞಾನಿಗಳಿಗೆ ಹೆಚ್ಚಿನ ಭಯಕ್ಕೆ ಕಾರಣ ವಾಗಿರುವದಿಲ್ಲ. ಜ್ಞಾನಿಗಳಿಗೆ ಆಗುವ ಸನಾತನಗತಿಗಿಂತ ಹೆಚ್ಚಿನ ಗತಿಯು ಯಾವನೊಬ್ಬನಿಗೂ ದೊರಕಲಾರದು. ಜನರು ಸಂಕಟಪಡುತ್ತಿರುವವರನ್ನು ಕಂಡು ಅದರಲ್ಲಿ ದೋಷದೃಷ್ಟಿಯುಳ್ಳವರಾಗಿರುತ್ತಾರೆ: ಅದನ್ನೇ ನೋಡಿ ನೋಡಿ ಶೋಕಿಸುತ್ತಲೂ ಇರುವರು. ಆದರೆ ಮಾಡಿದ್ದು, ಮಾಡದೆ ಇದ್ದದ್ದು ಇವುಗಳ

ಫಲವೇನೆಂಬುದನ್ನು ಅರಿತಿರುವ ಜಾಣರು ಶೋಕಿಸದೆ ಇರುತ್ತಾರೆ. ಕಂಡೆಯ? ಫಲಾಭಿಸಂಧಿಯಿಲ್ಲದೆ ಯಾವ ಕರ್ಮವನ್ನು ಮಾಡುತ್ತಾನೋ ಅದು ಅವನ ಪೂರ್ವಕರ್ಮವನ್ನು ತೊಲಗಿಸುವದು. ಹಾಗೆ ನಿಷ್ಕಾಮನು ಮಾಡುವ ಕರ್ಮವು ಪ್ರಿಯವನ್ನಾಗಲಿ ಅಪ್ರಿಯವನ್ನಾಗಲಿ ಉಂಟುಮಾಡದೆ ಇರುತ್ತದೆ.

* * * * *

## 35. ಪರಮಶ್ರೇಷ್ಠ ಧರ್ಮ, ಜ್ಞಾನದಿಂದ ಮುಕ್ತಿ*

**ಶುಕನಿಂತೆಂದನು:** ಯಾವ ಧರ್ಮಕ್ಕಿಂತ ಹೆಚ್ಚಿನ ಧರ್ಮವು ಮತ್ತೊಂದಿಲ್ಲವೋ ಯಾವದು ಎಲ್ಲಕ್ಕಿಂತಲೂ ಶ್ರೇಷ್ಠವಾದ ಧರ್ಮವೋ ಅದನ್ನು ತಾವು ದಯವಿಟ್ಟು ನನಗೆ ಹೇಳೋಣಾಗಲಿ!

ಇದಕ್ಕೆ ವ್ಯಾಸರು ಹೇಳಿದ್ದೇನೆಂದರೆ: ಪುರಾತನ ಋಷಿಗಳು ತೋರಿಸಿ ಕೊಟ್ಟಿರುವ ಎಲ್ಲಕ್ಕಿಂತಲೂ ಶ್ರೇಷ್ಠವಾದ ಧರ್ಮವನ್ನು ನಿನಗೆ ತಿಳಿಯಹೇಳುವೆನು. ಚಿತ್ತವಿಟ್ಟು ಕೇಳುವನಾಗು: ಎಲ್ಲಾ ಕಡೆಯಲ್ಲಿಯೂ ಹರಿದಾಡುತ್ತಾ ಮನಸ್ಸನ್ನು ಕಡೆಯುತ್ತಿರುವ ಇಂದ್ರಿಯಗಳನ್ನು – ತಂದೆಯು ಮಕ್ಕಳನ್ನು ಹಿಡಿದು ಸ್ವಾಧೀನದಲ್ಲಿಟ್ಟುಕೊಳ್ಳುವಂತೆ– ಬುದ್ಧಿಯಿಂದ ಬಿಗಿಹಿಡಿದುಕೊಳ್ಳಬೇಕು. ಮನಸ್ಸನ್ನೂ ಇಂದ್ರಿಯಗಳನ್ನೂ ಏಕಾಗ್ರವಾಗಿಟ್ಟುಕೊಳ್ಳವದೇ ಹೆಚ್ಚಿನ ತಪಸ್ಸು; ಅದೇ ಎಲ್ಲಾ ಧರ್ಮಗಳಿಗೂ ಹೆಚ್ಚಿನ ಧರ್ಮವು, ಅದೇ ಪರಮಧರ್ಮವೆನಿಸುವದು. ಮನಸ್ಸನ್ನು ಸೇರಿಸಿಕೊಂಡಿರುವ ಆ ಆರು ಇಂದ್ರಿಯಗಳನ್ನೂ ಜಾಣತನದಿಂದ ಬಿಗಿಹಿಡಿದು ಅನೇಕವಿಷಯಗಳ ಚಿಂತೆಯನ್ನು ಹತ್ತಿಸಿಕೊಳ್ಳದೆ ತನ್ನಲ್ಲಿ ತಾನು ತೃಪ್ತನಾಗಿರುವಂತೆ ಇರಬೇಕು. ವಿಷಯಗಳಿಂದ ಹಿಂತಿರುಗಿ ಯಾವಾಗ ಇಂದ್ರಿಯಗಳು ತಮ್ಮತಮ್ಮ ಸ್ಥಾನಗಳಲ್ಲಿ ನಿಂತುಕೊಳ್ಳುವವೋ ಆಗ ನೀನು ಶಾಶ್ವತನಾದ ಪರಮಾತ್ಮನನ್ನು ನಿನ್ನ ಆತ್ಮನಿಂದಲೇ ಕಂಡುಕೊಳ್ಳುವೆ.

ಸರ್ವಾತ್ಮನಾದ ಆ ಪರಮಾತ್ಮನು ಹೊಗೆಯಿಲ್ಲದ ಬೆಂಕಿಯಂತೆ ಹೊಳೆಯುತ್ತಿರು

---

* ಸಂಪುಟ 40; ಸಂಚಿಕೆ 11; ಜುಲೈ 1971

ವದನ್ನು ವಿವೇಕಿಗಳೂ ಮಹಾತ್ಮರೂ ಆದ ಬ್ರಾಹ್ಮಣರು ಕಂಡುಕೊಳ್ಳುವರು. ಹೇಗೆ ಹೂಹಣ್ಣುಗಳಿಂದೊಡಗೂಡಿದ ಬಹಳ ಕೊಂಬೆಗಳುಳ್ಳ ದೊಡ್ಡ ಮರವು ತನ್ನ ಹೂವೆಲ್ಲಿದೆ ಹಣ್ಣೆಲ್ಲಿದೆ? ಎಂಬುದನ್ನು ಅರಿಯದೆ ಇರುವದೋ ಹಾಗೆಯೇ ಜೀವಾತ್ಮನು 'ಎಲ್ಲಿಗೆ ಹೋಗುವೆನು, ಎಲ್ಲಿಂದ ಬಂದಿರುವೆನು?'– ಎಂಬುದನ್ನು ಅರಿಯದೆ ಇರುತ್ತಾನೆ. ಅವನಿಗಿಂತ ಬೇರೆ ಯಾಗಿರುವ ಅಂತರಾತ್ಮನೊಬ್ಬನು ಇದಾನೆ. ಅವನು ಎಲ್ಲವನ್ನೂ ಅರಿಯುತ್ತಿರು ವನು. ಮನುಷ್ಯನು ಆತ್ಮನನ್ನು ತನ್ನಲ್ಲಿಯೇ ಬೆಳಬೆಳಗುವ ಜ್ಞಾನದೀಪದಿಂದ ಅರಿತುಕೊಳ್ಳುತ್ತಾನೆ. ಅದರಂತೆ ನೀನೂ ನಿನ್ನಿಂದಲೇ ಆ ಆತ್ಮನನ್ನು ಕಂಡುಕೊಂಡು ಸರ್ವಜ್ಞನು ಅಮನಸ್ಕನೂ ಆಗು!

ಈ ಸಂಸಾರನದಿಯು ಲೋಕದಲ್ಲಿ ಎಲ್ಲಾ ಕಡೆಯಲ್ಲಿಯೂ ಹರಿಯುತ್ತಿದೆ. ಇದರಲ್ಲಿ ಪಂಚೇಂದ್ರಿಯಗಳೆಂಬ ಮೊಸಳೆಗಳಿವೆ. ಮನಸ್ಸಿನ ಸಂಕಲ್ಪವೇ ಇದಕ್ಕೆ ದಡ, ಇದನ್ನು ಲೋಭಮೋಹಗಳೆಂಬ ಹುಲ್ಲು ಮುಚ್ಚುಕೊಂಡಿದೆ. ಕಾಮಕ್ರೋಧಗಳೆಂಬ ಸರ್ಪಗಳು ಇಲ್ಲಿ ಹರಿದಾಡುತ್ತಿವೆ. ಸತ್ಯವೆಂಬುದು ಇದರ ಘಟ್ಟವು. ಅನೃತದಿಂದ ಇದು ಕ್ಷುಬ್ಧವಾಗುತ್ತಿರುವದು, ಕ್ರೋಧವು ಇದರಲ್ಲಿರುವ ಕೆಸರು. ಇಂಥದ್ದೀ ಶ್ರೇಷ್ಠವಾದ ನದಿಯು! ಇದು ಎಲ್ಲಿ ಹುಟ್ಟಿತೆಂಬುದು ತಿಳಿಯುವಂತಿಲ್ಲ. ವೇಗವಾಗಿ ಹರಿಯುತ್ತಿರುವದು; ಸಂಸ್ಕಾರವಿಲ್ಲದ ಮನಸ್ಸಿನವರು ಇದನ್ನು ದಾಟಲಾರರು. ಕಾಮವೆಂಬ ಮೊಸಳೆಗಳಿಂದ ತುಂಬಿರುವ ಈ ನದಿಯನ್ನು ಬುದ್ಧಿಯ ಸಾಮರ್ಥ್ಯದಿಂದ ದಾಟುವವನಾಗು. ಇದು ಸಂಸಾರವೆಂಬ ಸಾಗರಕ್ಕೆ ಹೋಗುತ್ತಿರುವದು. ಇದರಲ್ಲಿ ವಾಸನೆಗಳೆಂಬ ಗುಂಡಿಗಳಿರುವದರಿಂದ ಇದು ದುಸ್ತರವಾಗಿದೆ. ಅವರವರ ಕರ್ಮದಿಂದ ಹುಟ್ಟಿದ್ದು ಜಿಹ್ವೆಗಳೆಂಬ ಸುಳಿಗಳಿಂದ ಕೂಡಿರುವಕಾರಣ ಆಚೆಗೆ ಹೋಗುವದು ಕಠಿನವಾಗಿರುತ್ತದೆ.

ಈ ನದಿಯನ್ನು ಸಂಸ್ಕೃತಪ್ರಜ್ಞರಾಗಿ ಧೃತಿಯುಕ್ತರಾದ ಜ್ಞಾನಿಗಳು ದಾಟುವರು. ಅದನ್ನು ದಾಟಿದರೆ ಸರ್ವಬಂಧಗಳಿಂದಲೂ ಮುಕ್ತನಾಗಿ ಚಿದಾತ್ಮನಾಗಿ ಪವಿತ್ರನಾಗುವನು. ಉತ್ತಮಬುದ್ಧಿಯನ್ನು ಆಶ್ರಯಿಸಿಕೊಂಡು ಬ್ರಹ್ಮಭಾವವನ್ನು ಪಡೆಯುವೆ. ಸರ್ವಸಂಸಾರವನ್ನೂ ದಾಟಿ ಪ್ರಸನ್ನಾತ್ಮನಾಗಿ ನಿಷ್ಪಾಪನಾಗುವೆ. ಬೆಟ್ಟದ ಮೇಲುಗಡೆಯಿರುವಾತನು ಕೆಳಗಿನ ನೆಲದಮೇಲಿರುವವರನ್ನು ಕಾಣುವಂತೆ,

ಕ್ರೋಧಹರ್ಷಗಳಿಲ್ಲದೆ ಅಕ್ರೂರಾಂತಃಕರಣನಾಗಿ ನೋಡುತ್ತಿರು. ಆಗ ಸಕಲಪ್ರಾಣಿಗಳ ಉತ್ಪತ್ತಿಪ್ರಲಯಗಳನ್ನೂ ಕಂಡುಕೊಳ್ಳುವೆ, ಇಂಥವನೇ ಸರ್ವಭೂತಗಳಲ್ಲಿಯೂ ಶ್ರೇಷ್ಠನೆಂದು ಬಲ್ಲವರು ತಿಳಿಯುತ್ತಾರೆ.

ಧರ್ಮಾತ್ಮರಲ್ಲಿ ಶ್ರೇಷ್ಠರಾದ ತತ್ತ್ವದರ್ಶಿಗಳಾದ ಮುನಿಗಳೂ ಇದನ್ನೇ ಶ್ರೇಷ್ಠಧರ್ಮವೆನ್ನುವರು. ಸರ್ವವ್ಯಾಪಿಯಾದ ಆತ್ಮನ ಜ್ಞಾನವಿದು, ಪುತ್ರನಾದ ನಿನಗೆ ನಾನು ಹೇಳಿರುವ ಇದನ್ನು, ಪರಿಶುದ್ಧನೂ ಹಿತನೂ ಅನುಸರಿಸುವ ಭಕ್ತನೂ ಆದವನಿಗೆ ಹೇಳಬೇಕು. ಈ ಗುಹ್ಯವಾದ ಆತ್ಮಜ್ಞಾನವು ಗುಟ್ಟುಗಳಲ್ಲೆಲ್ಲ ಹೆಚ್ಚಿನ ಗುಟ್ಟು; ನಾನು ಹೇಳಿರುವ ಈ ಜ್ಞಾನವು ಅನುಭವಗಮ್ಯವು. ಬ್ರಹ್ಮವು ಹೆಣ್ಣಲ್ಲ, ಗಂಡಲ್ಲ, ನಪುಂಸಕವೂ ಅಲ್ಲ; ಇದಕ್ಕೆ ದುಃಖವಿಲ್ಲ, ಸುಖವಿಲ್ಲ, ಭೂತ ಭವಿಷ್ಯದ್ವರ್ತಮಾನರೂಪವಾದದ್ದು, ಇದನ್ನು ಅರಿತ ಗಂಡಸಾಗಲಿ ಹೆಂಗಸಾಗಲಿ ಪುನರ್ಜನ್ಮವನ್ನು ಪಡೆಯುವದಿಲ್ಲ. ಈ ಧರ್ಮವನ್ನು ಅಪುನರ್ಜನ್ಮ ಪ್ರಾಪ್ತಿಗಾಗಿಯೇ ಹೇಳಿರುತ್ತದೆ. ಪುತ್ರನೆ, ಎಲ್ಲಾ ಮತಗಳ ಸಾರವನ್ನೂ ಇದ್ದದ್ದು ಇದ್ದಂತೆ ನಿನಗೆ ಹೇಳಿರುತ್ತೇನೆ. ಪ್ರೇಮದಿಂದ ಗುಣವಂತನಾದ ದಮಾನ್ವಿತನಾದ ಪುತ್ರನು ಕೇಳಿದರೆ, ನಾನು ನಿನಗೆ ಹೇಳಿರುವ ಈ ಜ್ಞಾನವನ್ನು ಉಪದೇಶಮಾಡಬೇಕು.

* * * * *

## 36. ಬ್ರಹ್ಮಜ್ಞಾನಿಯ ಲಕ್ಷಣ*

**ವ್ಯಾಸರಿಂತೆಂದರು:** ಪರಿಮಳವಸ್ತುಗಳನ್ನೂ ರುಚಿರುಚಿಯಾದ ಆಹಾರಗಳನ್ನೂ ಬಯಸಿ ಅವುಗಳ ಬೆನ್ನುಹತ್ತಬಾರದು. ಸುಖಕ್ಕಾಗಲಿ ಆಭರಣಗಳಿಂದ ಮೈಯನ್ನು ಅಲಂಕರಿಸಿಕೊಳ್ಳುವದಕ್ಕಾಗಲಿ ಹೋಗಬಾರದು; ಮತ್ತೊಬ್ಬರಿಗೆ ಮಾನ್ಯನೆನಿಸು ವದಕ್ಕಾಗಲಿ, ಮತ್ತೊಬ್ಬರಿಂದ ಹೊಗಳಿಸಿ ಕೊಳ್ಳುವದಕ್ಕಾಗಲಿ, ಹೆಸರುವಾಸಿಯಾಗುವದ ಕ್ಕಾಗಲಿ ಪ್ರಯತ್ನವನ್ನು ಮಾಡಬಾರದು. ಇದೇ ನಿಜವಾದ ಬ್ರಾಹ್ಮಣರ ಆಚಾರವು.

ಗುರುಶುಶ್ರೂಷೆಯಲ್ಲಿ ರತನಾಗಿದ್ದು ಬ್ರಹ್ಮಚರ್ಯದಿಂದ ಸರ್ವವೇದ

---

* ಸಂಪುಟ 40; ಸಂಚಿಕೆ 12; ಆಗಸ್ಟ್ 1971

ಗಳನ್ನೂ ಅಧ್ಯಯನಮಾಡಿ ಋಕ್ಕುಗಳನ್ನೂ ಯಜುಸ್ಸುಗಳನ್ನೂ ಸಾಮಗಳನ್ನೂ ಅಳವಡಿಸಿಕೊಂಡಿದ್ದರೂ ಅಷ್ಟರಿಂದಲೇ ಅವನು ದ್ವಿಜನೆನಿಸಲಾರನು,[1] ಸರ್ವ ಪ್ರಾಣಿಗಳ ನೆಂಟನಂತೆ ಇದ್ದುಕೊಂಡು ಎಲ್ಲವನ್ನೂ ಬಲ್ಲವನಾಗಿ ಸಕಲವೇದಗಳನ್ನೂ ಬಲ್ಲವನಾಗಿ ಕಾಮವಿಲ್ಲದೆ ಎಂದಿಗೂ ಸಾಯದೆ ಇರುವನಲ್ಲ, ಅವನೂ ಅಷ್ಟರಿಂದಲೇ ದ್ವಿಜನಾಗಲಾರನು. ಬಹುವಿಧವಾದ ಇಷ್ಟಿಗಳನ್ನು ಮಾಡಿ ತಕ್ಕಷ್ಟು ದಕ್ಷಿಣೆಗಳಿಂದ ಕೂಡಿದ ಕ್ರತುಗಳನ್ನು ಮಾಡಿದರೂ ವಿಧಾನವಿಲ್ಲದೆ ಇದ್ದರೆ ಬ್ರಾಹ್ಮಣ್ಯವನ್ನು ಹೇಗೂ ಪಡೆಯಲೇಆರನು.

ಯಾವಾಗ ಇವನು ಯಾರಿಗೂ ಅಂಜದೇ ಇರುವನೋ, ಯಾರೂ ಇವನಿಂದ ಅಂಜದೆ ಇರುವರೋ, ಯಾವಾಗ ಇಚ್ಛೆಯಿಲ್ಲದೆ ದ್ವೇಷವಿಲ್ಲದೆ ಇರುವನೊ ಆಗ ಬ್ರಹ್ಮವನ್ನು ಸೇರಿಕೊಳ್ಳುತ್ತಾನೆ. ಯಾವ ಪ್ರಾಣಿಗಳಲ್ಲಿಯೂ ಕೆಟ್ಟಭಾವನೆಯನ್ನು ಮನೋವಾಕ್ಕಾಯಗಳಿಂದ ಯಾವಾಗಲೂ ಮಾಡದೆ ಇರುವನೋ, ಆಗ ಬ್ರಹ್ಮವನ್ನು ಸೇರಿಕೊಳ್ಳುತ್ತಾನೆ. ಕಾಮವೊಂದೇ ಜಗತ್ತಿನಲ್ಲಿ ಬಂಧಕವು; ಇಲ್ಲಿ ಮತ್ತೆ ಯಾವದೊಂದೂ ಬಂಧಕವಲ್ಲ. ಏಕೆಂದರೆ ಕಾಮಬಂಧನದಿಂದ ಮುಕ್ತನಾದವನು ಬ್ರಹ್ಮಭಾವಕ್ಕೆ ತಕ್ಕವನಾಗುತ್ತಾನೆ. ಕಾಮದಿಂದ ಮುಕ್ತನಾಗಿರುವ ವಿವೇಕಿಯಾದರೊ, ಹೊಗೆಯಂತೆ ಸುತ್ತಿಕೊಂಡಿರುವ ಮೋಡದಿಂದ ಬಿಡುಗಡೆಯಾಗಿರುವ ಚಂದ್ರನಂತೆ ಯಾವ ಕಲ್ಮಷವೂ ಇಲ್ಲದೆ ಧೈರ್ಯದಿಂದ ಕಾಲವನ್ನು ನಿರೀಕ್ಷಿಸಿಕೊಂಡು ಇರುತ್ತಿರುವನು. ಎಲ್ಲಾ ಕಡೆಯಿಂದಲೂ ನದಿಗಳು ಬಂದು ನೀರುತುಂಬಿಕೊಳ್ಳುತ್ತಿದ್ದರೂ ಅಲುಗಾಡದೆ ನೆಲೆನಿಂತಿರುವ ಸಮುದ್ರದಂತೆ– ಕಾಮವಸ್ತುಗಳೆಲ್ಲವೂ ಯಾವಾತನನ್ನು ಬಂದು ಸೇರುತ್ತಿರುವವೋ ಅವನೇ ಶಾಂತಿಯನ್ನು ಹೊಂದುವನೇ ಹೊರತು ಕಾಮಭೋಗ ಗಳನ್ನು ಬಯಸುತ್ತಿರುವವನಲ್ಲ, ಅವನನ್ನು ಕಾಮಗಳು ಬಯಸುತ್ತಿರುವವು, ಆದರೆ ಅವನು ಕಾಮಗಳನ್ನು ಬಯಸುತ್ತಿರುವದಿಲ್ಲ. ಆ ದೇಹಿಯು ಕಾಮವನ್ನು ಬಿಟ್ಟು ಸ್ವರ್ಗವನ್ನು ಸೇರುವನು.

ವೇದದ ಸಾರವು ಸತ್ಯವು, ಸತ್ಯದ ಸಾರವು ದಮವು, ದಮದ ಸಾರವು

---

1 'ಅವನು ಬ್ರಾಹ್ಮಣನಲ್ಲವೆಂದಲ್ಲ, ಬ್ರಾಹ್ಮಣನೇ' ಎಂದೂ ಈ ಎರಡು ಶ್ಲೋಕಗಳಿಗೆ ಅರ್ಥವನ್ನು ಮಾಡುವದಕ್ಕೆ ಬರುವಂತಿದೆ.

ದಾನವು, ದಾನದ ಸಾರವು ತಪಸ್ಸು. ತಪಸ್ಸಿನ ಸಾರವು ತ್ಯಾಗವು. ತ್ಯಾಗದ ಸಾರವು ಸುಖವು, ಸುಖದ ಸಾರವು ಸ್ವರ್ಗವು, ಸ್ವರ್ಗದ ಸಾರವು ಶಮವು. ಮನಸ್ಸಿನಲ್ಲಿರುವ ಶೋಕವನ್ನು ತೃಷ್ಣೆಯೊಡನೆ ಸುಡಬೇಕು, ಸಂತೋಷದಿಂದಿರುವ ಸತ್ತ್ವಗುಣವನ್ನು ಇಚ್ಛಿಸುತ್ತಿರಬೇಕು; ಇದೇ ಶಾಂತಿಯ ಉತ್ತಮವಾದ ಲಕ್ಷಣವು. ಶೋಕವಿಲ್ಲದಿರುವಿಕೆ, ಮಮತಾರಹಿತನಾಗಿರುವಿಕೆ, ಶಾಂತನಾಗಿರುವದು, ಪ್ರಸನ್ನಾಂತಃಕರಣವುಳ್ಳನಾಗಿರುವದು, ಮಾತ್ಸರ್ಯವಿಲ್ಲದವನಾಗಿರುವಿಕೆ ಮತ್ತು ಸಂತೋಷ- ಈ ಆರು ಲಕ್ಷಣಗಳುಳ್ಳಾತನು ಸಮಗ್ರಸಾಧನಗಳುಳ್ಳವನಾಗಿ ಪುರುಷಾರ್ಥವನ್ನೈದುವನು. ಈ ಆರು ಸತ್ತ್ವಗುಣಗಳಿಂದೊಡಗೂಡಿ ಅರಿತು ಕೊಂಡದ್ದನ್ನು ಮೂರು ಉಪಾಯಗಳಿಂದ ಯಾರು ಅರಿತುಕೊಳ್ಳುವರೋ ಅವರು, ಆತ್ಮನು ಇಲ್ಲಿಂದ ಹೋದಮೇಲೂ ಇರುವ ಸ್ಥಿತಿಯನ್ನು ಅರಿತುಕೊಳ್ಳುವರು. ಅದನ್ನೇ ಗುಣವೆನ್ನುವರು.

ಕೃತಕವಲ್ಲದ, ತನಗೆರಡನೆಯದಿಲ್ಲದ ಸ್ವಾಭಾವಿಕವಾದ ಸಂಸ್ಕಾರರಹಿತ ವಾದ ಸುಕೃತವೆನ್ನಿಸಿಕೊಂಡಿರುವ ಅಧ್ಯಾತ್ಮವನ್ನು ಪಡೆದುಕೊಂಡಾತನು ಅಕ್ಷಯವಾದ ಸುಖವನ್ನು ಪಡೆದುಕೊಳ್ಳುವನು. ಮನಸ್ಸನ್ನು ಎಲ್ಲಾ ಕಡೆಯಿಂದಲೂ ವೃತ್ತಿರಹಿತವಾಗಿ ಮಾಡಿಕೊಂಡು ನೆಲೆನಿಲ್ಲಿಸಿಕೊಂಡಾಗ ಯಾವ ತೃಪ್ತಿಯನ್ನು ಹೊಂದುವನೋ ಅದು ಆತ್ಮನಿಗಿಂತ ಬೇರೆ ಏತರಿಂದಲೂ ದೊರಕಲಾರದು. ಭೋಜನವಿಲ್ಲದಿದ್ದರೂ ಯಾವದರಿಂದ ತೃಪ್ತನಾಗಿರುವನೋ, ವಿತ್ತವಿಲ್ಲದಿದ್ದರೂ ಯಾವದರಿಂದ ತೃಪ್ತನಾಗಿರುವನೋ ಸ್ನೇಹರಹಿತನಾಗಿದ್ದರೂ ಯಾವದರಿಂದ ಬಲವನ್ನು ತಾಳಿರುವನೋ- ಆ ಪರತತ್ತ್ವವನ್ನು ಅರಿತವನೇ ವೇದವಿದನು. ತನ್ನ ಇಂದ್ರಿಯದ್ವಾರಗಳನ್ನೆಲ್ಲ ಮುಚ್ಚಿಟ್ಟುಕೊಂಡು ತತ್ತ್ವಚಿಂತನೆಯಲ್ಲಿಯೇ ಯಾವನಿರುವನೋ ಅವನೇ 'ಆತ್ಮರತಿ'ಯೆನಿಸುವನು. ಯಾವನು ಪರತತ್ತ್ವದಲ್ಲಿಯೇ ಸಮಾಹಿತಚಿತ್ತನಾಗಿ ಕಾಮಗಳನ್ನೆಲ್ಲ ನಾಶಪಡಿಸಿಕೊಂಡಿರುತ್ತಿರುವನೋ ಅವನ ಬಳಿಗೆ ಚಂದ್ರನ ಶರೀರಕ್ಕೆ ಹೇಗೋ ಹಾಗೆ ಎಲ್ಲಾ ಕಡೆಯಿಂದಲೂ ಸುಖವು ಬಂದು ಕೂಡಿಕೊಳ್ಳುತ್ತಿರುವದು. ಎಲ್ಲಾ ಭೂತಗಳನ್ನೂ ಭೌತಿಕಗುಣಗಳನ್ನೂ ತ್ಯಜಿಸುತ್ತಿರುವ ಮುನಿಯ ದುಃಖವು – ಸೂರ್ಯನಿಂದ ಕತ್ತಲು ತೊಲಗುವಂತೆ- ಅನಾಯಾಸವಾಗಿ ತೊಲಗುವದು. ಕರ್ಮಗಳನ್ನು ಮೀರಿ ಗುಣಗಳನ್ನೂ ಮೀರಿರುವ,

ವಿಷಯಗಳ ಲೇಪವಿಲ್ಲದೆ ಇರುವ ಬ್ರಾಹ್ಮಣನನ್ನು ಜರಾಮೃತ್ಯುಗಳು ಮುಟ್ಟಲಾರವು. ಆತನು ಯಾವಾಗ ಎಲ್ಲಾ ಬಂಧಗಳಿಂದಲೂ ಮುಕ್ತನಾಗಿ ಸಮತೆಯಿಂದ ಇರುತ್ತಿರುವನೋ ಆಗ ಇಂದ್ರಿಯುಗಳನ್ನೂ ಇಂದ್ರಿಯಾರ್ಥಗಳನ್ನೂ ಶರೀರದಲ್ಲಿದ್ದುಕೊಂಡೇ ಮೀರಿರುತ್ತಾನೆ.

ಪರಮಕಾರಣವನ್ನು ಸೇರಿ ಕಾರ್ಯತತ್ತ್ವವನ್ನು ಮೀರಿರುವಾತನು ಪರಮಪದವನ್ನೇ ಪಡೆದುಕೊಂಡಿರುವದರಿಂದ ಅವನಿಗೆ ಪುನರಾವೃತ್ತಿಯೇ ಇರುವದಿಲ್ಲ.

* * * * *

## 37. ಪಂಚಭೂತಗಳ ಕಾರ್ಯ*

**ವ್ಯಾಸರಿಂತೆಂದರು:** ಅರ್ಥ ಮತ್ತು ಧರ್ಮ ಇವುಗಳನ್ನು ಅನುಷ್ಠಾನಮಾಡಿ, ದ್ವಂದ್ವಗಳನ್ನು ಸಹಿಸಿಕೊಂಡಬಳಿಕ ಮೋಕ್ಷತತ್ತ್ವವನ್ನು ಅರಿತುಕೊಳ್ಳಬೇಕೆಂದು ಬಯಸುವಾತನಿಗೆ ಸದ್ಗುರುವಿನ ಗುಣಗಳುಳ್ಳ ಗುರುವು ಮೊದಲು ಇದನ್ನು ಬೋಧಿಸಬೇಕು.

ಆಕಾಶ, ವಾಯು, ಅಗ್ನಿ, ಅಪ್ಪು ಮತ್ತು ಪೃಥಿವಿ– ಎಂಬ ಐದು ಭೂತಗಳು, ಭಾವಪದಾರ್ಥಗಳು, ಅಭಾವ, ಕಾಲ– ಇವೆಲ್ಲವೂ ಪಂಚಭೂತ ಗಳಿಂದಾದ ಶರೀರಗಳಲ್ಲಿರುತ್ತವೆ. ಸರ್ವಾಂತರವಾಗಿರುವ ಅವಕಾಶಪ್ರದವಾದದ್ದು ಆಕಾಶವು. ಶ್ರೋತ್ರೇಂದ್ರಿಯವು ಆ ಆಕಾಶದ ವಿಕಾರವಾಗಿರುತ್ತದೆ. ಅದಕ್ಕೆ ಶಬ್ದವು ಗುಣವು– ಎಂಬುದನ್ನು ಶರೀರತತ್ತ್ವಶಾಸ್ತ್ರಜ್ಞನಾದವನು ಅರಿತುಕೊಳ್ಳಬೇಕು. ಚಲಿಸುವದು ವಾಯುವಿನ ಕರ್ಮವು; ಪ್ರಾಣ, ಅಪಾನ– ಇವುಗಳು ವಿಕಾರಗಳು. ತ್ವಗಿಂದ್ರಿಯವು ಅದರ ವಿಕಾರವು, ಮುಟ್ಟಿ ಅರಿಯವದು– ಅದರ ವಿಷಯವು. ಸುಡುವದು, ಪಕ್ವವಾಗಿಮಾಡುವದು, ಬೆಳಗಿತೋರಿಸುವದು ಇವು ಅಗ್ನಿಯ ಕಾರ್ಯವು. ನೇತ್ರೇಂದ್ರಿಯವು ಅದರ ವಿಕಾರವು. ಕೆಂಪು, ಬಿಳುಪು, ಕಪ್ಪು ಎಂಬ ರೂಪವು ಅದಕ್ಕೆ ವಿಷಯವು. ಅಪ್ಪು ನೆನೆಯಿಸುವದು, ಸೂಕ್ಷ್ಮವಾಗಿರುವದು, ಜಿಡ್ಡಾಗಿರುವದು–

* ಸಂಪುಟ 41; ಸಂಚಿಕೆ 1; ಸೆಪ್ಟೆಂಬರ್ 1971

ಈ ಸ್ವಭಾವವುಳ್ಳದ್ದು. ರಕ್ತ, ಮಜ್ಜೆ, ಅಂಟಾಗಿರುವ ಉಳಿದ ಮಿಕ್ಕಭಾಗ– ಇವೆಲ್ಲ ಅದರ ವಿಕಾರಗಳು. ನಾಲಗೆಯೂ ಅದರಲ್ಲಿರುವ ರಸನೇಂದ್ರಿಯವೂ ರುಚಿಯೂ ಅದರ ವಿಕಾರಗಳು. ಗಟ್ಟಿಯಾಗಿರುವ ಶರೀರಭಾಗವು ಪೃಥ್ವಿಯಿಂದಾದದ್ದು. ಎಲುಬು, ಹಲ್ಲು, ಉಗುರು– ಇವೆಲ್ಲವೂ ಪೃಥ್ವಿಯ ಅಂಶಗಳೇ. ಗಡ್ಡಮೀಸೆಗಳು, ಮೈಕೂದಲು, ತಲೆಗೂದಲು, ನಾಡಿಗಳು, ನರಗಳು, ಚರ್ಮ– ಇವೆಲ್ಲ ಪೃಥ್ವಿಯ ವಿಕಾರಗಳೇ. ನಾಸಿಕವೆಂಬ ಹೆಸರಿನ ಮೂಸುವ ಇಂದ್ರಿಯವು ಪಾರ್ಥಿವೇಂದ್ರಿಯ, ಗಂಧವೇ ಅದಕ್ಕೆ ವಿಷಯ. ಈ ಭೂತಗಳಲ್ಲಿ ಹಿಂದುಹಿಂದಿನ ಭೂತದ ಗುಣವು ಮುಂದೆಮುಂದೆ ಹೇಳಿದ ಭೂತದಲ್ಲಿರುತ್ತದೆ. ಈ ಐದು ಭೂತಗಳಿಂದಾದದ್ದೇ ಭೂತಗಳ ಕಾರ್ಯಕರಣಸಂಘಾತವು. ಮನಸ್ಸು ಇವಕ್ಕೆ ಒಂಬತ್ತನೆಯದು, ಬುದ್ಧಿಯು ಹತ್ತನೆಯದು ಎನಿಸಿರುತ್ತದೆ. ಅವಿನಾಶಿಯಾದ ಆತ್ಮನೇ ಹನ್ನೊಂದನೆಯವನು, ಬುದ್ಧಿಯು ನಿಶ್ಚಯಾತ್ಮಕವಾಗಿರುತ್ತದೆ; ಮನಸ್ಸು ವಿಕಲ್ಪಾತ್ಮಕವಾಗಿರುತ್ತದೆ. ಶರೀರದಲ್ಲಿ ಆಗುತ್ತಿರುವ ಕರ್ಮವನ್ನು ಮಾಡುವನೆಂಬುದ ರಿಂದ ಕಲ್ಪಿಸುವ ಜೀವನೇ ಕ್ಷೇತ್ರಜ್ಞನೆಂಬ ಹೆಸರುಳ್ಳವನು. ಈ ಕಾಲಾತ್ಮಕವಾದ ಜಗತ್ತೆಲ್ಲವೂ ಅವನಲ್ಲಿ ಅನುಗತವಾಗಿರುವದೆಂಬುದನ್ನು ಯಾವಾತನು ಅರಿತುಕೊಳ್ಳುವನೋ ಅವನು ಮೋಹವನ್ನು ಹೊಂದುವದಿಲ್ಲ.

* * * * *

## 38. ಪರಬ್ರಹ್ಮಾನುದರ್ಶನ*

ಶರೀರದಿಂದ ಮುಕ್ತನಾಗಿ ಸೂಕ್ಷ್ಮನಾಗಿರುವ ಶರೀರಿಯನ್ನು ಶಾಸ್ತ್ರಜ್ಞರಾದವರು ಶಾಸ್ತ್ರೋಕ್ತವಾದ ಕರ್ಮಗಳಿಂದ ಕಂಡುಕೊಳ್ಳುತ್ತಾರೆ. ಹೇಗೆ ಸೂರ್ಯನ ಕಿರಣಗಳೂ ಜೊತೆಯಲ್ಲಿಯೇ ಇದ್ದುಕೊಂಡು ಸಂಚರಿಸುತ್ತಾ ಎಲ್ಲೆಲ್ಲಿಯೂ ದೃಷ್ಟಿಗೋಚರ ವಾಗುತ್ತಿರುವವೋ ಹಾಗೆಯೇ ದೇಹಮುಕ್ತವಾದ ಅತಿಮಾನುಷಪ್ರಾಣಿಗಳೂ ಲೋಕಗಳಲ್ಲಿ ಸಂಚರಿಸುತ್ತಿರುವವು. ಸೂರ್ಯನ ಬಿಸಿಲು ಹೇಗೆ ಬೇರೆಬೇರೆಯ ಜಲಾಶಯಗಳಲ್ಲಿ ಪ್ರತಿಬಿಂಬವಾಗಿ ಕಾಣಬರುತ್ತಿರುವದೋ ಹಾಗೆಯೇ ಶಾಸ್ತ್ರಜ್ಞನೂ

---

* ಸಂಪುಟ 41; ಸಂಚಿಕೆ 2; ಅಕ್ಟೋಬರ್ 1971

ಸತ್ತ್ವಯುಕ್ತವಾದ ಪ್ರಾಣಿಗಳಲ್ಲಿ ಜೀವಪ್ರತಿಬಿಂಬವನ್ನು ಕಾಣುವನು. ದೇಹಗಳ ಸಂಬಂಧವಿಲ್ಲದ ಆ ಸತ್ತ್ವಗಳನ್ನು ಇಂದ್ರಿಯಸಂಯಮವುಳ್ಳ ಸತ್ತ್ವಜ್ಞರು ತಮ್ಮ ತಮ್ಮ ಸತ್ತ್ವದಿಂದಲೇ ಕಂಡುಕೊಳ್ಳುವರು.

ಮನಸ್ಸಿನ ಚಿಂತೆಯಿಂದುಂಟಾದ, ಕರ್ಮಜನ್ಯವಾದ, ರಜಸ್ಸನ್ನು ಪರಿತ್ಯಜಿಸಿರುವ, ಪ್ರಕೃತಿತಾದಾತ್ಮ್ಯವನ್ನು ಬಿಡಿಸಿಕೊಂಡಿರುವ ಯೋಗಯುಕ್ತರಾದ ಪುರುಷರಿಗೆ ಯಾವಾಗಲೂ ಸತ್ತ್ವಾತ್ಮನಾದ ಜೀವನು ವಶದಲ್ಲಿರುವನು. ಅವರಿಗೆ ನಿತ್ಯನಾದ ಭೂತಾತ್ಮನು (ಮಹತ್ತತ್ತ್ವ, ಅಹಂಕಾರ ಮತ್ತು ಪಂಚಭೂತಗಳು– ಎಂಬ) ಏಳು ಸೂಕ್ಷ್ಮಗುಣಗಳಿಂದ ಕೂಡಿ ಅಜರಾಮರನಾಗಿ ನಿತ್ಯವೂ ವ್ಯವಹರಿಸುತ್ತಾ ಇರುತ್ತಿರುವನು.

ಮನೋಬುದ್ಧಿಗಳಿಗೆ ವಶನಾಗಿರುವವನು ತನ್ನ ದೇಹವನ್ನು ಮತ್ತು ಮತ್ತೊಬ್ಬರ ದೇಹವನ್ನು ಅರಿಯುತ್ತಾ ಸ್ವಪ್ನಗಳಲ್ಲಿಯೂ ಸುಖದುಃಖಗಳನ್ನು ಅನುಭವಿಸು ತ್ತಿರುವನು. ಅಲ್ಲಿಯೂ ಅವನಿಗೆ ದುಃಖವಾಗುತ್ತಿರುವದು, ಅಲ್ಲಿಯೂ ಅವನಿಗೆ ಸುಖವಾಗುತ್ತಿರುವದು. ಅಲ್ಲಿಯೂ ಕ್ರೋಧಲೋಭಗಳನ್ನು ಮಾಡುತ್ತ ಕಷ್ಟಕ್ಕೆ ಗುರಿಯಾಗುತ್ತಿರುವನು. ಅಲ್ಲಿಯೂ ಹೆಚ್ಚಿನ ಅರ್ಥಗಳನ್ನು ಪಡೆದುಕೊಂಡು ಪ್ರೀತನಾಗುತ್ತಿರುವನು. ಅಲ್ಲಿಯೂ ಪುಣ್ಯಕರ್ಮವನ್ನು ಮಾಡುತ್ತಾ ಜೀವಿಸುತ್ತಿರುವಂತೆ ಬಗೆಯುವನು. ಅತ್ಯಂತ ಉಷ್ಣವಾದ ಗರ್ಭವಾಸವನ್ನು ಪಡೆದಿರುವಾಗಲೂ ಹತ್ತು ತಿಂಗಳವರೆಗೆ ತಾಯಿಯ ಗರ್ಭದಲ್ಲಿದ್ದರೂ ಆಕೆಯ ಉಂಡ ಅನ್ನದಂತೆ ಜೀರ್ಣವಾಗದೆ ಇರುತ್ತಾನೆ!

ಈ ಅತಿತೇಜೋಂಶನಾದ ಭೂತಾತ್ಮನು ಹೃದಯದಲ್ಲಿದ್ದರೂ ತಮೋರಜೋಗುಣಗಳಿಂದ ಆವಿಷ್ಟರಾದ ಅವಿವೇಕಿಗಳು ದೇಹಗಳೊಳಗೆ ಇರುವದನ್ನು ಕಾಣದೆ ಇರುತ್ತಾರೆ. ಯೋಗಶಾಸ್ತ್ರದಲ್ಲಿ ತತ್ಪರರಾಗಿ ಆ ಆತ್ಮನನ್ನು ಸೇರಬೇಕೆಂದು ಬಯಸುವವರು ಉಸಿರಾಡದೆ ಇರುವ, ಅಮೂರ್ತಗಳಾದ ವಜ್ರತುಲ್ಯವಾಗಿರುವ ಆ ಜೀವರನ್ನು ಕಾಣುವದಕ್ಕೆ ಯತ್ನಿಸುವರು.

ನಾಲ್ಕನೆಯ ಆಶ್ರಮಕ್ಕೆ ವಿಹಿತವಾಗಿರುವ ಭಿನ್ನಭಿನ್ನಕರ್ಮಗಳೊಳಗೆಲ್ಲ ಸಮಾಧಿಯು ಹೆಚ್ಚಿನದಾಗಿರುತ್ತದೆ. ಸಮಾಧಿಯಲ್ಲಿ ಈ ಯೋಗವನ್ನೊಂದನ್ನು

ಮಾತ್ರ **ಶಮ**ವೆಂಬ ಹೆಸರಿನಿಂದ ಶಾಂಡಿಲ್ಯನು ಹೇಳಿರುತ್ತಾನೆ. (ಮನೋಬುದ್ಧಿ ಪಂಚತನ್ಮಾತ್ರೆಗಳೆಂಬ) ಏಳು ಸೂಕ್ಷ್ಮತತ್ತ್ವಗಳನ್ನು ಅರಿತುಕೊಂಡು ಷಡಂಗಯುಕ್ತನಾದ ಪರಮೇಶ್ವರನನ್ನು ಅರಿತುಕೊಂಡಿರುವ- ಪ್ರಕೃತಿಯೇ ಜಗದಾತ್ಮಕವಾಗಿರುವದೆಂಬುದನ್ನು ಅರಿತುಕೊಂಡವನು ಪರಬ್ರಹ್ಮವನ್ನು ಕಂಡುಕೊಳ್ಳುತ್ತಾನೆ.

* * * * *

## 39. ಕಾಮವೃಕ್ಷ, ಶರೀರಪುರ*

**ವ್ಯಾಸರಿಂತೆಂದರು:** ಹೃದಯದಲ್ಲಿ ಕಾಮವೆಂಬ ವಿಚಿತ್ರವಾದ ವೃಕ್ಷವಿರುವದು. ಅದು ಮೋಹಬೀಜದಿಂದ ಹುಟ್ಟಿರುವದು. ಕ್ರೋಧ, ಅಭಿಮಾನಗಳೆಂಬ ದೊಡ್ಡ ಬುಡವುಳ್ಳದ್ದಾಗಿರುತ್ತದೆ. ಇದನ್ನು ಮಾಡಬೇಕೆಂಬುದೇ ಅದಕ್ಕೆ ನೀರು ಹಾಕುವ ಪಾತ್ರೆ. ಅಜ್ಞಾನವೇ ಅದಕ್ಕೆ ಪಾತಿ, ಪ್ರಮಾದವೇ ಅದಕ್ಕೆ ಹಾಕುವ ನೀರು; ಅಸೂಯೆಯೇ ಅದರಲ್ಲಿ ಏಳುವ ಚಿಗುರು, ಹಿಂದಿನ ಪಾಪವೆಂಬುದೇ ಅದರ ಕಿಚ್ಚು; ಶೋಕವೆಂಬುದೇ ಅದರ ಕೊಂಬೆ; ಮೋಹ ಮತ್ತು ಚಿಂತೆ ಎಂಬಿವು ಅದರ ಬಿಳಿಲುಗಳು, ಅಂಜಿಕೆಯೇ ಅದರ ಮೊಳಕೆ, ಮೋಹಗೊಳಿಸುವ ತೃಷ್ಣಾರೂಪವಾದ ಬಳ್ಳಿಗಳು ಅದನ್ನು ಸುತ್ತುವರಿದುಕೊಂಡಿರುವವು. ಅದರ ಹಣ್ಣುಗಳನ್ನು ಪಡೆದುಕೊಳ್ಳಲೆಳಸುವ ಲೋಭಿಗಳು ವಾಸನೆಗಳೆಂಬ ಕಬ್ಬಿಣದ ಬೇಡಿಗಳಿಂದ ಬಿಗಿವಡೆದು ಹಣ್ಣುಬಿಡುತ್ತಿರುವ ಆ ಮಹಾವೃಕ್ಷದ ಸುತ್ತಲೂ ಸುತ್ತು ಗಟ್ಟಿ ಕುಳಿತಿರುವರು.

ಆ ಸರಪಳಿಗಳನ್ನು ವಶದಲ್ಲಿಟ್ಟುಕೊಂಡು ಯಾವನು ಆ ಮರವನ್ನು ಕತ್ತರಿಸಿ ಹಾಕುವನೋ ಅವನು ಮುಪ್ಪುಸಾವುಗಳೆಂಬ ಎರಡೂ ದುಃಖಗಳ ಪಾರವನ್ನು ಸೇರಿದವನಾಗುತ್ತಾನೆ; ಆದರೆ ಅಕೃತಪ್ರಜ್ಞನಾದ ಯಾವನು ಅದರ ಮೇಲೇರಿ ಕುಳಿತಿರುವನೋ, ಅವನನ್ನೇ ಅದು- ರೋಗಿಯನ್ನು ವಿಷಗ್ರಂಥಿಯು ಕೊಂದು ಹಾಕುವಂತೆ- ಕೊಂದುಹಾಕಿಬಿಡುವದು. ಬೇರುಬಿಟ್ಟುಕೊಂಡಿರುವ ಆ ಮರದ

---

* ಸಂಪುಟ 41; ಸಂಚಿಕೆ 3; ನವೆಂಬರ್ 1971

ಹೆಬ್ಬೇರನ್ನು ಜಾಣನಾದ ಪುರುಷನು ಯೋಗದ ಪ್ರಸಾದದಿಂದ **ಸಮತೆ** ಎಂಬ ತೀಕ್ಷ್ಣವಾದ ಕತ್ತಿಯಿಂದ ಕತ್ತರಿಸಿಹಾಕುತ್ತಾನೆ. ಈ ರೀತಿಯಲ್ಲಿ ಯಾವನು ಕೇವಲ ಕಾಮವನ್ನು ನಾಶಗೊಳಿಸುವ ಕ್ರಮವನ್ನು ಅರಿತುಕೊಳ್ಳುವನೋ, ಕಾಮಶಾಸ್ತ್ರವು ಬಂಧಕವೆಂಬುದನ್ನು ಅರಿತುಕೊಂಡಿರುವನೋ, ಅವನು ದುಃಖಗಳನ್ನೆಲ್ಲ ಅತಿಕ್ರಮಿಸುವನು.

ಬಲ್ಲವರು **ಶರೀರವೇ ಪುರ**ವೆನ್ನುತ್ತಾರೆ, ಬುದ್ಧಿಯೇ ಇದಕ್ಕೆ ರಾಣಿ. ಆ ರಾಣಿಗೆ ಇಷ್ಟಾರ್ಥಸಿದ್ಧಿಯನ್ನು ಆಲೋಚಿಸಿ ತಿಳಿಯಿಸುವದಕ್ಕೆ ಅಜ್ಞನ ಶರೀರ ದಲ್ಲಿರುವ ಮನಸ್ಸೆಂಬುದೇ ಮಂತ್ರಿಯಾಗಿರುವದು. ಇಂದ್ರಿಯಗಳೇ ಈ ಪುರದಲ್ಲಿರುವ ನಿವಾಸಿಗಳು; ಅವು ಆ ಮಂತ್ರಿಯ ಕಾರ್ಯವನ್ನು ಮಾಡಿಕೊಡುತ್ತಿರುವವು. ಅಲ್ಲಿ ತಮಸ್ಸು, ರಜಸ್ಸು- ಎಂಬ ಎರಡು ದೋಷಗಳಿರುವವು. ಇಂದ್ರಿಯಗಳು ಪುರಪಾಲಕರೊಡನೆ ಆ ಪುರಸ್ವಾಮಿಗಾಗಿ ದುಡಿಯುತ್ತಿರುವವು. ಆ ಎರಡು ದೋಷಗಳೂ ಕುತ್ಸಿತಮಾರ್ಗದಿಂದ ಅದರ ಅರ್ಥ(ಪ್ರಯೋಜನ)ವನ್ನು ಮಾಡಿಕೊಡುತ್ತಾ ಅದನ್ನಾಶ್ರಯಿಸಿಕೊಂಡು ಜೀವಿಸುತ್ತಿರುವವು. ಬುದ್ಧಿಯು ಯಾರಿಗೂ ಜಗ್ಗದೆ ಮನಸ್ಸಿನ ಸಮಾನತೆಯನ್ನು ಪಡೆದುಕೊಂಡಿರುವದು. ಪುರವಾಸಿಗಳಾದ ಇಂದ್ರಿಯಗಳೂ ಮನಸ್ಸಿಗೆ ಅಂಜಿಕೊಂಡು ಇರುತ್ತವೆ; ಅವುಗಳೂ ಚಂಚಲವಾಗಿರುತ್ತವೆ. ಅವುಗಳು ಅರ್ಪಿಸಿದ ಅರ್ಥವನ್ನೇ ಸರಿಯೆಂದು ಬುದ್ಧಿಯು ನಿಶ್ಚಯಿಸುವದು; ಇದರಿಂದ ಅನರ್ಥವೇ ಉಂಟಾಗುತ್ತಿರುವದು. ಯಾವ ವಿಷಯವನ್ನು ಬುದ್ಧಿಯು ಸರಿಯೆಂದು ನಿಶ್ಚಯಿಸುವದೋ ಮನಸ್ಸು ಅದನ್ನೇ ಆಶ್ರಯಿಸಿಕೊಳ್ಳುವದು. ಬುದ್ಧಿಗಿಂತ ಬೇರೆಯಾದ ಮನಸ್ಸು ಕೇವಲಮನಸ್ಸೇ ಆಗಿರುತ್ತದೆ. ಹೀಗೆ ಪರವಶವಾದ ಮನಸ್ಸನ್ನು ರಜಸ್ಸು ಹಿಡಿದುಕೊಳ್ಳುವದು; ಆ ಮನಸ್ಸು ರಜಸ್ಸಿನ ಸ್ನೇಹವನ್ನೇ ಮಾಡಿಕೊಳ್ಳುವದು, ಪೌರಜನರಾದ ಇಂದ್ರಿಯಗಳನ್ನು ರಜಸ್ಸಿಗೇ ಸಮರ್ಪಿಸಿಬಿಡುತ್ತದೆ.

* * * * *

## 40. ಪಂಚಭೂತಗಳ ಮತ್ತು ಮನೋಬುದ್ಧಿಗಳ ಗುಣಗಳು*

ಭೀಷ್ಮರಿಂತೆಂದರು: "ಅಪ್ಪ, ದ್ವೈಪಾಯನರ ಮುಖದಿಂದ ಹೊರಬಿದ್ದ ಭೂತಗಳ ವಿಚಾರವನ್ನು ಮತ್ತೊಮ್ಮೆ ಹೇಳುವೆನು; ಇದನ್ನು ಮನಮುಟ್ಟಿ ಕೇಳು." ಹೊತ್ತಿಕೊಂಡುರಿಯುವ ಅಗ್ನಿಯಂತೆ ತೇಜಸ್ಸಿನಿಂದ ಹೊಳೆಯುವ ವೇದವ್ಯಾಸನು ಧೂಮಾಚ್ಛಾದಿತವಾದ ಅಗ್ನಿಯಂತಿದ್ದ ಪುತ್ರನಿಗೆ ಹೇಳಿದ್ದನ್ನು ಮತ್ತೂ ನಿನಗೆ ಹೇಳುವೆನು.

"ಭೂಮಿಗೆ –ಸ್ಥಿರತ್ವ, ಭಾರ, ಗಟ್ಟಿಯಾಗಿರುವದು, ಬೀಜವನ್ನು ಮೊಳಕೆ ಯಾಗುವಂತೆ ಹೊರಡಿಸುವ ಶಕ್ತಿ, ವಾಸನೆ, ವಿಶಾಲವಾಗಿರುವದು, ಶಕ್ತಿ, ಸಂಘಾತ, ಸ್ಥಾಪನೆ, ಧಾರಣಸಾಮರ್ಥ್ಯ–ಇವು ಗುಣಗಳು. ಅಪ್ಪಿಗೆ–ತಂಪು, ರುಚಿ, ನೆನೆಯಿಸುವ ಶಕ್ತಿ, ನೀರಾಗಿರುವಿಕೆ, ಜಿಡ್ಡು, ಸೌಮ್ಯಭಾವ, ಜಿಹ್ವೆ, ಹರಿಯುವಿಕೆ ಮತ್ತು ಭೂಮಿಯಿಂದ ಹುಟ್ಟುವ ವಸ್ತುಗಳನ್ನು ಪರಿಪಕ್ವಗೊಳಿಸುವದು– ಇವು ಗುಣಗಳು. ಅಗ್ನಿಗೆ – ಎದುರಿಸಲಾಗದ ಸ್ವಭಾವ, ಉರಿಯುವದು, ಸುಡುವದು, ಪಕ್ವಗೊಳಿಸು ವದು, ಪ್ರಕಾಶ, ಶೋಕ, ರಾಗ, ಲಾಘವ, ತೀಕ್ಷ್ಣವಾಗಿರುವದು, ಯಾವಾಗಲೂ ಮೇಲಕ್ಕೇ ಏರುವದು– ಇವಿಷ್ಟೂ ಗುಣಗಳು. ವಾಯುವಿಗೆ– ನಿಯತವಲ್ಲದ ಸ್ಪರ್ಶ, ವಾಗಿನ್ದ್ರಿಯಸ್ಥಾನತ್ವ, ಸ್ವಾತಂತ್ರ್ಯ, ಬಲ, ಶೀಘ್ರಗಾಮಿತ್ವ, ಮಲಮೂತ್ರಾದಿ ಗಳನ್ನು ಹೊರಕ್ಕೆ ನೂಕುವದು, ಉತ್‍ಕ್ಷೇಪಣಾದಿಕರ್ಮ, ಕ್ರಿಯಾಶಕ್ತಿ, ಪ್ರಾಣ, ಉತ್ಪತ್ತಿ– ಇವುಗಳು ಗುಣಗಳು. ಆಕಾಶಕ್ಕೆ– ಶಬ್ದ, ವ್ಯಾಪಿತ್ವ, ರಂಧ್ರ, ಯಾವದನ್ನೂ ಆಧಾರವಾಗಿ ಆಶ್ರಯಿಸದೆ ಇರುವದು, ಯಾವದನ್ನೂ ಅವಲಂಬಿಸದೆ ಇರುವದು, ಅವ್ಯಕ್ತತ್ವ, ನಿರ್ವಿಕಾರತ್ವ, ಯಾವ ಅಡ್ಡಿಯೂ ಇಲ್ಲದಿರುವಿಕೆ, ಶ್ರವಣೇಂದ್ರಿಯಕ್ಕೆ ಕಾರಣವಾಗಿರುವಿಕೆ, ವಿಕಾರಗಳಿಗೆ ಪ್ರಕೃತಿಯಾಗಿರುವದು– ಇವು ಗುಣಗಳು.

ಹೀಗೆ ಪಂಚಭೂತಗಳ ಐವತ್ತು ಗುಣಗಳನ್ನು ಹೇಳಿರುತ್ತೇನೆ. ಇನ್ನು ಮನಸ್ಸಿಗೆ– ಧೈರ್ಯ, ಉಪಪತ್ತಿಯನ್ನು ತೋರಿಸುವದು, ಸ್ಮರಣ, ಭ್ರಾಂತಿ, ಕಲ್ಪನೆ, ಕ್ಷಮೆ, ಶುಭಸಂಕಲ್ಪ, ಅಶುಭಸಂಕಲ್ಪ, ಚಾಂಚಲ್ಯ – ಎಂಬೀ ಒಂಬತ್ತು

---

* ಸಂಪುಟ 41; ಸಂಚಿಕೆ 4; ಡಿಸೆಂಬರ್ 1971

ಗುಣಗಳು. ಬುದ್ಧಿಗೆ – ಇಷ್ಟಾನಿಷ್ಟವೃತ್ತಿಗಳ ನಾಶ, ನಿಶ್ಚಯಿಸುವಿಕೆ, ಸಮಾಧಾನ, ಸಂಶಯ, ಅರಿಯುವಿಕೆ– ಇವೈದೂ ಗುಣಗಳು.

**ಯುಧಿಷ್ಠಿರನಿಂತೆಂದನು:** "ಪಿತಾಮಹನೆ, ಬುದ್ಧಿಗೆ ಐದೇ ಗುಣಗಳೆಂಬುದು ಹೇಗೆ? ಪಂಚೇಂದ್ರಿಯಗಳು ಗುಣಗಳು ಆಗುವದು ಹೇಗೆ? ಈ ಸೂಕ್ಷ್ಮಜ್ಞಾನವನ್ನೆಲ್ಲ ವನ್ನೂ ನನಗೆ ಹೇಳುವನಾಗು."

ಇದಕ್ಕೆ ಭೀಷ್ಮರು ಹೇಳಿದ್ದೇನೆಂದರೆ: ಬುದ್ಧಿ ಗುಣಗಳೆಂದರೆ – ಹಿಂದೆ ಹೇಳಿದ ಭೂತಗಳು ಐದು, ಬುದ್ಧಿಯ ಗುಣಗಳು ಐದು, ಪಂಚಭೂತಗಳ ಗುಣಗಳು ಐವತ್ತು ಸೇರಿ ಅರವತ್ತು ಗುಣಗಳೆಂದು ಬಲ್ಲವರು ಹೇಳುತ್ತಾರೆ. ಈ ಗುಣಗಳೆಲ್ಲವೂ ಅಕ್ಷರಚೈತನ್ಯಕ್ಕೆ ಸೇರಿಕೊಂಡಿರುತ್ತವೆ. ಆದರೆ ಮಾರ್ಪಡುತ್ತಲೇ ಇರುವದರಿಂದ ತತ್ತ್ವಜ್ಞರು ಇವನ್ನು ನಿತ್ಯವೆಂದು ಹೇಳುತ್ತಿಲ್ಲ. ಪುತ್ರನೆ, ಮಿಕ್ಕವರು ಹೇಳುವುದೆಲ್ಲವೂ ವಿಚಾರಕ್ಕೆ ಹೊಂದದೆ ಆಕುಲಿತವಾಗಿರುತ್ತದೆ. ಆದ್ದರಿಂದ ಯಥಾರ್ಥವಾಗಿರುವ ತತ್ತ್ವವನ್ನು ಅರಿತು ಶಾಂತಬುದ್ಧಿಯವನಾಗು.

* * * * *

## 41. ವ್ಯಾಸರು ಶುಕನಿಗೆ ಧರ್ಮವೈರಾಗ್ಯಪೂರ್ಣವಾದ ಉಪದೇಶವನ್ನು ಕೊಟ್ಟದ್ದು[1]*

ಯುಧಿಷ್ಠಿರನಿಂತೆಂದನು: "ಪಿತಾಮಹನೆ, ಪೂರ್ವದಲ್ಲಿ ವ್ಯಾಸಪುತ್ರನಾದ ಶುಕನಿಗೆ ವೈರಾಗ್ಯವುಂಟಾದದ್ದು ಹೇಗೆ? ಇದನ್ನು ಶ್ರವಣಮಾಡಬೇಕೆಂಬ ಇಚ್ಛೆಯುಂಟಾಗಿದೆ. ಆ ವಿಷಯದಲ್ಲಿ ನಮಗೆ ಪರಮ ಕುತೂಹಲವುಂಟಾಗಿರು ತ್ತದೆ. ಕೌರವನೆ, ಅವ್ಯಕ್ತ ಮತ್ತು ವ್ಯಕ್ತ– ಈ ತತ್ತ್ವಗಳ ಬುದ್ಧಿನಿಶ್ಚಯವನ್ನೂ ಜನ್ಮರಹಿತನಾದ ದೇವನ ಕೃತಿಯನ್ನೂ ದಯವಿಟ್ಟು ಹೇಳುವನಾಗು."

---

* ಸಂಪುಟ 41; ಸಂಚಿಕೆ 5; ಜನವರಿ 1972

1 ಮೋಕ್ಷ ಧರ್ಮದ 255ನೆಯ ಅಧ್ಯಾಯದ ಬಳಿಕ 320ನೆಯ ಅಧ್ಯಾಯ ಮುಗಿಯುವವರೆಗೆ ಭೀಷ್ಮ ಯುಧಿಷ್ಠರ ಸಂವಾದದಲ್ಲಿ ಮೋಕ್ಷಧರ್ಮ ವಿಚಾರವೇನೋ ಇದೆಯಾದರೂ ಶುಕನ ವೃತ್ತಾಂತವೇನೂ ಇರುವುದಿಲ್ಲ. ಆದ್ದರಿಂದ ಆ ಅಧ್ಯಾಯಗಳನ್ನು ಸದ್ಯಕ್ಕೆ ಕೈಬಿಟ್ಟು ಶುಕನ ಪರಾಮರ್ಶವಿರುವ ಭಾಗಗಳನ್ನು ಮಾತ್ರ ಮುಂದುವರೆಯಿಸಲಾಗಿದೆ.

ಭೀಷ್ಮಾಚಾರ್ಯರಿಂತೆಂದರು: "ರಾಜನೇ, ಪ್ರಕೃತಿಯಿಂದಲೇ ಸದಾಚಾರ ವಂತನಾಗಿ ಏತಕ್ಕೂ ಅಂಜದೆ ವ್ಯವಹರಿಸುತ್ತಿದ್ದ ಪುತ್ರನಾದ ಶುಕನನ್ನು ಕಂಡು ಅವನಿಗೆ ಅಧ್ಯಯನವನ್ನು ಮಾಡಿಸಿ ವ್ಯಾಸನು ಹೀಗೆಂದು ಉಪದೇಶಿಸಿದನು.

'ಪುತ್ರ, ಧರ್ಮವನ್ನು ಸೇವಿಸು, ತೀಕ್ಷ್ಣವಾಗಿರುವ ಚಳಿ, ಬಿಸಿಲು; ಹಸಿವು, ಬಾಯಾರಿಕೆ; ಪ್ರಾಣವಾಯು– ಇವುಗಳನ್ನು ಜಿತೇಂದ್ರಿಯನಾಗಿ ಗೆದ್ದುಕೊ. ಸತ್ಯ ಋಜುಭಾವ, ಅಕ್ರೋಧ, ಅನಸೂಯೆ, ದಮ, ತಪಸ್ಸು, ಅಹಿಂಸೆ, ದಯೆ – ಇವುಗಳನ್ನು ವಿಧಿವತ್ತಾಗಿ ಕಾಪಾಡಿಕೊಂಡಿರು. ಸತ್ಯದಲ್ಲಿ ನೆಲೆನಿಂತಿರು, ಅನಾಚಾರವೆಲ್ಲವನ್ನೂ ಬಿಟ್ಟು ಧರ್ಮದಲ್ಲಿ ನಿರತನಾಗಿರು. ದೇವತೆಗಳು, ಅತಿಥಿಗಳು ಇವರನ್ನು ಸೇವಿಸಿದ ಬಳಿಕ ಶೇಷದಲ್ಲಿ ಪ್ರಾಣಯಾತ್ರೆಯನ್ನು ಮಾಡಿಕೊ. ನೊರೆಯಂತೆ ಇರುವ ದೇಹದಲ್ಲಿ ಪಕ್ಷಿಯಂತೆ ಜೀವನು ಇರುತ್ತಿರುವಲ್ಲಿ ಪ್ರಿಯಸಹ ವಾಸವು ಕೂಡ ಅನಿತ್ಯವಾಗಿರುವಲ್ಲಿ, ಮಗುವೆ, ನಿದ್ರಿಸುತ್ತಿರುವೆಯಲ್ಲ! ಇದು ಹೇಗೆ? ಶತ್ರುಗಳು ಸಾವಧಾನದಿಂದ ನಿತ್ಯವೂ ಸಮಾಹಿತರಾಗಿ ನಿನ್ನ ರಂಧ್ರವನ್ನು ಹುಡುಕುತ್ತಿರುವಲ್ಲಿ, ಹುಡುಗನಾದ ನೀನು ಇದನ್ನು ಅರಿಯದೆ ಇರುವೆಯಲ್ಲ! ದಿನಗಳು ಲೆಕ್ಕವಾಗುತ್ತ ಆಯುಸ್ಸು ಕ್ಷಯಿಸುತ್ತಿರುವಲ್ಲಿ ಜೀವಮಾನವು ಬರೆದಿಡುತ್ತಾ ಇರುವಲ್ಲಿ ಎದ್ದು ಓಡಿಹೋಗದೆ ಇರುವೆಯಲ್ಲ! ಇದೇಕೆ? ಘೂರ ನಾಸ್ತಿಕರಾದವರು ಮಾಂಸರಕ್ತಗಳನ್ನು ವೃದ್ಧಿಗೊಳಿಸುವ ಇಹಲೋಕದ ಭೋಗಕ್ಕೆ ಎಳಸುತ್ತಿರುವರು; ಪರಲೋಕದ ಕರ್ಮಗಳ ವಿಷಯದಲ್ಲಿ ಗಾಢನಿದ್ರೆಯಲ್ಲಿರುತ್ತಾರೆ. ಬುದ್ಧಿಮೋಹ ಸಂಯುಕ್ತರಾದ ಯಾವ ಜನರು ಧರ್ಮದ ವಿಷಯಕ್ಕೆ ಅಸೂಯಾಯುಕ್ತ ರಾಗಿರುವರೋ, ಕುಮಾರ್ಗದಲ್ಲಿ ನಡೆಯುತ್ತಿರುವ ಅವರನ್ನು ಅನುಸರಿಸುವವನೂ ಕಷ್ಟವನ್ನನುಭವಿಸುತ್ತಿರುತ್ತಾನೆ. ಆದರೆ ಯಾರು ಸಂತುಷ್ಟರಾಗಿ ಶ್ರುತಿಪರಾಯಣರಾಗಿ ಮಹಾಬಲಯುಕ್ತರಾದ ಮಹಾತ್ಮರಾಗಿರುವರೋ, ಧರ್ಮ್ಯವಾದ ಮಾರ್ಗವನ್ನು ಹತ್ತಿರುವ ಅಂಥವರನ್ನು ನೀನು ಸೇವಿಸು. ಕರ್ತವ್ಯದ ವಿಷಯದಲ್ಲಿ ಅವರನ್ನು ಕೇಳಿ ತಿಳಿದುಕೊ. ಧರ್ಮದರ್ಶಿಗಳಾದ ಅವರ ಮತವನ್ನು ಅರಿತುಕೊಂಡು ಉನ್ಮಾರ್ಗದಲ್ಲಿ ನಡೆಯುತ್ತಿರುವ ಚಿತ್ತವನ್ನು ಉತ್ತಮವಾದ ಬುದ್ಧಿಯಿಂದ ನಿಗ್ರಹಿಸಿಕೊ.

ಪ್ರಾಕೃತರು ಇವತ್ತಿನ ಭೋಗದ ವಿಷಯದಲ್ಲಿ ನೆಟ್ಟಬುದ್ಧಿಯಿಂದ ನಾಳೆಯೆಂಬುದು ಬಲುದೂರವಿದೆಯೆಂದುಕೊಂಡು ಅಂಜಿಕೆಯಿಲ್ಲದೆ, ಎಲ್ಲವನ್ನೂ

ತಿನ್ನುತ್ತಾ ಬುದ್ಧಿಹೀನರಾಗಿ ಕರ್ಮಭೂಮಿಯ ತತ್ತ್ವವನ್ನು ಕಂಡುಕೊಳ್ಳದೆ ಇರುತ್ತಾರೆ. ಧರ್ಮದ ನಿಚ್ಚಣಿಗೆಯನ್ನು ಆಶ್ರಯಿಸಿ ಇಚ್ಛಿಷ್ಟಾಗಿ ಏರುತ್ತಿರು. ರೇಷ್ಮೆಯ ಹುಳುವಿನಂತೆ ನಿನ್ನನ್ನು ನೀನೇ ವಿಷಯವಾಸನೆಗಳಿಂದ ಸುತ್ತಿಕೊಂಡು ನಿನ್ನ ಸ್ಥಿತಿಯನ್ನು ನೀನೇ ಅರಿತುಕೊಳ್ಳದೆ ಇರುವೆ. ನಾಸ್ತಿಕನನ್ನೂ, ಧರ್ಮಮರ್ಯಾದೆಯನ್ನು ಭಂಗಗೊಳಿಸುತ್ತಿರುವವನನ್ನೂ, ದಡವನ್ನು ಕೆಡಹುತ್ತಿರುವ ಬಲವಾದ ಪ್ರವಾಹದಂತೆ ಇರುವ ಮನುಷ್ಯನನ್ನೂ ಬದಿಗೊತ್ತಿ ಮೇಲಕ್ಕೇರಿರುವ ಬಿದುರು ಮಳೆಯಂತೆ ಸ್ವಲ್ಪವೂ ಹಿಂತೆಗೆಯದೆ ಅತ್ತ ಸರಿಯಿಸಿಕೊ. ಕಾಮ, ಕ್ರೋಧ, ಮೃತ್ಯು, ಪಂಚೇಂದ್ರಿಯಜಲದ ನದಿ– ಇವುಗಳನ್ನೂ ಜನ್ಮದುರ್ಗಗಳನ್ನೂ ಧೃತಿಮಯವಾದ ನೌಕೆಯನ್ನವಲಂಬಿಸಿ ದಾಟುವವನಾಗು. ಲೋಕವೆಲ್ಲ ಮೃತ್ಯುವಿನ ಹೊಡೆತಕ್ಕೆ ಸಿಕ್ಕಿಬಿದ್ದು ಮುಪ್ಪಿನಿಂದ ಸಂಕಟಪಡುತ್ತಾ ಎಲ್ಲ ಹೆಚ್ಚಿನ ಪ್ರಾಣಿಗಳೂ ಕೆಳಕ್ಕೆ ಬೀಳುತ್ತಿರುವದನ್ನು ಕಂಡು ಧರ್ಮವೆಂಬ ತೆಪ್ಪದಿಂದ ಪಾರಾಗು. ನಿಂತಿರಲಿ, ಮಲಗಿರಲಿ, ಮೃತ್ಯುವು ಹುಡುಕಿಕೊಂಡೇ ಬರುತ್ತಿದೆಯೆಂದು ತಿಳಿದಿರುವಾಗ, ಅಕಸ್ಮಾತ್ತಾಗಿ ಮೃತ್ಯುವು ಭಕ್ಷಿಸುತ್ತಿದ್ದರೂ ಸುಖವಾಗಿ ಸುಮ್ಮನಿರುವದು ಹೇಗೆ? ಭೋಗಗಳನ್ನು ಕೂಡಿಹಾಕುತ್ತಲೇ ಇದ್ದು ಕಾಮಗಳಿಂದ, ಸ್ವಲ್ಪವೂ ತೃಪ್ತನಾಗದೆ ಇರುವಾತನನ್ನು– ತೋಳವು ಹೋತನನ್ನು ಒಯ್ಯುವಂತೆ– ಮೃತ್ಯುವು ಸೆಳೆದೊಯ್ಯುವದು. ಮೆಲ್ಲಮೆಲ್ಲಗೆ ಕುಡಿಯನ್ನು ಹೆಚ್ಚಿಸುತ್ತಾ, ಧರ್ಮಬುದ್ಧಿಯಿಂದ ದೊಡ್ಡದಾಗುವ ದೀಪವನ್ನು ಯತ್ನದಿಂದ ಹಿಡಿದುಕೊಂಡಿರು. ಏಕೆಂದರೆ ಕಗ್ಗತ್ತಲೆಯನ್ನು ಪ್ರವೇಶಿಸಬೇಕಾಗಿದೆ.

ಜೀವನು ಎಷ್ಟೋ ದೇಹಜಾಲಗಳನ್ನು ಹೊಕ್ಕು, ಯಾವಾಗಲೋ ಒಮ್ಮೆ ಮನುಷ್ಯಜನ್ಮದಲ್ಲಿ ಬ್ರಾಹ್ಮಣ್ಯವನ್ನು ಪಡೆದುಕೊಳ್ಳುತ್ತಾನೆ. ಪುತ್ರ, ಅದನ್ನು ಕಾಪಾಡಿಕೊ, ಬ್ರಾಹ್ಮಣನ ಈ ದೇಹವು ಕಾಮಭೋಗಕ್ಕಾಗಿ ಹುಟ್ಟಿರುವದಿಲ್ಲ; ಇಲ್ಲಿ ಕ್ಲೇಶಪಟ್ಟು ತಪಸ್ಸುಮಾಡುವದಕ್ಕೂ ಸತ್ತ ಬಳಿಕ ನಿರುಪಮಸುಖವನ್ನು ಅನುಭವಿಸುವದಕ್ಕೂ ಹುಟ್ಟಿರುತ್ತದೆ. ಬ್ರಾಹ್ಮಣ್ಯವು ಬಹಳ ತಪಸ್ಸುಗಳ ಫಲವಾಗಿ ಲಭಿಸಿರುತ್ತದೆ; ಅದನ್ನು ಪಡೆದುಕೊಂಡವನು ವಿಷಯರತನಾಗಿ ಆಡುತ್ತಿರಬಾರದು. ಅಧ್ಯಯನ, ತಪಸ್ಸು, ದಮ– ಇವುಗಳಲ್ಲಿ ನಿತ್ಯಯುಕ್ತನಾಗಿದ್ದುಕೊಂಡು ಮುಕ್ತಿಗಾಗಿ ಪುಣ್ಯಕರ್ಮದಲ್ಲಿಯೇ ತತ್ಪರನಾಗಿ ಪ್ರಯತ್ನಿಸುತ್ತಿರು.

ಮನುಷ್ಯನ ಆಯುಸ್ಸೆಂಬ ಈ ಕುದುರೆಯು ಅವ್ಯಕ್ತಸ್ವಭಾವದ ಗತಿಯಿಂದ ಕಲಾಕಾಷ್ಠಾದಿಗಳೆಂಬ ಶರೀರವುಳ್ಳದ್ದು, ಸೂಕ್ಷ್ಮವಾದ ಸ್ವರೂಪವುಳ್ಳದ್ದು. ಕ್ಷಣತ್ರುಟಿನಿಮೇಷಗಳೆಂಬ ಮೈಗೂದಲುಳ್ಳದ್ದು; ಋತುಗಳೇ ಇದಕ್ಕೆ ಬಾಯಿ, ಸಮಾನವಾದ ಬಲವುಳ್ಳ ಶುಕ್ಲಪಕ್ಷಕೃಷ್ಣಪಕ್ಷಗಳೇ ಇದರ ಕಣ್ಣುಗಳು, ತಿಂಗಳುಗಳೇ ಇದರ ಅವಯವಗಳು. ಇಂಥ ಈ ಕುದುರೆಯು ವೇಗದಿಂದ ಓಡುತ್ತಿರುವದು. ಇದು ಮತ್ತೆ ಯಾರನ್ನೂ ಲಕ್ಷಿಸದೆ ಭಯಂಕರವೇಗದಿಂದ ಎಡೆಬಿಡದೆ ಓಡುತ್ತಿರುವದನ್ನು ಕಂಡು ನಿನ್ನ ಚಕ್ಷುಸ್ಸು ಮತ್ತೊಬ್ಬರು ಹೇಳಿದಂತೆ ನಡೆಯದೆ ಇರುವದಾದರೆ ಪರಗತಿಯ ಮಾರ್ಗವನ್ನು ಅರಿತುಕೊಂಡು ಧರ್ಮದಲ್ಲಿಯೇ ನಿನ್ನ ಮನಸ್ಸು ಇದ್ದುಕೊಂಡಿರಲಿ! ಯಾರು ಇಲ್ಲಿ ಧರ್ಮದಿಂದ ವಿಚಲಿತರಾಗಿ ಸ್ವೇಚ್ಛಾಚಾರ ರತರಾಗಿರುವರೋ, ಅಶುಭಕರ್ಮದಲ್ಲಿಯೇ ನಿರಂತರವಾಗಿ ಸಂಯುಕ್ತರಾಗಿರುವ ಅವರು ವೇದನಾಶರೀರವನ್ನು ಹೊಂದಿ ಅನೇಕ ಅಧರ್ಮಕಾರಣಗಳಿಂದ ಕ್ಲೇಶವನ್ನು ಅನುಭವಿಸುವರು.

ಯಾವ ರಾಜನು ಇಲ್ಲಿ ಯಾವಾಗಲೂ ಧರ್ಮಪರನಾಗಿ ಒಳ್ಳೆಯ ಮತ್ತು ಕೆಟ್ಟ ನಡತೆಯ ಪ್ರಜೆಗಳನ್ನು ಯಥಾಯೋಗ್ಯವಾಗಿ ಪರಿಪಾಲಿಸುತ್ತಿರುವನೋ ಅವನು ಪುಣ್ಯಾತ್ಮರ ಲೋಕಗಳನ್ನು ಪ್ರವೇಶಿಸುವನು. ಅವನು ತಾನೂ ಬಹುವಿಧವಾದ ಪುಣ್ಯಕರ್ಮವನ್ನು ಆಚರಿಸುತ್ತಿರುವನಾದರೆ, ನಿರ್ದುಷ್ಟವಾದ ಸುಖವನ್ನು ಅನುಭವಿಸುವನು. ಯಾವನು ಗುರುಜನರ ವಚನವನ್ನುಂಲ್ಲಂಘಿಸಿ ನಡೆಯುತ್ತಿರುವನೋ– ಅವನು ಸತ್ತಬಳಿಕ ಭಯಂಕರಶರೀರದ ನಾಯಿಗಳೂ, ಕಬ್ಬಿಣದ ಕೊಕ್ಕಿನ ಪಕ್ಷಿಗಳೂ ಬಲಶಾಲಿಯಾದ ಹದ್ದುಗಳ ಕುಲದ ಪಕ್ಷಿಗಳ ಹಿಂಡುಗಳೂ ರಕ್ತವನ್ನು ಹೀರುವ ಪ್ರಾಣಿಗಳೂ – ನರಕದಲ್ಲಿ ಈತನ ಯಾತನಾ ಶರೀರವನ್ನು ಕಿತ್ತು ತಿನ್ನುತ್ತಾ ಹಿಂಸಿಸುತ್ತಿರುವವು. ಯಾವನು ಸ್ವಾಯಂಭುವಮನುವು ವಿಧಿಸಿರುವ ದಶವಿಧವಾದ ಧರ್ಮಮರ್ಯಾದೆಗಳನ್ನು ಮೀರಿ ಸ್ವೇಚ್ಛೆಯಿಂದ ನಡೆಯುವನೋ ಅವನು ಪಿತೃಲೋಕದಲ್ಲಿ ಅಸಿಪತ್ರವನವನ್ನು ಸೇರಿ ಅತ್ಯಂತವಾದ ದುಃಖವನ್ನು ಅನುಭವಿಸುವನು.

* * * * *

# 42. ವ್ಯಾಸರು ಶುಕನಿಗೆ ಮಾಡಿದ ಉಪದೇಶ*

## (1)

"ವ್ಯಾಸರು ಮತ್ತೂ ಇಂತೆಂದರು: (ದಶವಿಧಧರ್ಮಗಳನ್ನು ಉಲ್ಲಂಘಿಸಿ ಸ್ವೇಚ್ಛೆಯಿಂದ ನಡೆಯುವಾತನು) ಸುಡುತ್ತಿರುವ ವೈತರಣೀನದಿಯಲ್ಲಿ ಮುಳುಗಿ, ಅಸಿಪತ್ರವನದಲ್ಲಿ ಕತ್ತರಿಸಿದ ಅಂಗಗಳುಳ್ಳವನಾಗಿ ಪರಶುವನದಲ್ಲಿ ಒರಗಿಬಿದ್ದು ಬಹಳವಾಗಿ ಸಂಕಟಪಡುತ್ತಾ ಇರುವನು.

ದೊಡ್ಡದೊಡ್ಡ ಮಾತುಗಳನ್ನು ಆಡುತ್ತಿರುವೆ, ಆದರೆ ಪರಮಪುರುಷಾರ್ಥದ ಕಡೆಗೆ ದೃಷ್ಟಿಯನ್ನು ಹಾಕದೆ ಇರುವೆಯಲ್ಲ! ಮೃತ್ಯುವು ಕೊನೆಗೂ ಬಂದೇ ಬರುವದೆಂಬುದನ್ನು ಅರಿಯದೆ ಇರುತ್ತೀಯೆ! ಸುಮ್ಮನೆ ಕುಳಿತಿರುವೆಯಲ್ಲ! ಮಹಾಭಯವು ಎದ್ದು ನಿಂತುಕೊಂಡಿದೆ; ದಾರುಣವಾದ ಮಹಾಶತ್ರುವದು, ಸುಖಕ್ಕಾಗಿ ಪ್ರಯತ್ನಿಸು. ಸತ್ತಬಳಿಕ ಯಮರಾಜನ ಅಪ್ಪಣೆಯಂತೆ ನಿನ್ನನ್ನು ಅಲ್ಲಿಗೆ ಕರೆದುಕೊಂಡುಹೋಗುವರು. ನಿನ್ನ ಬಂಧುಬಾಂಧವರಸಹಿತ ನಿನಗೆ ದುಃಖವಾದೀತೆಂಬುದನ್ನೂ ಲೆಕ್ಕಿಸದೆ ಅವನು ನಿನ್ನ ಪ್ರಾಣವನ್ನು ಅಪಹರಿಸುವನು; ಅವನನ್ನು ತಡೆಯುವವರು ಯಾರೂ ಇಲ್ಲ. ಯಮನ ಮುಂದೆ ಕಾಲರೂಪಿಯಾದ ಪ್ರಚಂಡವಾಯು ಮುಂದುಮುಂದಕ್ಕೆ ಬೀಸುತ್ತಾ ಸಂಚರಿಸುತ್ತಿರುವದು. ಮೊದಲು ನಿನ್ನನ್ನೊಬ್ಬನನ್ನೇ ಒಯ್ಯುವರು. ಆದ್ದರಿಂದ ಪರಗತಿಗೆ ಸಾಧನವನ್ನು ಮಾಡಿಕೊ! ಹಿಂದಕ್ಕೆ ನಿನ್ನಬಳಿ ಬೀಸುತ್ತಿದ್ದ ಅಂತಕನೆಂಬ ಚಂಡಮಾರುತನು ಈಗಲೂ ಓಡುತ್ತಿರುತ್ತಾನೆ. ಮಹಾಭಯವು ಬಂದಾಗ ನಿನಗೆ ದಿಗ್ಭ್ರಮೆಯಾಗುವದು, ವ್ಯಾಕುಲಿತನಾಗಿ ನಡೆಯುವ ನಿನ್ನ ಕಿವಿಯು ಕಿವುಡಾಗುವದು,ಅಷ್ಟರೊಳಗೆ ಮಗುವೆ, ಉತ್ತಮಸಮಾಧಿಯನ್ನು ಸಂಪಾದಿಸಿಕೊ! ನೀನು ಮಾಡಿರುವ ಶುಭಾಶುಭಕರ್ಮಗಳ ಫಲವನ್ನು ಅನುಭವಿಸಿ ಸಂತಾಪಗೊಳ್ಳುವ ಮೊದಲೇ ಕೇವಲ ಜ್ಞಾನನಿಧಿಯನ್ನು ರಕ್ಷಿಸಿಕೊ; ನಿನ್ನ ಶರೀರವನ್ನು ಮುಪ್ಪು ಜರ್ಝರಿತವಾಗಿ ಮಾಡುವ ಮೊದಲೇ, ಶರೀರದ ಬಲವನ್ನು ಅಪಹರಿಸುವ ಮುಂಚೆಯೇ ಜ್ಞಾನನಿಧಿಯನ್ನು ಕೂಡಿಹಾಕಿಕೊ!

---

* ಸಂಪುಟ 41; ಸಂಚಿಕೆ 6; ಫೆಬ್ರವರಿ 1972

ರೋಗಗಳ ಸಹಾಯದಿಂದ ಶರೀರವನ್ನು ಅಂತಕನು ನಾಶಮಾಡಿ ಪ್ರಾಣಕ್ಷಯವನ್ನು ಮಾಡುವದರೊಳಗೇ ಹೆಚ್ಚಿನ ತಪಸ್ಸನ್ನು ಮಾಡಿಕೊ.

ಭಯಂಕರವಾದ ರೋಗಗಳು ಮನುಷ್ಯದೇಹದಕಡೆಗೆ ಎಲ್ಲಾ ಕಡೆಯಿಂದಲೂ ಓಡಿಬರುವದರೊಳಗೇ ಪುಣ್ಯಕರ್ಮವನ್ನಾಚರಿಸುವದಕ್ಕೆ ಯತ್ನಿಸು. ಒಂಟಿಯಾಗಿ ಕಗ್ಗತ್ತಲೆಯನ್ನು ನೀನು ನೋಡುವದರೊಳಗೇ, ಬೆಟ್ಟದ ಶಿಖರದಮೇಲೆ ಚಿನ್ನದ ಮರಗಳು ಕಣ್ಣಿಗೆ ಬೀಳುವ ಮುಂಚೆಯೇ ತ್ವರೆಮಾಡು. ಮಗನೆ, ಕೆಟ್ಟ ಸಹವಾಸಿಗಳೂ ಒಳ್ಳೆಯವರಂತೆ ತೋರುವ ಶತ್ರುಗಳೂ, ಕಾಣಿಸಿಕೊಂಡು ಸನ್ಮಾರ್ಗದಿಂದ ನಿನ್ನನ್ನು ಅತ್ತ ಸೆಳೆಯುವ ಮೊದಲೇ ಪುಣ್ಯಕಾರ್ಯಕ್ಕೆ ಪ್ರಯತ್ನಮಾಡು.

ಯಾವ ಧನಕ್ಕೆ ರಾಜನಿಂದಲೂ ಕಳ್ಳರಿಂದಲೂ ಅಂಜಿಕೆಯಿರುವದಿಲ್ಲವೋ, ಸತ್ತವನನ್ನು ಯಾವದು ಬಿಟ್ಟುಹೋಗುವದಿಲ್ಲವೋ ಆ ಧನವನ್ನು ಸಂಪಾದಿಸಿಕೊ! ನಿನ್ನ ಕರ್ಮದಿಂದ ಸಂಪಾದಿಸಿದ ಆ ಹಣವನ್ನು ನೀನೂ ನಿನ್ನನ್ನು ಅದೂ ಬಿಟ್ಟು ಅಗಲುವಂತಿರುವದಿಲ್ಲ. ಯಾವದು ಆ ಪರಸುಖವನ್ನು ಬೆಳಗಿ ತೋರುವದೋ, ಅದನ್ನೇ ಅವನು ಭುಂಜಿಸುತ್ತಾನೆ. ಮಗನೆ, ಯಾವದರಿಂದಲೇ ಪರಲೋಕದಲ್ಲಿ ಜೀವಿಸಿಬೇಕಾಗಿರುವದೋ, ಅದನ್ನೇ ಕೊಡಬೇಕು, ಆ ನಾಶರಹಿತವಾದ, ಧ್ರುವವಾದ ಧನವನ್ನೇ ನೀನೂ ಸಂಪಾದಿಸಿಕೊ. ಮಹಾಜನರಿಗೆಂದು ಯಾವ ಪಾಕಮಾಡುತ್ತಿರುವೆಯೊ, ಯಾವದು ಪಕ್ವವಾಗದಿದ್ದರೆ ಅಷ್ಟರೊಳಗೇ ನಿನಗೆ ಮರಣಕಾಲವು ಬಂದೊದಗಬಹುದೊ, ಅದನ್ನು ಈಗಲೇ ಮಾಡುವದಕ್ಕೆ ತ್ವರೆಮಾಡು. ತಾಯಿ, ಮಕ್ಕಳು, ನೆಂಟರು, ಪರಿಚಯವುಳ್ಳ ಪ್ರಿಯಜನರು–ಯಾರೂ ಸಂಕಟಸ್ಥಿತಿಯಲ್ಲಿ ಹಿಂದೆ ಬರುವದಿಲ್ಲ. ಮಗನೆ, ಮೊದಲು ಮಾಡಿದ ಶುಭಾಶುಭಕರ್ಮವಿರುವದಲ್ಲ, ಅದೇ ಪರಲೋಕಕ್ಕೆ ಹೋಗುವವನೊಡನೆ ಬರುವದು.

ಶುಭಾಶುಭಕರ್ಮದಿಂದ ರಾಶಿಹಾಕಿದ ಚಿನ್ನಬೆಳ್ಳಿಗಳೂ ಅವನ ದೇಹವು ನಾಶವಾಗಲು ಯಾವ ಕೆಲಸಕ್ಕೂ ಬರುವದಿಲ್ಲ. ಪರಲೋಕಕ್ಕೆ ಹೋಗಲಿರುವ ನಿನಗೆ ಮಾಡಿದ ಅಥವಾ ಮಾಡದೆಬಿಟ್ಟಿರುವ ಕರ್ಮಕ್ಕೆ ನಿನಗಿಂತ ಯಾವದೂ

ಸಾಕ್ಷಿಯಾಗಿರುವದಿಲ್ಲ. ಮಾನವದೇಹವನ್ನು ಬಿಟ್ಟು ಆ ಲೋಕಕ್ಕೆ ಹೋಗುತ್ತಿರುವವನ ಬುದ್ಧಿಚಕ್ಷುಸ್ಸಿಗೆ ಇದೆಲ್ಲವೂ ಗೋಚರವಾಗುತ್ತಿರುವದು.

ಈ ಲೋಕದಲ್ಲಿ ಅಗ್ನಿ, ಸೂರ್ಯ, ವಾಯು– ಈ ಮೂವರೂ ಶರೀರವನ್ನು ಆಶ್ರಯಿಸಿಕೊಂಡಿರುವರು. ಅವರೇ (ಜೀವನು) ಮಾಡುವ ಧರ್ಮವನ್ನು ಕಾಣುತ್ತಿರುವರು, ಅವರೇ ಅವನಿಗೆ ಸಾಕ್ಷಿಗಳೂ ಆಗಿರುತ್ತಾರೆ. ಹಗಲುರಾತ್ರಿಗಳು ಎಲ್ಲವನ್ನೂ ಸ್ಪರ್ಶಿಸುತ್ತಾ, ಪ್ರಕಾಶವಾದ ಮತ್ತು ಗುಟ್ಟಿನ ವ್ಯಾಪಾರಗಳಲ್ಲೆಲ್ಲ ವ್ಯಾಪಾರವನ್ನು ಮಾಡುತ್ತಾ ಎಲ್ಲೆಲ್ಲಿಯೂ ಸಂಚರಿಸುತ್ತಿರುವವು. ಆದ್ದರಿಂದ ನಿನ್ನ ಧರ್ಮವನ್ನೇ ಕಾಪಾಡಿಕೊ.

ಪರಲೋಕದ ಮಾರ್ಗದಲ್ಲಿ ಅನೇಕ ದರೋಡೆಖೋರರಿರುವರು. ವಿರೂಪರೂಪದ ರೌದ್ರಕಾಡುನೊಣಗಳು ಮುತ್ತಿಕೊಳ್ಳುತ್ತಿರುವವು. ಅಲ್ಲಿ ತನ್ನ ಕರ್ಮವೊಂದೇ ಕಾಪಾಡಬೇಕಾಗಿರುತ್ತದೆ; ಆದ್ದರಿಂದ ಸ್ವಕರ್ಮವನ್ನೇ ಕಾಪಾಡಿಕೊ. ಅಲ್ಲಿ ಸ್ವಕರ್ಮಕ್ಕೆ ಒಬ್ಬರಿಗೊಬ್ಬರು ಪಾಲುದಾರರಾಗುವಂತಿರುವದಿಲ್ಲ. ಇಲ್ಲಿ ತಾನು ಮಾಡಿದ ಕರ್ಮದ ಫಲವನ್ನು ತಾನೇ ಅನುಭವಿಸಬೇಕಾಗಿರುವದು. ಹೇಗೆ ಮಹರ್ಷಿಗಳೊಡನೆ ಅಪ್ಸರಸ್ತ್ರೀಯರು ಅವರ ತಪಃಫಲವನ್ನು ಅನುಭವಿಸುವರೋ ಹಾಗೆಯೇ, ಪುಣ್ಯಾತ್ಮರು ವಿಮಾನಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಾ ತಮ್ಮ ಕರ್ಮದ ಫಲವನ್ನು ಅನುಭವಿಸುತ್ತಿರುವರು. ಈ ಜನ್ಮದಲ್ಲಿ ಹೇಗೆ ಸಂಸ್ಕೃತಾಂತಃಕರಣರೂ ಪಾಪರಹಿತರೂ ಆದ ಜನರು ಎಂಥ ಪುಣ್ಯಕರ್ಮಗಳನ್ನು ಮಾಡಿರುವರೋ ಅದಕ್ಕನುಗುಣವಾಗಿ ವಿಶುದ್ಧಯೋನಿಗಳಲ್ಲಿ ಹುಟ್ಟಿ ಫಲಗಳನ್ನು ಪಡೆದುಕೊಳ್ಳುವರು. ಗೃಹಸ್ಥಧರ್ಮಮರ್ಯಾದೆಯನ್ನು ಕಾಪಾಡಿಕೊಳ್ಳುವದರಿಂದ ಪ್ರಜಾಪತಿ, ಬೃಹಸ್ಪತಿ, ಅಥವಾ ಇಂದ್ರನ ಸಾಲೋಕ್ಯವನ್ನು ಹೊಂದುವರು. ಸಾವಿರಸಲ, ಇನ್ನೂ ಹೆಚ್ಚು ಬಾರಿ, ನಿನಗಾಗಿ ಇದನ್ನು ಹೇಳಿಯೇನು; ಸರ್ವರನ್ನೂ ಪಾವನಗೊಳಿಸುವ ಧರ್ಮವು ಮೋಹವಿಲ್ಲದ ಬುದ್ಧಿವಂತನನ್ನೂ ಧರ್ಮಾತ್ಮನನ್ನೂ ಪುಣ್ಯಲೋಕಕ್ಕೆ ಒಯ್ದಿರುತ್ತದೆ. ನಿನಗೆ ಇಪ್ಪತ್ತುನಾಲ್ಕು ವರ್ಷವಾಗಿ, ಇಪ್ಪತ್ತೈದನೆಯ ವರ್ಷವು ಬಂದಿದೆ. ವಯಸ್ಸು ಕಳೆಯುತ್ತಲೇ ಇದೆ. ಧರ್ಮವನ್ನು ಕೂಡಿಹಾಕಿಕೊ, ಎಚ್ಚರಿಕೆ ತಪ್ಪಿರುವ ನಿನ್ನಲ್ಲಿ ಇಂದ್ರಿಯದ್ವಾರವುಳ್ಳ ಕಾಮನು ಗುಂಪು ಕಟ್ಟಿ ನಿನ್ನನ್ನು ಹಿಡಿದುಕೊಳ್ಳಲು ನಿಂತಿದಾನೆ;

ಧರ್ಮಪಾಲನೆಗೆ ತ್ವರೆಮಾಡು. ಆಗ ನೀನೇ ಹಿಂದೆ ಬರುವವನು; ನೀನೆ ಮುಂದೆ ನಡೆಯುವವನು; ಹಾಗೆ ಒಂಟಿಗನಾಗಿ ಹೋಗಬೇಕಾದ ನಿನಗೆ ನನ್ನವರು ಅಥವಾ ಪರರು– ಎಂಬುದರಿಂದ ಏನು ಪ್ರಯೋಜನ? ಒಂಟಿಗರಾಗಿ ಹೋಗುವವರಿಗೆ ಭಯಗಳ ನಡುವೆ ಯಾವದೊಂದೇ ಪ್ರಯೋಜನಕಾರಿಯೋ ಅಂಥ ಧರ್ಮಸಿದ್ಧಿಯನ್ನು ಕೂಡಿಟ್ಟುಕೊ, ಕಾಲನು ತುದಿಮೊದಲೆನ್ನದೆ ಬಂಧುಗಳನ್ನೆಲ್ಲ ಅಪಹರಿಸುವನು; ಅವನನ್ನು ತಡೆಗಟ್ಟುವವರು ಯಾರೂ ಇರುವದಿಲ್ಲ. ಧರ್ಮವೆಂಬ ಉತ್ತಮಸಿದ್ಧಿಯನ್ನು ಕೂಡಿಹಾಕು.

ಪುತ್ರನೆ, ಸ್ವಾನುಭವಕ್ಕೂ ಯುಕ್ತಿಗೂ ಅನುಗುಣವಾಗಿರುವ ಈ ತತ್ತ್ವಜ್ಞಾನವನ್ನು ನಿನಗೆ ಹೇಳಿರುತ್ತೇನೆ. ಅದರಂತೆ ಆಚರಣೆಮಾಡು. ಯಾವನು ಸ್ವಕರ್ಮದಿಂದ ಧರ್ಮವನ್ನು ಭರಿಸುವನೋ ಯಾರಿಗಾದರೂ ದಾನಮಾಡುವನೋ, ಅವನಲ್ಲಿ ಬುದ್ಧಿಗೆ ಮೋಹವನ್ನುಂಟುಮಾಡದ ಗುಣಗಳು ಬಂದು ಸೇರಿಕೊಳ್ಳುವವು. ಶಾಸ್ತ್ರಾರ್ಥಜ್ಞಾನವನ್ನು ಪಡೆದುಕೊಂಡು ಪುಣ್ಯಕರ್ಮಗಳನ್ನು ಮಾಡುತ್ತಿರುವ ಅಂಥವನಿಗಾಗಿ ಈ ಜ್ಞಾನವನ್ನು ಹೇಳಿರುವೆನು. ಕೃತಜ್ಞನಿಗೇ ಉಪದೇಶವು ಸಫಲವಾಗುವದು.

* * * * *

## 42. ವ್ಯಾಸರು ಶುಕನಿಗೆ ಉಪದೇಶವನ್ನು ಕೊಟ್ಟಿದ್ದು* (2)

(ವ್ಯಾಸರು ಮತ್ತೂ ಇಂತೆಂದರು): ಊರಿನಲ್ಲಿ ವಾಸಮಾಡಿಕೊಂಡಿರುವದರಲ್ಲಿಯೇ ನಿರತನಾಗಿರುವದೆಂಬ ಇದೇ ಬಂಧಕಾರಿಯಾದ ಹಗ್ಗವು. ಪುಣ್ಯವಂತರು ಇದನ್ನು ಕತ್ತರಿಸಿಕೊಂಡು ಹೊರಟುಹೋಗುವರು; ಪಾಪಿಗಳು ಇದನ್ನು ಕತ್ತರಿಸಲಾರರು. ಎಲೈ-ಮಗನೆ, ಸಾಯಲಿರುವ ನಿನಗೆ ಧನದಿಂದಾಗಬೇಕಾದದ್ದೇನು? ನೆಂಟರಿಂದಲಾಗಬೇಕಾದದ್ದೇನಿದೆ? ಮಕ್ಕಳಿಂದೇನು? ಗುಹೆಯಲ್ಲಿ ಹೊಕ್ಕಿರುವ ಆತ್ಮನನ್ನು ಹುಡುಕು. ನಿನ್ನ ಅಜ್ಜಂದಿರೆಲ್ಲರೂ ಎಲ್ಲಿಗೆ ಹೋಗಿರುತ್ತಾರೆ?

* ಸಂಪುಟ 41; ಸಂಚಿಕೆ 7; ಮಾರ್ಚ್ 1972

ನಾಳೆ ಮಾಡಬೇಕಾಗಿರುವದನ್ನು ಇಂದೇ ಮಾಡಬೇಕು; ಮಧ್ಯಾಹ್ನದ ಮೇಲೆ ಮಾಡಬೇಕಾದದ್ದನ್ನು ಬೆಳಗ್ಗೆಯೇ ಮಾಡಬೇಕು. ಏಕೆಂದರೆ 'ಇವನು ಏನು ಮಾಡಿದಾನೆ, ಇವನು ಏನು ಮಾಡಿಲ್ಲ' ಎಂಬುದನ್ನು ಮೃತ್ಯುವು ನೋಡುವದಿಲ್ಲ.

ನೆಂಟರಿಷ್ಟರೂ, ಜ್ಞಾನಿಗಳೂ, ಬೇಕಾದವರೂ– ಹಿಂದೆ ಬಂದು ಬೆಂಕಿಯಲ್ಲಿ ಹಾಕಿ ಹಿಂತಿರುಗುವರು, ನಾಸ್ತಿಕರನ್ನೂ ಮರುಕವಿಲ್ಲದವರನ್ನೂ ಪಾಪಬುದ್ಧಿಯಲ್ಲಿ ರತರಾಗಿರುವವರನ್ನೂ ಅತ್ತಸರಿಯಿಸು; ವಿಶ್ವಾಸದಿಂದ ಪರಗತಿಯನ್ನು ಪಡೆಯಬೇಕೆಂದು ನಿರಾಲಸ್ಯನಾಗು.

ಹೀಗೆ ಲೋಕವೆಲ್ಲವೂ ಕಾಲನ ಪೆಟ್ಟಿಗೆ ಸಿಕ್ಕಿಕೊಂಡು ಸಂಕಟಪಡುತ್ತಿರುವದರಿಂದ ಹೆಚ್ಚಿನ ಧೈರ್ಯವನ್ನಲಂಬಿಸಿಕೊಂಡು ಸರ್ವಪ್ರಕಾರದಿಂದಲೂ ಧರ್ಮವನ್ನೇ ಮಾಡುತ್ತಿರು.

ಈ ತತ್ತ್ವಜ್ಞಾನದ ಸಾಧನವನ್ನು ಯಾವ ಮಾನವನು ಸರಿಯಾಗಿ ಅರಿತುಕೊಂಡಿರುವನೋ ಅವನು ಇಲ್ಲಿ ಸ್ವಧರ್ಮವನ್ನು ಆಚರಿಸಿ ಪರಲೋಕದಲ್ಲಿ ಸುಖವನ್ನೈದುವನು.

ದೇಹವು ನಾಶವಾದ ಬಳಿಕ ಮರಣವಾಗುವದೆಂಬುದರ ನಿಜವನ್ನು ಅರಿತವರಿಗೆ, ಸನ್ಮಾರ್ಗದಲ್ಲಿ ನಡೆಯವವರಿಗೆ ನಾಶವೆಂಬುದಿಲ್ಲ. ಧರ್ಮವನ್ನು ಯಾವನು ಬೆಳೆಯಿಸಿಕೊಳ್ಳುತ್ತಿರುವನೋ ಅವನೇ ಪಂಡಿತನು. ಯಾವನು ಧರ್ಮದಿಂದ ಚ್ಯುತನಾಗುವನೋ ಅವನಿಗೆ ದಿಕ್ಕುತೋಚದೆ ಇರುವದು. ಕರ್ಮಮಾರ್ಗದಲ್ಲಿ ಯಾವನು ಶುಭಾಶುಭಕರ್ಮಗಳನ್ನು ಮಾಡಿರುವನೋ ಅವನು ತಾನು ಮಾಡಿದ ಕರ್ಮದ ಫಲವನ್ನು ಅನುಭವಿಸುವನು. ಕೆಟ್ಟಕರ್ಮವನ್ನು ಮಾಡಿದಾತನು ನರಕವನ್ನು ಪಡೆಯುತ್ತಾನೆ, ಧರ್ಮದ ಪಾರವನ್ನು ಕಂಡವನು ಸ್ವರ್ಗವನ್ನು ಹೊಂದುತ್ತಾನೆ. ಸ್ವರ್ಗಕ್ಕೆ ಸೋಪಾನವಾಗಿರುವ ಮನುಷ್ಯಜನ್ಮವನ್ನು ಪಡೆದುಕೊಂಡವನು ಮತ್ತೆ ಕೆಳಗೆ ಬೀಳದಂತೆ ಮನಸ್ಸನ್ನು ಸಮಾಧಾನಗೊಳಿಸಿಕೊಳ್ಳಬೇಕು.

ಯಾವನಿಗೆ ಸ್ವರ್ಗಮಾರ್ಗಾನುಸಾರಿಯಾದ ಬುದ್ಧಿಯು ತಪ್ಪುಹಾದಿಯಲ್ಲಿ ಹೋಗುವದಿಲ್ಲವೋ, ಆತನನ್ನು "ಪುಣ್ಯಕರ್ಮವನ್ನು ಆಚರಿಸಿದವನ"– ಎಂದು

ಬಲ್ಲವರು ಕರೆಯುತ್ತಾರೆ; ಅವನು ಮಕ್ಕಳಿಗೂ ನೆಂಟರಿಗೂ ಶೋಚನೀಯ ನಾಗಿರುವದಿಲ್ಲ. ಯಾವನ ಬುದ್ಧಿಯು ಅಡೆತಡೆಯಿಲ್ಲದೆ ನಿಶ್ಚಯವನ್ನೇ ಅವಲಂಬಿಸಿಕೊಂಡಿರುವದೋ, ಅವನಿಗೆ ಸ್ವರ್ಗದಲ್ಲಿ ಸ್ಥಾನವಿರುತ್ತದೆ; ಅವನಿಗೆ ಮಹಾಭಯವಪ್ಪುಬುದಿರುವದಿಲ್ಲ. ಯಾರು ತಪೋವನಗಳಲ್ಲಿ ಹುಟ್ಟಿ, ಆ ತಪೋವನಗಳಲ್ಲಿಯೇ ಸಾಯುವರೋ, ಅವರಿಗೆ ಕಾಮಭೋಗಗಳ ಅರಿವೇ ಇಲ್ಲದಿರುವದರಿಂದ ಅಲ್ಪತರವಾದ ಧರ್ಮದ ಪ್ರಾಪ್ತಿಯಾಗುವದು; ಯಾವನು ಭೋಗಗಳನ್ನು ಬಿಟ್ಟು ಶರೀರದಿಂದ ತಪಸ್ಸನ್ನು ಮಾಡುವನೋ ಅವನಿಗೆ ಸಿಕ್ಕದ್ದೆಂಬುದೇ ಇಲ್ಲ; ಅದಕ್ಕೇ ಹೆಚ್ಚಿನ ಫಲವೆಂದು ನನ್ನ ಮತವು.

ತಾಯಿತಂದೆಗಳು ಸಾವಿರಾರುಮಂದಿ ಹಿಂದೆ ಆಗಿಹೋಗಿರುವರು, ಹೆಂಡಿರುಮಕ್ಕಳು ನೂರಾರುಮಂದಿ ಆಗಿಹೋಗಿರುವರು, ಮುಂದೆಯೂ ಆಗುವರು; ನಾವು ಯಾವನೊಬ್ಬನಿಗೂ ಸೇರದವರು, ನಾವಾದರೂ ಅವರಲ್ಲಿ ಯಾರಿಗೆ ಸೇರಿದವರು? ನಾನು ಒಬ್ಬನೇ, ನನಗೆ ಸಂಬಂಧಿಯಾಗಿರುವನು ಯಾವನೂ ಇಲ್ಲ; ನಾನು ಮತ್ತೆ ಯಾವನೊಬ್ಬನಿಗೂ ಸೇರಿದವನಲ್ಲ. ನಾನು ಯಾರವನೆಂಬುದಕ್ಕೆ ಒಬ್ಬನನ್ನೂ ಕಾಣೆನು, ಯಾವನು ತನ್ನವನೆಂಬುದಕ್ಕೂ ಒಬ್ಬನನ್ನೂ ಕಾಣೆನು. ಅವರಿಗೆ ನೀನು ಮಾಡತಕ್ಕದ್ದು ಏನೂ ಇರುವದಿಲ್ಲ; ಅವರೂ ನಿನಗಾಗಿ ಮಾಡತಕ್ಕದ್ದು ಏನೂ ಇರುವದಿಲ್ಲ. ಅವರು ತಾವು ತಾವು ಮಾಡಿದ ಕರ್ಮದೊಡನೆ ಹೋಗಿರುವರು, ನೀನೂ ನೀನು ಮಾಡಿದ ಕರ್ಮದೊಡನೆ ಹೋಗುವೆ!

ಈ ಲೋಕದಲ್ಲಿ ಯಾವನು ಧನವಂತನೋ ಅವನ ಸ್ವಜನರು ತನ್ನವರೆನಿಸು ವರು; ದರಿದ್ರರು ಬದುಕಿರುವಾಗಲೇ ಅವರ ಸ್ವಜನವು ಕಾಣದೆ ಹೋಗುವದು. ಮನುಷ್ಯನು ಹೆಂಡತಿಗಾಗಿ ಕೆಟ್ಟ ಕರ್ಮವನ್ನು ರಾಶಿಮಾಡಿಕೊಳ್ಳುತ್ತಾನೆ. ಅದರಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಕ್ಲೇಶವನ್ನು ಅನುಭವಿಸುತ್ತಾನೆ. ತನ್ನ ಕರ್ಮದಿಂದಲೇ ಮನುಷ್ಯನು ಈ ಜೀವಲೋಕವನ್ನು ಭಿನ್ನಾಭಿನ್ನರೂಪದಿಂದ ಕಾಣುತ್ತಿರುತ್ತಾನೆ. ಆದ್ದರಿಂದ ಮಗನೆ, ನಾನು ಹೇಳಿದ್ದೆಲ್ಲವನ್ನೂ ಆಚರಿಸು, ಇದೆಲ್ಲವು ಕರ್ಮಭೂಮಿಯೆಂದು ಕಂಡುಕೊಂಡಿರುವಾತನು ಪರಲೋಕಪ್ರಾಪ್ತಿ ಯನ್ನು ಬಯಸುವನಾದರೆ ಶುಭಕರ್ಮಗಳನ್ನು ಆಚರಿಸಬೇಕು. ಮಾಸ, ಋತು– ಎಂಬಿವುಗಳನ್ನು ತಿರುಗಿಸುತ್ತಾ ಹಗಲುರಾತ್ರೆಗಳೆಂಬ ಕಟ್ಟಿಗೆಯನ್ನು ಉಪಯೋಗಿಸಿ

ಕೊಂಡು ಸೂರ್ಯಾಗ್ನಿಯಿಂದ ಅವನವನ ಕರ್ಮಫಲಕ್ಕೆ ಸಾಕ್ಷಿಯಾಗಿರುವ ಅವುಗಳಿಂದ ಕಾಲನು ಪ್ರಾಣಿಗಳನ್ನು ಬಲಾತ್ಕಾರದಿಂದ ಬೇಯಿಸುತ್ತಿರುವನು. ಯಾವದನ್ನು ದಾನಮಾಡುವದಿಲ್ಲವೋ ತಾನೂ ಭೋಗಿಸುವದಿಲ್ಲವೋ ಅಂಥ ಧನದಿಂದ ಏನಾಗಬೇಕಾಗಿದ್ದಿದೆ? ಶತ್ರುವನ್ನು ಕೊಲ್ಲುವದಕ್ಕಾಗದೆ ಇರುವ ಸೈನ್ಯದಿಂದೇನಾಗಬೇಕಾಗಿದೆ? ಯಾವದರಿಂದ ಧರ್ಮವನ್ನಾಚರಿಸುವದಕ್ಕಾಗದೆ ಇರುವದೋ ಅಂಥಶಾಸ್ತ್ರಜ್ಞಾನದಿಂದಾಗಬೇಕಾದದ್ದೇನಿದೆ? ಯಾವನು ಜಿತೇಂದ್ರಿಯ ನಲ್ಲವೋ, ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವದಿಲ್ಲವೋ, ಅಂಥವನ ಆತ್ಮನು ಇದ್ದದ್ದರಿಂದಾದರೂ ಆಗಬೇಕಾದದ್ದೇನಿದೆ?"

ಭೀಷ್ಮರು ಹೇಳಿದರೇನೆಂದರೆ:–

ಎಲೈ ರಾಜನೆ, ಹೀಗೆಂದ ದ್ವೈಪಾಯನವ್ಯಾಸರ ಹಿತವಚನವನ್ನು ಕೇಳಿ, ಶುಕನು ಮೋಕ್ಷವನ್ನುಪದೇಶಿಸಿದ ತಂದೆಯನ್ನು ಬಿಟ್ಟು ಹೊರಟುಹೋದನು.

* * * * *

## ಭಾಗ – IV

# 43. ಶುಕವೃತ್ತಾಂತ*

### (323 ರಿಂದ 333)

### (1)

ಯುಧಿಷ್ಠಿರನಿಂತೆಂದನು: ಪಿತಾಮಹನೆ, ವ್ಯಾಸರಿಗೆ ಧರ್ಮಾತ್ಮನೂ ಮಹಾತಪಸ್ವಿಯೂ ಆದ ಶುಕನು ಹುಟ್ಟಿದ್ದು ಹೇಗೆ? ಮತ್ತು ಆತನು ಪರಮಸಿದ್ಧಾಂತವನ್ನು ಪಡೆದುಕೊಂಡದ್ದು ಹೇಗೆ ? ಅದನ್ನು ನನಗೆ ಹೇಳುವನಾಗು! ತಪೋಧನರಾದ ವ್ಯಾಸರು ಯಾವಾಕೆಯಲ್ಲಿ ಶುಕನನ್ನು ಪಡೆದರು? ನಾವು ಆ ಮಹಾತ್ಮನ ತಾಯಿ ಯಾರೆಂಬುದನ್ನಾಗಲಿ, ಆತನ ಶ್ರೇಷ್ಠವಾದ ಜನ್ಮವು ಹೇಗೆ ಆಯಿತೆಂಬುದನ್ನಾಗಲಿ ಕೇಳಿ ತಿಳಿದುಕೊಂಡಿಲ್ಲ. ಹುಡುಗನಾಗಿರುವಾಗಲೇ ಆ ಶುಕನಿಗೆ ಮನಸ್ಸು ಸೂಕ್ಷ್ಮಜ್ಞಾನವನ್ನು ಹೇಗೆ ಪಡೆಯಿತು? ಈ ಲೋಕದಲ್ಲಿ ಮತ್ತೆ ಯಾವಾತನಿಗೂ ಅಂಥ ಜ್ಞಾನವು ಹೀಗೆ ಏಕೆ ಉಂಟಾಗಿಲ್ಲ! ಎಲೈ ಮಹಾಮತಿಯೆ, ನನಗೆ ಇದನ್ನು ಕೇಳಿ ತಿಳಿದುಕೊಳ್ಳುವ ಇಚ್ಛೆಯುಂಟಾಗಿದೆ. ಉತ್ತಮವಾದ ಅಮೃತದಂತೆ ಇರುವ ನಿನ್ನ ವಾಕ್ಕನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಾಗಿರುವದೇ ಇಲ್ಲ. ಪಿತಾಮಹನೆ, ಶುಕನ ಮಾಹಾತ್ಮ್ಯವನ್ನೂ ಆತ್ಮಯೋಗ ವನ್ನೂ ವಿಜ್ಞಾನವನ್ನೂ ಇದ್ದದ್ದುಇದ್ದಂತೆ ಅನುಕ್ರಮವಾಗಿ ಹೇಳುವನಾಗು.

ಇದಕ್ಕೆ ಭೀಷ್ಮರಿಂತೆಂದರು: "ಅನೇಕ ವರ್ಷಗಳ ವಯಸ್ಸಾಗಿರು ವದರಿಂದಲಾಗಲಿ, ಧನದಿಂದಾಗಲಿ, ನೆಂಟರಿಷ್ಟರಿಂದಾಗಲಿ, ಋಷಿಗಳು ಧರ್ಮದ ಅನುಷ್ಠಾನವನ್ನು ಮಾಡಿದವರೆನಿಸಲಿಲ್ಲ. ಯಾವಾತನು ವೇದಪ್ರವಚನವನ್ನು ಉತ್ತಮವಾಗಿ ಮಾಡುವನೋ ಆತನೇ ನಮ್ಮಲ್ಲಿ ದೊಡ್ಡವನು. ಪಾಂಡವನೆ, ನೀನು ಕೇಳುತ್ತಿರುವೆಯಲ್ಲ, ಇದೆಲ್ಲಕ್ಕೂ ತಪಸ್ಸೇ ಕಾರಣವು. ಆ ತಪಸ್ಸು ಇಂದ್ರಿಯಗಳ ಸಂಯಮದಿಂದಲೇ ವೃದ್ಧಿಯಾಗುವದೇ ಹೊರತು ಬೇರೆಯ ಪ್ರಕಾರದಿಂದ ಹೆಚ್ಚಲಾರದು. ಇಂದ್ರಿಯಗಳಿಂದ ವಿಷಯಾಸಕ್ತಿಯನ್ನು ಮಾಡಿಕೊಳ್ಳುವದರಿಂದ

---

* ಸಂಪುಟ 41; ಸಂಚಿಕೆ 8; ಏಪ್ರಿಲ್ 1972

ದೋಷವನ್ನು ಹೊಂದುತ್ತಾನೆಂಬುದಕ್ಕೆ ಸಂಶಯವಿಲ್ಲ; ಆ ಇಂದ್ರಿಯಗಳನ್ನು ಬಿಗಿಹಿಡಿಯುವದರಿಂದಲೇ ಮನುಷ್ಯನು ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ. ಅಪ್ಪ, ಸಾವಿರ ಅಶ್ವಮೇಧಗಳಿಗೂ ನೂರು ವಾಜಪೇಯಗಳಿಗೂ ಯೋಗದ ವೀಸಪಾಲಿನಷ್ಟು ಫಲವೂ ಇರುವದಿಲ್ಲ.

ಈ ವಿಷಯಕ್ಕೆ ನಿಮಗೆ ಶುಕನ ಜನ್ಮದ ವೃತ್ತಾಂತವನ್ನೂ ಅವನ ಯೋಗದ ಫಲವನ್ನೂ, ಅವನಿಗೆ ಆದ, ಅಸಂಸ್ಕೃತಾಂತಃಕರಣವುಳ್ಳವರಿಗೆ ದೊರಕದೆ ಇರುವ, ಶ್ರೇಷ್ಠವಾದ ಗತಿಯನ್ನೂ ತಿಳಿಯಿಸುವೆನು.

ಪೂರ್ವದಲ್ಲಿ ಕರ್ಣಿಕಾರವನಗಳಿಂದ ತುಂಬಿದ್ದ ಮೇರುಪರ್ವತದ ಶಿಖರದ ಮೇಲೆ ಮಹಾದೇವನು ಭಯಂಕರವಾದ ಭೂತಗುಣಗಳಿಂದೊಡಗೂಡಿ ವಿಹರಿಸು ತ್ತಿದ್ದನು. ಆಗ ಪರ್ವತರಾಜನ ಮಗಳಾದ ಉಮಾದೇವಿಯೂ ಇರುತ್ತಿದ್ದಳು. ಅಲ್ಲಿ ಕೃಷ್ಣದ್ವೈಪಾಯನನು ದಿವ್ಯವಾದ ತಪಸ್ಸನ್ನು ಮಾಡುತ್ತಿದ್ದನು.

ಎಲೈ ಪುರುಸತ್ತಮನೆ, ಆತನು ಯೋಗದಿಂದ ಪರಮಾತ್ಮನಲ್ಲಿ ಪ್ರವಿಷ್ಟನಾಗಿ ಯೋಗಧರ್ಮದಲ್ಲಿ ತತ್ಪರನಾಗಿ ಪುತ್ರಪ್ರಾಪ್ತಿಗೆ ಧಾರಾಣಾಪೂರ್ವಕವಾಗಿ ತಪಸ್ಸನ್ನು ಮಾಡುತ್ತಿದ್ದನು. ಅಗ್ನಿಗೆ, ಪೃಥ್ವಿಗೆ, ಅಪ್ಪಿಗೆ, ವಾಯುವಿಗೆ ಅಥವಾ ಆಕಾಶಕ್ಕೆ ಸಮನಾದ ಧೈರ್ಯವುಳ್ಳ ಪುತ್ರನು ನನಗೆ ಆಗಬೇಕು– ಎಂದು ಸಂಕಲ್ಪಿಸಿ ಕೊಂಡಿದ್ದನು. ಹೀಗೆ ಸಂಕಲ್ಪದಿಂದಲೂ ಯೋಗದಿಂದಲೂ ಸಂಸ್ಕೃತವಾದ ಅಂತಃಕರಣವಿಲ್ಲದವನಿಗೆ ಪಡೆಯುವದಕ್ಕೆ ಅಸಾಧ್ಯವಾದ ಉತ್ತಮವಾದ ತಪಸ್ಸನ್ನು ಮಾಡಿ ದೇವೇಶನಾದ ಮಹಾದೇವನನ್ನು ಪ್ರಾರ್ಥಿಸಿಕೊಂಡನು. ವಾಯ್ವಾಹಾರನಾಗಿ ಆ ಸಮರ್ಥನಾದ ಮುನಿಯು ನೂರು ವರ್ಷಗಳವರೆಗೆ ತಪಸ್ಸುಮಾಡುತ್ತಾ ಬಹುರೂಪನಾದ ಉಮಾಪತಿಯಾದ ಮಹಾದೇವನನ್ನು ಆರಾಧಿಸಿದನಂತೆ.

ಅಲ್ಲಿ ಎಲ್ಲಾ ಬ್ರಹ್ಮರ್ಷಿಗಳು, ರಾಜರ್ಷಿಗಳು, ಆದಿತ್ಯರು, ರುದ್ರರು, ಸೂರ್ಯಚಂದ್ರರು, ವಸುಗಳು, ಮರುತ್ತರು, ಸಾಗರಗಳು, ನದಿಗಳು, ಅಶ್ವಿನೀ ದೇವತೆಗಳು, ದೇವಗಂಧರ್ವರು, ಹಾಗೂ ನಾರದಪರ್ವತರುಗಳು, ವಿಶ್ವಾವಸು ವೆಂಬ ಗಂಧರ್ವನು, ಸಿದ್ಧರುಗಳು, ಅಪ್ಸರರುಗಳು– ಈ ಎಲ್ಲರೂ ಇರುತ್ತಿದ್ದರು. ಅಲ್ಲಿ ಮಹಾದೇವನಾದ ರುದ್ರನು ಕರ್ಣಿಕಾರಪುಷ್ಪದ ಮಾಲಿಕೆಯನ್ನು ಧರಿಸಿ

ಬೆಳದಿಂಗಳಿಂದೊಡಗೂಡಿದ ಚಂದ್ರನಂತೆ ಶೋಭಿಸುತ್ತಿದ್ದನು. ಅಂಥ ರಮಣೀಯ ವಾದ, ದೇವರ್ಷಿಗಳಿಂದ ಕಿಕ್ಕಿರಿದಿದ್ದ ದಿವ್ಯವನದಲ್ಲಿ ಆ ವ್ಯಾಸಮಹರ್ಷಿಯು ಚ್ಯುತಿಯಿಲ್ಲದೆ ಪರಮಯೋಗವನ್ನು ಅನುಷ್ಠಾನಮಾಡುತ್ತ ಇರುತ್ತಿದ್ದನು. ಆತನಿಗೆ ಪ್ರಾಣಹಾನಿಯಾಗಲಿಲ್ಲ, ಆಯಾಸವೂ ಆಗಲಿಲ್ಲ.

ಅದನ್ನು ಕಂಡರೆ ಮೂರುಲೋಕದವರೂ ಬೆರಗಾಗುತ್ತಿರುವಂತಿತ್ತು. ಯೋಗಯುಕ್ತನೂ ಅಪರಿಮಿತತೇಜಸ್ವಿಯೂ ಆಗಿದ್ದ ಆತನ ಜಟೆಗಳು ಅಗ್ನಿಯ ಜ್ವಾಲೆಗಳಂತೆ ಹೊಳೆಯುತ್ತ ಥಳಥಳಿಸುವಂತೆ ಕಾಣುತ್ತಿದ್ದವು. ಇದನ್ನು ನನಗೆ ಭಗವಂತನಾದ ಮಾರ್ಕಂಡೇಯಮುನಿಯು ಹೇಳಿದನು. ಆತನು ನನಗೆ ದೇವತೆಗಳ ವ್ಯವಹಾರವನ್ನು ಯಾವಾಗಲೂ ಹೇಳುತ್ತಿದ್ದನು. ಆ ಮಹಾತ್ಮನಾದ ಕೃಷ್ಣದ್ವೈಪಾಯನನ ತಪಸ್ಸಿನಿಂದ ಹೊಳಪುಗೊಂಡ ಈ ಜಟೆಗಳು ಈಗಲೂ ಬೆಂಕಿಯಂತೆ ಹೊಳೆಯುತ್ತಾ ಥಳಥಳಿಸುತ್ತಿರುವವಾಗಿ ಕಾಣಬರುತ್ತಿವೆ.

ಇಂಥ ಆತನ ತಪಸ್ಸಿನಿಂದಲೂ ಭಕ್ತಿಯಿಂದಲೂ ಮಹಾದೇವನು ಪ್ರಸನ್ನಾಂತಃಕರಣನಾಗಿ ಇವನಿಗೆ ಮನಸ್ಸಿನಿಂದ ಒಲಿದನು, ಮತ್ತು ಆ ತ್ರ್ಯಂಬಕನು ಹುಸಿನಗೆಯಿಂದ "ದ್ವೈಪಾಯನನೆ, 'ನಿನಗೆ ಇಂಥ ಮಗನು ಉಂಟಾಗುವನು'; ಅಗ್ನಿಯಂತೆಯೂ ವಾಯುವಿನಂತೆಯೂ ಭೂಮಿಯಂತೆಯೂ ಅಪ್ತತ್ವದಂತೆಯೂ ಶುದ್ಧನಾದ ಮಹಾಪುತ್ರನು ನಿನಗೆ ಆಗಲಿರುವನು, ನಿನ್ನ ಮಗನು ಭಗವದ್ಭಾವದಿಂದಲೇ ಭಾವಿತನಾಗಿ ಅವನಲ್ಲಿಯೇ ಬುದ್ಧಿಯುಳ್ಳಾತನಾಗಿ ಆತನನ್ನೇ ಆಶ್ರಯಿಸಿಕೊಂಡು ಮೂರು ಲೋಕಗಳನ್ನೂ ಆವರಿಸಿಕೊಂಡು ಕೀರ್ತಿಯನ್ನು ಪಡೆಯುವನು" ಎಂದು ನುಡಿದನು.

* * * * *

# 43. ಶುಕನಿಗೆ ವ್ಯಾಸರ ಉಪದೇಶ*

## (2)

ಬಳಿಕ ಭೀಷ್ಮರಿಂತೆಂದರು: ಎಲೈ ರಾಜನೆ, ಹೇಗೆ ಮಹಾದೇವನಿಂದ ವರವನ್ನು ಪಡೆದುಕೊಂಡ ಸತ್ಯವತೀಸುತರಾದ ವ್ಯಾಸರು ಅಗ್ನಿಯನ್ನು ಉತ್ಪತ್ತಿಮಾಡುವ ಇಚ್ಛೆಯಿಂದ ಎರಡು ಅರಣಿಗಳನ್ನು ತೆಗೆದುಕೊಂಡು ಕಡೆಯಲಾರಂಭಿಸಿದರು. ರಾಜನೆ, ಆಗ ತನ್ನ ತೇಜಸ್ಸಿನಿಂದ ಉತ್ತಮವಾದ ರೂಪವನ್ನು ಧರಿಸಿಕೊಂಡು ಬಂದಿದ್ದ ಘೃತಾಚಿಯೆಂಬ ಅಪ್ಸರಸ್ತ್ರೀಯನ್ನು ಆ ಭಗವಾನ್ ವ್ಯಾಸಮಹರ್ಷಿಗಳು ಕಂಡರು.

ಯುಧಿಷ್ಠಿರನೆ, ಹೀಗೆ ಆ ವನದಲ್ಲಿ ಅಪ್ಸರಸ್ತ್ರೀಯನ್ನು ಕಂಡ ಆ ಭಗವಾನ್ ವ್ಯಾಸರು ಕಾಮಮೋಹಿತರಾದರು. ಮಹಾರಾಜನೆ, ಆ ಘೃತಾಚಿಯೂ ಕಾಮದಿಂದ ಉದ್ವಿಗ್ನವಾದ ಮನಸ್ಸಿನ ಆ ವ್ಯಾಸರನ್ನು ಕಂಡು ಹೆಣ್ಣುಗಿಳಿಯ ರೂಪವನ್ನಾಂತು ಹತ್ತಿರಕ್ಕೆ ಬಂದಳು. ರೂಪಾಂತರದಿಂದ ತನ್ನನ್ನು ಮರೆಯಿಸಿಕೊಂಡಿದ್ದ ಅಪ್ಸರಳನ್ನು ಕಂಡು ಆ ಮಹರ್ಷಿಯು ದೇಹದಲ್ಲೆಲ್ಲ ಕಾಮವೇದನೆಯಿಂದ ವ್ಯಾಪ್ತನಾದನು. ಆ ಮುನಿಯು ಹೆಚ್ಚಿನ ಧೈರ್ಯದಿಂದ ಕಾಮವೇಗವನ್ನು ತಡೆದುಕೊಂಡರೂ ಅತ್ತಿತ್ತ ಚದುರಿದ ಮನಸ್ಸನ್ನು ಬಿಗಿಹಿಡಿಯಲಾರದೆಹೋದನು. ಆಗಬೇಕಾದದ್ದು ಆಗಲೇಬೇಕಾಗಿದ್ದರಿಂದ ಘೃತಾಚಿಯ ಶರೀರರೂಪದಿಂದ ಆಕರ್ಷಿತನಾಗಿಬಿಟ್ಟನು. ಅಗ್ನಿಯನ್ನು ಪ್ರಕಟಗೊಳಿಸುವದಕ್ಕೆಂದು ಪ್ರಯತ್ನಪೂರ್ವಕವಾಗಿ ಮನಸ್ಸನ್ನು ಹಿಡಿದುಕೊಂಡರೂ ತಟ್ಟನೆ ಆತನ ಶುಕ್ಲವು ಅರಣಿಯಲ್ಲಿಯೇ ಬಿದ್ದಿತು. ಆಗಲೂ ಆ ಬ್ರಾಹ್ಮಣಶ್ರೇಷ್ಠನು ಮನಸ್ಸಿನಲ್ಲಿ ನಿಶ್ಶಂಕವಾಗಿ ಅರಣಿಯನ್ನು ಕಡೆಯುತ್ತಲೇ ಬಂದನು. ಎಲೈ ನರಪತಿಯೆ, ಆ ಅರಣಿಯಲ್ಲಿ ಶುಕನು ಜನಿಸಿದನು. ಹೀಗೆ ಶುಕ್ರವನ್ನು ಕಡೆಯುತ್ತಿರುವಾಗ ಮಹಾತಪಸ್ವಿಯೂ ಪರಮರ್ಷಿಯೂ ಮಹಾ ಯೋಗಿಯೂ ಆದ ಶುಕನು ಅರಣಿಯ ಗರ್ಭದಲ್ಲಿ ಜನಿಸಿದನು.

ಯಜ್ಞದಲ್ಲಿ ಹೇಗೆ ಹವ್ಯವನ್ನು ತೆಗೆದುಕೊಂಡೇಳುವ ಅಗ್ನಿಯು ಹೊಳೆಯು

---

* ಸಂಪುಟ 41; ಸಂಚಿಕೆ 9; ಮೇ 1972

ತ್ತಿರುವದೋ ಹಾಗೆಯೇ ಅಂಥ ರೂಪದಿಂದಲೇ, ತೇಜಸ್ಸಿನಿಂದ ಧಗಧಗಿಸು ತ್ತಿರುವನೋ ಎಂಬಂತೆ, ಶುಕನು ಜನಿಸಿದನು. ಎಲೈ ಕೌರವ್ಯನೆ, ತಂದೆಯ ಶ್ರೇಷ್ಠವಾದ ರೂಪವನ್ನೂ ವರ್ಣವನ್ನೂ ಧರಿಸಿ ಆ ಪವಿತ್ರಾತ್ಮನಾದ ಶುಕನು ಹೊಗೆಯಿಲ್ಲದ ಬೆಂಕಿಯಂತೆ ಥಳಗುಟ್ಟುತ್ತಿದ್ದನು.

ನದಿಗಳೆಲ್ಲೆಲ್ಲ ಶ್ರೇಷ್ಠವಾದ ಗಂಗಾನದಿಯು ರೂಪವಂತಳಾಗಿ ಮೇರು ಪರ್ವತದ ಮೇಲಕ್ಕೆ ಬಂದು ಆತನನ್ನು ನೀರಿನಿಂದ ತೃಪ್ತಿಗೊಳಿಸಿದಳು. ಎಲೈ ಕೌರವ್ಯನೆ, ದಂಡವೂ ಕೃಷ್ಣಾಜಿನವೂ ಅಂತರಿಕ್ಷದಿಂದ ಆ ಮಹಾತ್ಮನಾದ ಶುಕನಿಗಾಗಿ ಭೂಮಿಯಮೇಲೆ ಬಿದ್ದವು. ಗಂಧರ್ವರು ಇಂಪಾಗಿ ಗಾನಮಾಡಿದರು. ಅಪ್ಸರೋಗಣಗಳು ನರ್ತನಮಾಡಿದವು; ದೇವದುಂದುಭಿಗಳು ಮಹಾಧ್ವನಿಯಿಂದ ಭೋರ್ಗರೆದವು; ವಿಶ್ವಾವಸುವೆಂಬ ಗಂಧರ್ವನೂ, ತುಂಬುರುನಾರದರೂ ಹಾಹಾಹೂಹೂಗಳೆಂಬ ಗಂಧರ್ವರೂ ಶುಕನ ಜನ್ಮವನ್ನು ಸ್ತುತಿಸಿದರು. ಅಲ್ಲಿಗೆ ಇಂದ್ರನೇ ಮೊದಲಾದ ಲೋಕಪಾಲಕರೂ ದೇವತೆಗಳೂ ದೇವರ್ಷಿಗಳೂ ಮತ್ತು ಬ್ರಹ್ಮರ್ಷಿಗಳೂ ಬಂದರು. ವಾಯುವು ದಿವ್ಯವಾದ ಸರ್ವಪುಷ್ಪಗಳನ್ನೂ ಮಳೆಗರೆದನು. ಸ್ಥಾವರಜಂಗಮರೂಪವಾದ ಜಗತ್ತೇ ಪ್ರಹೃಷ್ಟವಾಯಿತು.

ಮಹಾತೇಜಸ್ವಿಯಾದ ಮಹಾದೇವನೇ ದೇವೀಸಹಿತನಾಗಿ ಬಂದು ಹುಟ್ಟಿದಾಗಲೇ ಆ ವ್ಯಾಸಪುತ್ರನಿಗೆ ಉಪನಯನವನ್ನು ಮಾಡಿಸಿದನು. ದೇವೇಶನಾದ ಇಂದ್ರನು ಅವನಿಗೆ ದಿವ್ಯವೂ ಅದ್ಭುತರೂಪವುಳ್ಳದ್ದೂ ಆದ ಕಮಂಡಲವನ್ನು ಪ್ರೇಮಪೂರ್ವಕವಾಗಿ ಕೊಟ್ಟನು. ಎಲೈ ಭರತವಂಶೋತ್ಪನ್ನನೆ, ಹಂಸಗಳೂ ಶತಪತ್ರಗಳೂ ಸಾರಸಗಳೂ ಗಿಳಿಗಳೂ ನವಿಲುಗಳೂ ಸಾವಿರಗಟ್ಟಲೆಯಾಗಿ ಹಾರಿಬಂದು ಆತನಿಗೆ ಪ್ರದಕ್ಷಿಣೆಮಾಡಿದವು.

ಮಹಾಕಾಂತಿವಂತನಾದ ಆ ಅರಣಿಪುತ್ರನು ದಿವ್ಯವಾದ ಜನ್ಮವನ್ನು ತಳೆದು ಅಲ್ಲಿಂದಲೇ ಬ್ರಹ್ಮಚರ್ಯ ವ್ರತವನ್ನು ಹಿಡಿದು ಸಮಾಹಿತಮನಸ್ಕನಾಗಿ ಇರುತ್ತಿದ್ದನು. ಮಹಾರಾಜನೆ, ಜನ್ಮದಾರಂಭದಿಂದಲೇ ಆತನಿಗೆ ವೇದಗಳೂ ಉಪನಿಷತ್ತುಗಳೂ ರಹಸ್ಯಸಮೇತವಾಗಿ ತಂದೆಯಾದ ವ್ಯಾಸರಿಗೆ ಹೇಗೋ ಹಾಗೆಯೇ ಮನಸ್ಸಿನಲ್ಲಿ ಸ್ಫುರಿಸಿದವು. ಎಲೈ ಮಹಾರಾಜನೆ, ಆತನು ಧರ್ಮವನ್ನೇ ವಿಚಾರಮಾಡುತ್ತಾ ವೇದವೇದಾಂತಭಾಷ್ಯಗಳನ್ನು ಬಲ್ಲವನಾಗಿದ್ದುಕೊಂಡು ಬೃಹಸ್ಪತಿಯನ್ನೇ

ಉಪಾಧ್ಯಾಯನನ್ನಾಗಿ ಆರಿಸಿಕೊಂಡಿದ್ದನು. ಆ ಮಹಾಮುನಿಯು ಸರಹಸ್ಯವಾಗಿ ಸಸಂಗ್ರಹವಾಗಿ ವೇದಗಳನ್ನೂ ಇತಿಹಾಸಗಳನ್ನೂ ಅಧ್ಯಯನಮಾಡಿದಬಳಿಕ ಗುರುವಿಗೆ ದಕ್ಷಿಣೆಯನ್ನಿತ್ತು ಸಮಾವರ್ತನವನ್ನು ಮಾಡಿಕೊಂಡು ಮನೆಗೆ ಬಂದನು.

ಮಹಾತಪಸ್ವಿಯಾದ ಆ ಶುಕನು ಬಾಲ್ಯದಲ್ಲಿಯೇ ದೇವತೆಗಳಿಗೂ ಋಷಿಗಳಿಗೂ ವರಣೀಯನೂ ಜ್ಞಾನದಿಂದಲೂ ತಪಸ್ಸಿನಿಂದಲೂ ಮಾನ್ಯನೂ ಆಗಿದ್ದನು. ಎಲೈ ನರಾಧಿಪನೆ, ಆದರೆ ಅವನಿಗೆ ಗಾರ್ಹಸ್ಥ್ಯಾದ್ಯಾಶ್ರಮಗಳಲ್ಲಿ ಮನಸ್ಸುರತವಾಗಲಿಲ್ಲ. ಅವನು ಮೋಕ್ಷಧರ್ಮಗಳನ್ನೇ ಅನುಸರಿಸುತ್ತಿದ್ದನು.

* * * * *

## 44. ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು*

### (ಮಿಥಿಲೆಗೆ ಶುಕನ ಗಮನ)

### (1)

ಬಳಿಕ ಭೀಷ್ಮರಿಂತೆಂದರು: ಯುಧಿಷ್ಠಿರನೆ, ಆ ಶುಕನು ಮೋಕ್ಷದ ಅನುಚಿಂತನೆಯನ್ನು ಮಾಡುತ್ತಲೇ ತಂದೆಯಬಳಿಗೆ ಬಂದು ಆತನಿಗೆ ಗುರುಭಕ್ತಿಯಿಂದ ನಮಸ್ಕರಿಸಿ ಶ್ರೇಯೋರ್ಥಿಯಾಗಿ ವಿನಯದಿಂದ ಇಂತೆಂದನು: 'ಪ್ರಭುವರ್ಯರೆ, ಮೋಕ್ಷಧರ್ಮಗಳಲ್ಲಿ ಕುಶಲರಾಗಿರುವ ಭಗವಂತರಾದ ತಾವು ನನ್ನ ಮನಸ್ಸಿನಲ್ಲಿ ಹೇಗಾದರೆ ಪರಮಶಾಂತಿಯುಂಟಾದೀತೆಂಬುದನ್ನು ತಿಳಿಯಿಸಿ ಕೊಡಿರಿ.'

ಆ ಪರಮರ್ಷಿಗಳು ಪುತ್ರನ ವಚನವನ್ನು ಕೇಳಿ, 'ಅಪ್ಪ, ಮೋಕ್ಷವನ್ನೂ ವಿವಿಧಧರ್ಮಗಳ ವಿಷಯವನ್ನೂ ಅಧ್ಯಯನಮಾಡು' – ಎಂದರು. ಧರ್ಮಿಷ್ಠರಲ್ಲಿ ಶ್ರೇಷ್ಠನಾದ ಶುಕನು ತಂದೆಯ ಅಪ್ಪಣೆಯಂತೆ ಯೋಗಶಾಸ್ತ್ರವನ್ನೂ, ಸಂಪೂರ್ಣವಾಗಿ ಕಾಪಿಲಸಾಂಖ್ಯವನ್ನೂ ಕಲಿತುಕೊಂಡನು. ಅವನು ಬ್ರಹ್ಮತೇಜಸ್ಸುಳ್ಳವನಾಗಿ ಬ್ರಹ್ಮನಿಗೆ ಸಮಾನವಾದ ಶಾಸ್ತ್ರಕುಶಲನೂ ಆಗಿರುವನೆಂಬುದನ್ನೂ ಮೋಕ್ಷಧರ್ಮದಲ್ಲಿ

---

* ಸಂಪುಟ 41; ಸಂಚಿಕೆ 10; ಜೂನ್ 1972

ವಿಶಾರದನಾಗಿರುವನೆಂಬುದನ್ನೂ ಗೊತ್ತುಮಾಡಿಕೊಂಡ ಆ ವ್ಯಾಸರು 'ಮಿಥಿಲೇಶ್ವರನಾದ ಜನಕನ ಬಳಿಗೆ ಹೋಗು, ಅವನು ನಿನಗೆ ಸಕಲ ಮೋಕ್ಷಾರ್ಥವನ್ನೂ ಹೇಳಿಕೊಡುವನು' ಎಂದರು.

"ಎಲೈ ನರಪತಿಯೆ, ತಂದೆಯ ಅಪ್ಪಣೆಯನ್ನು ಪಡೆದುಕೊಂಡಬಳಿಕ ಆ ಶುಕನು ಧರ್ಮದ ನಿಲುಗಡೆ ಯಾವದು? ಮೋಕ್ಷದ ಪರಾಶ್ರಯವು ಯಾವದು?- ಎಂಬುದನ್ನು ತಿಳಿದುಕೊಳ್ಳುವದಕ್ಕಾಗಿ ಮಿಥಿಲೆಗೆ ಹೋದನು. ತಂದೆಯು ಅವನಿಗೆ ಹೀಗೆಂದು ಕಟ್ಟುಮಾಡಿದ್ದನು: – 'ಮಾನವರ ಮಾರ್ಗದಿಂದಲೇ ಹೋಗು, ಯೋಗಪ್ರಭಾವದಿಂದ ಅಂತರಿಕ್ಷಚರನಾಗಿ ಹೋಗಕೂಡದು. ಋಜುಭಾವದಿಂದಲೇ ಹೋಗು, ಸುಖವನ್ನು ಹುಡುಕಿಕೊಂಡು ಹೋಗದಿರು, ವಿಶೇಷಸ್ಥಾನಗಳನ್ನಾಗಲಿ, ಪುರುಷರನ್ನಾಗಲಿ ಹುಡುಕಿಕೊಂಡು ಹೋಗಬೇಡ, ವಿಶೇಷಸ್ಥಾನಾದಿ)ಗಳು ಸಂಗವನ್ನುಂಟುಮಾಡುತ್ತವೆ. ಪೂಜ್ಯನಾದ ಆ ನರಪತಿಯ ಹತ್ತಿರ ಅಹಂಕಾರವನ್ನು ಮಾಡಬಾರದು. ಅವನ ವಶವರ್ತಿಯಾಗಿಯೇ ಇರಬೇಕು. ಅವನು ನಿನ್ನ ಸಂಶಯವನ್ನು ಪರಿಹರಿಸುವನು. ಆ ರಾಜನು ಧರ್ಮದಲ್ಲಿ ಕುಶಲನು; ಮೋಕ್ಷಶಾಸ್ತ್ರದಲ್ಲಿ ವಿಶಾರದನು; ನನಗೂ ಪೂಜ್ಯನು. ಅವನು ಏನುಹೇಳುತ್ತಾನೋ ಅದನ್ನು ಸ್ವಲ್ಪವೂ ಶಂಕೆಯಿಲ್ಲದೆ ಮಾಡಬೇಕು."

ಹೀಗೆಂದ ತಂದೆಯ ಮಾತನ್ನು ಮನಸ್ಸಿನಲ್ಲಿಟ್ಟು ಆ ಶುಕಮುನಿಯು ಮಿಥಿಲೆಗೆ ಹೊರಟನು. ಸಾಗರಸಹಿತವಾದ ಪೃಥ್ವಿಯನ್ನು ಅಂತರಿಕ್ಷಮಾರ್ಗದಿಂದಲೇ ದಾಟಿಹೋಗುವದಕ್ಕೆ ಶಕ್ತನಾಗಿದ್ದರೂ ಕಾಲುನಡಗೆಯಿಂದಲೇ ಅಲ್ಲಿಗೆ ಹೋದನು. ಅವನು ಪರ್ವತಗಳನ್ನೂ ನದಿಗಳನ್ನೂ ತೀರ್ಥಗಳನ್ನೂ ಸರೋವರಗಳನ್ನೂ ಅನೇಕ ಸರ್ಪಗಳು, ಮೃಗಗಳು- ಇವುಗಳಿಂದ ತುಂಬಿದ್ದ ಅಡವಿಗಳನ್ನೂ ವನಗಳನ್ನೂ ಇಲಾವತವರ್ಷ, ಹರಿವರ್ಷ, ಕಿಂಪುರುಷರು- ಇವುಗಳನ್ನೂ ಕ್ರಮಕ್ರಮವಾಗಿ ದಾಟಿ(ಕೊನೆಗೆ) ಭಾರತವರ್ಷವನ್ನು ಮುಟ್ಟಿದನು. ಆ ಮಹಾಮುನಿಯು ಹೀಗೆ ಚೀಣರೂ ಹೂಣರೂ ಇದ್ದ ವಿಧವಿಧವಾದ ದೇಶಗಳನ್ನು ನೋಡುತ್ತಾ ಈ ಆರ್ಯಾವರ್ತದೇಶಕ್ಕೆ ಬಂದನು.

ತಂದೆಯ ಆಜ್ಞೆಯನ್ನು ಪಡೆದು ಅದೇ ವಿಷಯವನ್ನೇ ಚಿಂತಿಸುತ್ತ ಆಕಾಶದಲ್ಲಿ ಸಂಚರಿಸುವ ಪಕ್ಷಿಯಂತೆ ತನ್ನ ಮಾರ್ಗವನ್ನು ಹಿಡಿದು ಮುಂದುವರಿಯತ್ತಿದ್ದನು.

ರಮಣೀಯವಾದ ಪಟ್ಟಣಗಳನ್ನೂ ಜನಸಮೃದ್ಧವಾಗಿದ್ದ ನಗರಗಳನ್ನೂ ವಿಚಿತ್ರವಾಗಿದ್ದ ರತ್ನಗಳನ್ನೂ ಕಂಡರೂ ಅವುಗಳ ಕಡೆಗೆ ಕಣ್ಣುಹಾಕದೆ ಇರುತ್ತಿದ್ದನು. ರಮ್ಯವಾದ ಉದ್ಯಾನಗಳನ್ನೂ ಮಂದಿರಗಳನ್ನೂ ಪವಿತ್ರವಾದ ಶ್ರೇಷ್ಠವಸ್ತುಗಳನ್ನೂ ಲೆಕ್ಕಿಸದೆ ಅವನು ಮುಂದುವರಿಯುತ್ತಿದ್ದನು.

ಹೀಗೆ ಅವನು ಅತ್ಯಲ್ಪಕಾಲದಲ್ಲಿಯೇ, ಮಹಾತ್ಮನಾದ ಜನಕನು ಧರ್ಮದಿಂದ ಆಳುತ್ತಿದ ವಿದೇಹದೇಶವನ್ನು ತಲುಪಿದನು. ಅಲ್ಲಿ ಅನ್ನಪಾನ ಭೋಜನಗಳಿಂದ ತುಂಬಿದ್ದ ಗ್ರಾಮಗಳನ್ನೂ ಅನೇಕ ದನಕರುಗಳಿಂದ ತುಂಬಿದ್ದ ಹಳ್ಳಿಗಳನ್ನೂ ಕಂಡನು. ಅಲ್ಲಿ ಬತ್ತದ ಗದ್ದೆಗಳು, ಗೋಧಿಯಬೆಳೆಯ ಗದ್ದೆಗಳೂ ಹೇರಳವಾಗಿದ್ದವು. ಹಂಸಗಳೂ ಸಾರಸಗಳೂ ಕಮಲಗಳೂ ಎಲ್ಲೆಲ್ಲಿಯೂ ಕಾಣಿಸುತ್ತಿದ್ದ ಸರೋವರಗಳು ಕಂಗೊಳಿಸುತ್ತಿದ್ದವು. ಆತನು ಇಂತು ವಿದೇಹರಾಜ್ಯವನ್ನು ಮುಟ್ಟಿದಬಳಿಕ ಮಿಥಿಲಾನಗರಿಯ ಸಮೃದ್ಧವೂ ರಮ್ಯವೂ ಆಗಿದ್ದ ಉಪವನಕ್ಕೆ ಬಂದನು. ಅಲ್ಲಿ ಆನೆಗಳೂ ಕುದುರೆಗಳೂ ರಥಗಳೂ ತುಂಬಿದ್ದವು. ಸ್ತ್ರೀಯರೂ ಪುರುಷರೂ ಅಲ್ಲಿ ಕಂಡುಬರುತ್ತಿದ್ದರು. ಆದರೂ ಅವನು ಏನನ್ನೂ ಕಾಣದವನಂತೆಯೇ ಮನಃಸ್ಥಿತಿಗೆ ಯಾವ ಚ್ಯುತಿಯೂ ಇಲ್ಲದೆ ಮುಂದಕ್ಕೆ ನಡೆದನು. ಹೀಗೆ ಜಿಜ್ಞಾಸ್ಯವಿಚಾರವೊಂದನ್ನೇ ಮನಸ್ಸಿನಮೇಲೆ ಹೊತ್ತು ಅದರ ಚಿಂತನೆಯಲ್ಲಿಯೇ ಮಗ್ನನಾಗಿ ಆತ್ಮಾರಾಮನಾಗಿ, ಪ್ರಸನ್ನಚಿತ್ತನಾಗಿ ಅವನು ಮಿಥಿಲೆಯನ್ನು ಪ್ರವೇಶಿಸಿದನು.

ನಗರದ ಹೆಬ್ಬಾಗಿಲಬಳಿಗೆ ಬಂದು ಶಂಕೆಯಿಲ್ಲದೆ ಒಳಕ್ಕೆ ಹೋಗುವದಕ್ಕೆ ಯತ್ನಿಸುತ್ತಿರುವಲ್ಲಿ ಅಲ್ಲಿಯ ದ್ವಾರಪಾಲಕರು ಅವನನ್ನು ಕಟುವಾಕ್ಕುಗಳಿಂದ ತಡೆಗಟ್ಟಿದರು. ಶುಕನು ಸಿಟ್ಟಿಗೇಳದೆ ಹಾಗೆಯೇ ನಿಂತುಕೊಂಡನು. ಅವನಿಗೆ ಬಿಸಿಲು, ದಾರಿಯಲ್ಲಿ ನಡೆದುಬಂದ ಬಳಲಿಕೆ– ಇವುಗಳು ತಾಪವನ್ನುಂಟು ಮಾಡಲಿಲ್ಲ; ಹಸಿವುನೀರಡಿಕೆಗಳ ಸಂಕಟವೂ ಇಲ್ಲದೆ ಹಾಗೆಯೇ ಇರುತ್ತಿದ್ದನು. ಅವನು ಬಿಸಿಲನ್ನು ತಪ್ಪಿಸಿಕೊಳ್ಳುವದಕ್ಕೆ ಅತ್ತಸರಿಯಲೂ ಇಲ್ಲ.

ಆಗ ಆ ದ್ವಾರಪಾಲಕರಲ್ಲೊಬ್ಬನು ಶೋಕದಿಂದ, ಮಧ್ಯಾಹ್ನದ ಸೂರ್ಯನಂತೆ ನಿಂತಿದ್ದ ಶುಕನನ್ನು ಕಂಡು ಆತನನ್ನು ವಿಧಿವತ್ತಾಗಿ ಪೂಜಿಸಿ ನಮಸ್ಕರಿಸಿ ಕೈಮುಗಿದು ಅರಮನೆಯ ಎರಡನೆಯ ಕಕ್ಷ್ಯೆಯೊಳಕ್ಕೆ ಬಿಟ್ಟನು.

ಅಪ್ಪ, ಯುಧಿಷ್ಠಿರ, ಮಹಾತೇಜಸ್ವಿಯಾದ ಶುಕನು ಅಲ್ಲಿ ಕುಳಿತುಕೊಂಡು ಮೋಕ್ಷದ ಚಿಂತನೆಯಲ್ಲಿಯೇ ಇರುತ್ತಿದ್ದನು; ನೆರಳಿನಲ್ಲಿಯೂ ಬಿಸಿಲಿನಲ್ಲಿಯೂ ಸಮದರ್ಶಿಯಾಗಿಯೇ ಇರುತ್ತಿದ್ದನು. ಸ್ವಲ್ಪಹೊತ್ತಿನೊಳಗಾಗಿಯೇ ರಾಜನ ಮಂತ್ರಿಯು ಅವನ ಬಳಿಗೆ ಬಂದು ಕೈಮುಗಿದು ಅರಮನೆಯ ಮೂರನೆಯ ಕಕ್ಷ್ಯೆಯೊಳಕ್ಕೆ ಕರೆತಂದುಬಿಟ್ಟನು. ಅವನು ಅಂತಃಪುರಕ್ಕೆ ಸಂಬಂಧಿಸಿದ್ದ ಚೈತ್ರರಥದಂತೆ ಬೇರೆಬೇರೆಯಿದ್ದ ಜಲಾಕ್ರೀಡೆಗಳಿಂದ ರಮ್ಯವಾಗಿದ್ದ ಹೂಬಿಟ್ಟ ಗಿಡಗಳುಳ್ಳ ಉತ್ತಮವಾದ ಪ್ರಮದಾವನಕ್ಕೆ ಶುಕನನ್ನು ಕರೆತಂದಿದ್ದನು.

ಬಳಿಕ ಅಲ್ಲಿ ಕುಳಿತುಕೊಳ್ಳುವಂತೆ ಹೇಳಿ ಮಂತ್ರಿಯು ಅಲ್ಲಿಂದ ಹೊರಟುಹೋದನು. ಸುಂದರವೇಷಧಾರಿಗಳೂ ಸುಂದರಿಯರೂ ಆಗಿದ್ದ ನವಯುವತಿಯರು ತೆಳುವಾದ ಕೆಂಪುಸೀರೆಯನ್ನುಟ್ಟುವರೂ ಅಪ್ಪಟಚಿನ್ನದ ಒಡವೆಗಳನ್ನು ಧರಿಸಿದವರು ಸರಸಸಲ್ಲಾಪದಲ್ಲಿ ಕುಶಲರೂ ನೃತ್ಯಗೀತೆಗಳಲ್ಲಿ ವಿಶಾರದರೂ ಹುಸಿನಗೆಯಿಂದೊಡಗೂಡಿದ ಮಾತನಾಡುವ ಸ್ವಭಾವದವರೂ ರೂಪದಲ್ಲಿ ಅಪ್ಸರಸ್ತ್ರೀಯರಿಗೆ ಸಮರಾದವರೂ ಕಾಮೋಪಚಾರದಲ್ಲಿ ಕುಶಲರೂ ಭಾವಜ್ಞರೂ ಸರ್ವಕಲೆಗಳಲ್ಲಿಯೂ ಕೋವಿದರೂ ಆದ ಐವತ್ತಕ್ಕಿಂತ ಹೆಚ್ಚಿನ ಸಂಖ್ಯೆಯ ಅಂತಃಪುರಸ್ತ್ರೀಯರು ಅವನ ಬಳಿಗೆ ಓಡಿ ಬಂದರು. ಅವರು ಪಾದ್ಯಾದಿಗಳ ಪೂರ್ವಕವಾಗಿ ಅರ್ಚನೆಯನ್ನು ಮಾಡಿ ಕಾಲಕ್ಕೆ ತಕ್ಕಂತೆ ಸ್ವಾದ್ವನ್ನವನ್ನು ಉಣಬಡಿಸಿದರು. ಭರತವಂಶೋತ್ಪನ್ನನೆ, ಆಮೇಲೆ ಆತನ ಊಟಮಾಡಿದಬಳಿಕ ಸುರಮ್ಯವಾದ ಆ ಅಂತಃಪುರೋದ್ಯಾನವನ್ನು ಒಬ್ಬೊಬ್ಬರಾಗಿ ಅವನಿಗೆ ತೋರಿಸಿದರು. ಆಗ ಅವರಲ್ಲಿ ಕೆಲವರು ಕ್ರೀಡೆಗಳಿಂದಲೂ ನಗೆಯಿಂದಲೂ ಹಾವದಿಂದಲೂ ಆ ಉದಾರಸತ್ತ್ವನಾದ ಶುಕನನ್ನು ಉಪಚರಿಸಿದರು. ಆದರೆ ಆರಣೇಯನಾದ ಆ ಶುಕನು ಶುದ್ಧಾಂತಃಕರಣನಾಗಿ ಯಾವ ಸಂಶಯವೂ ಇಲ್ಲದೆ ತನ್ನ ಕರ್ಮವನ್ನು ಮಾಡುತ್ತಾ ಇಂದ್ರಿಯಗಳನ್ನು ಅಳವಡಿಸಿಕೊಂಡು ಜಿತಕ್ರೋಧನಾಗಿ ಹರ್ಷವಿಲ್ಲದೆಯೂ ಕೋಪವಿಲ್ಲದೆಯೂ ಇರುತ್ತಿದ್ದನು. ಆ ಉತ್ತಮಸ್ತ್ರೀಯರು ಅವನಿಗೆ ದಿವ್ಯವಾದ ದೇವತೆಗಳಿಗೆ ತಕ್ಕ ರತ್ನಭೂಷಿತವಾದ ಉತ್ತಮವಾದ ಮಗ್ಗುಲಹಾಸಿಗೆಯಿಂದೊಡಗೂಡಿದ ಸುಪ್ಪತ್ತಿಗೆಯನ್ನು ಒದಗಿಸಿದರು. ಶುಕನು ಕಾಲುಗಳನ್ನು ತೊಳೆದುಕೊಂಡೇ ಸಂಧ್ಯೆಯನ್ನು ಮಾಡಿ ಆ ಶುಭಾಸನದಲ್ಲಿ ಮಲಗಿದನು.

ಅದರಲ್ಲಿ ರಾತ್ರೆಯ ಮುಂಭಾಗವನ್ನು ಧ್ಯಾನಪರನಾಗಿ ಕಳೆದು ನಡುರಾತ್ರೆಯಲ್ಲಿ ತಕ್ಕಂತೆ ನಿದ್ರೆಯನ್ನು ಮಾಡಿದನು.

ಆಮೇಲೆ ಬೆಳಗಿನಜಾವದಲ್ಲಿ ಎಚ್ಚತ್ತು ಶೌಚವನ್ನು ಮಾಡಿ ಸ್ತ್ರೀಯರಿಂದ ಸುತ್ತುವರೆಯಲ್ಪಟ್ಟಿದ್ದರೂ ಧ್ಯಾನವನ್ನೇ ಮಾಡುವದಕ್ಕೆ ಮೊದಲುಮಾಡಿದನು.

ಈ ರೀತಿಯಲ್ಲಿ ಆ ಕೃಷ್ಣದ್ವೈಪಾಯನರ ಮಗನು ಉಳಿದ ಹಗಲಿನ ಭಾಗವನ್ನೂ ಆ ರಾತ್ರಿಯನ್ನೂ ಅರಮನೆಯಲ್ಲಿ ಕಳೆದನಯ್ಯ, ಭರತವಂಶೋತ್ಪನ್ನನೆ!

* * * * *

# 44. ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು*

# (2)

ಭೀಷ್ಮರಿಂತೆಂದರು: ಎಲೈ ಭರತವಂಶೋತ್ಪನ್ನನೆ, ಬಳಿಕ ಜನಕರಾಜನು ಮಂತ್ರಿಗಳೊಡನೆ, ಪುರೋಹಿತರೊಡನೆ, ಅಂತಃಪುರದವರೆಲ್ಲರಿಂದೊಡಗೂಡಿ ಆಸನವನ್ನೂ ವಿವಿಧರತ್ನಗಳನ್ನೂ ತೆಗೆದುಕೊಂಡು ತಲೆಯಮೇಲೆ ಅರ್ಘ್ಯಪಾತ್ರೆಯನ್ನು ಇಟ್ಟುಕೊಂಡು ಗುರುಪುತ್ರನಿದ್ದಲ್ಲಿಗೆ ಬಂದನು. ಪುರೋಹಿತನು ತಂದಿದ್ದ ರತ್ನಖಚಿತವಾದ ಆಸನವನ್ನು ತಾನೂ ಕೈಯಲ್ಲಿ ಹಿಡಿದುಕೊಂಡು ಬಂದು ಗುರುಪುತ್ರನಾದ ಶುಕನಿಗೆ ಅರ್ಪಿಸಿದನು. ಅದರಲ್ಲಿ ಕೃಷ್ಣದ್ವೈಪಾಯನರ ಪುತ್ರನು ಕುಳಿತುಕೊಂಡಬಳಿಕ ಆತನಿಗೆ ಮೊದಲು ಪಾದ್ಯ, ಬಳಿಕ ಅರ್ಘ್ಯ, ಹೂವು- ಇವುಗಳನ್ನು ಅರ್ಪಿಸಿದನು. ಆಗ ಆ ದ್ವಿಜಶ್ರೇಷ್ಠನಾದ ಶುಕನು, ಯಥಾವಿಧಿಯಾಗಿ ಮಂತ್ರೋಚ್ಚಾರಪೂರ್ವಕವಾಗಿ ಜನಕನು ಮಾಡಿದ ಪೂಜೆಯನ್ನು ಸ್ವೀಕರಿಸಿ ಸಾನುಚರನಾದ ಆ ರಾಜೇಂದ್ರನನ್ನು ಅನಾಮಯವೆ?- ಎಂದು ಪ್ರಶ್ನಿಸಿದನು. ಉದಾರಸತ್ತ್ವನಾದ ರಾಜನು ಆತನ ಅನುಜ್ಞೆಯನ್ನು ಪಡೆದು ಜೊತೆಯಲ್ಲಿದ್ದವರೆಲ್ಲರೊಡನೆ ಕುಳಿತುಕೊಂಡನು.

---

* ಸಂಪುಟ 41; ಸಂಚಿಕೆ 11; ಜುಲೈ 1972

ಆಗ ವ್ಯಾಸಪುತ್ರನಾದ ಶುಕನು ಕುಶಲಪ್ರಶ್ನೆಯನ್ನು ಮಾಡಿದಬಳಿಕ ಜನಕನು ಬಂದದ್ದಕ್ಕೆ ಕಾರಣವನ್ನು ಕೇಳಿದನು. ಶುಕನು 'ನನ್ನ ತಂದೆಯು ಮೋಕ್ಷಧರ್ಮಾರ್ಥಗಳಲ್ಲಿ ಕೋವಿದನಾಗಿರುವ ವಿದೇಹರಾಜನು ನನಗೂ ಪೂಜ್ಯನಾಗಿರುತ್ತಾನೆ, ಜನಕನೆಂಬ ಹೆಸರಿನಿಂದ ಪ್ರಖ್ಯಾತನಾಗಿರುತ್ತಾನೆ; ಪ್ರವೃತ್ತಿಧರ್ಮದಲ್ಲಾಗಲಿ, ನಿವೃತ್ತಿಧರ್ಮದಲ್ಲಾಗಲಿ ನಿನಗೆ ಉಂಟಾಗಿರಬಹುದಾದ ಸಂಶಯವನ್ನು ಆತನು ಬಗೆಹರಿಸುವನು' ಎಂದಿರುತ್ತಾನೆ. ಆದ್ದರಿಂದ ಈ ನಾನು ತಂದೆಯ ಅಪ್ಪಣೆಯಂತೆ ನಿನ್ನನ್ನು ಕೇಳಿ ತಿಳಿದುಕೊಳ್ಳುವದಕ್ಕೆಂದು ಬಂದಿರುತ್ತೇನೆ. ಆದ್ದರಿಂದ ಧರ್ಮಾತ್ಮರಲ್ಲಿ ಶ್ರೇಷ್ಠನಾದ ರಾಜನೆ, ನೀನು ನನಗೆ ಧರ್ಮರಹಸ್ಯವನ್ನು ಹೇಳಿಕೊಡಬೇಕು. ಬ್ರಾಹ್ಮಣನಾದವನು ಏನುಮಾಡಬೇಕು? ಮೋಕ್ಷಾರ್ಥದ ಸ್ವರೂಪವೇನು? ಮೋಕ್ಷವನ್ನು ಹೇಗೆ ಪಡೆದುಕೊಳ್ಳಬೇಕು?– ಎಂಬುದನ್ನು ನನಗೆ ಹೇಳುವನಾಗು!' ಎಂದನು.

ಹೀಗೆನ್ನಲು ಜನಕನಿಂತೆಂದನು: "ಬ್ರಾಹ್ಮಣನಾದವನು ಹುಟ್ಟಿದಂದಿನಿಂದ ಏನು ಮಾಡಬೇಕೊ ಅದನ್ನು ಹೇಳುವೆನು, ಕೇಳು: ಉಪನಯನವನ್ನು ಮಾಡಿಸಿಕೊಂಡು ವೇದಪರಾಯಣನಾಗಿರಬೇಕು. ಎಲೈ ವಿಭುವೆ, ತಪಸ್ಸಿನಿಂದಲಾಗಲಿ ಅಥವಾ ಗುರುವಿನ ಅನುಸರಣೆಯಿಂದ ಮಾಡಿದ ಬ್ರಹ್ಮಚರ್ಯದಿಂದಲಾಗಲಿ ದೇವತೆಗಳ ಮತ್ತು ಪಿತೃಗಳ ಋಣವನ್ನು ತೀರಿಸಿ, ಅಸೂಯೆಯಿಲ್ಲದೆ ವೇದಗಳ ಅಧ್ಯಯನವನ್ನು ನಿಯಮದಿಂದ ಮಾಡಿ ಗುರುದಕ್ಷಿಣೆಯನ್ನು ಕೊಟ್ಟು ಗುರುವಿನ ಅನುಜ್ಞೆಯನ್ನು ಪಡೆದು ಸಮಾವರ್ತನೆಯನ್ನು ಮಾಡಬೇಕು. ಸಮಾವೃತ್ತನಾದವನು ಪತ್ನಿಯೊಡನೆ ಗಾರ್ಹಸ್ಥ್ಯವನ್ನು ಪರಿಪಾಲಿಸಬೇಕು. ಅಸೂಯಾರಹಿತನಾಗಿ ನ್ಯಾಯಾನುಸಾರವಾಗಿ ಆಹಿತಾಗ್ನಿಯಾಗಿ ಪುತ್ರಪೌತ್ರರನ್ನು ಪಡೆದು ವಾನಪ್ರಸ್ಥಾಶ್ರಮದಲ್ಲಿರಬೇಕು. ಅಲ್ಲಿ ಅದೇ ಅಗ್ನಿಗಳನ್ನು ಶಾಸ್ತ್ರೋಕ್ತವಾದ ರೀತಿಯಿಂದ ಅರ್ಚಿಸುತ್ತಿರಬೇಕು, ಅತಿಥಿಸತ್ಕಾರವನ್ನು ಮಾಡುತ್ತಿರಬೇಕು. ಧರ್ಮಜ್ಞನಾದವನು ಹೀಗೆ ವನವಾಸವನ್ನು ಮಾಡಿದಬಳಿಕ ಅಗ್ನಿಗಳನ್ನು ತನ್ನಲ್ಲಿ ಆರೋಪಣ ಮಾಡಿಕೊಂಡು, ನಿರ್ದ್ವಂದ್ವನಾಗಿ ರಾಗರಹಿತಾಂತಃಕರಣನಾಗಿ ಬ್ರಹ್ಮಾಶ್ರಮದಲ್ಲಿರಬೇಕು.

ಇಂತೆಂದ ಜನಕನನ್ನು ಕುರಿತು ಶುಕನು ಹೀಗೆಂದು ಕೇಳಿದನು:

"ಜ್ಞಾನವಿಜ್ಞಾನಗಳು ಹೃದಯದಲ್ಲಿ ಉತ್ಪನ್ನವಾಗಿ ಶಾಶ್ವತವಾಗಿರುತ್ತಿರಲು ಈ ಮೂರು ಆಶ್ರಮಗಳಲ್ಲಿಯೂ ಅವಶ್ಯವಾಗಿರಲೇಬೇಕೇನು? ಇದನ್ನು ನಿನ್ನನ್ನು ಕೇಳುತ್ತಿದೇನೆ. ದಯವಿಟ್ಟು ಇದನ್ನು ಹೇಳು. ವೇದಾರ್ಥವನ್ನು ಇದ್ದದ್ದುಇದ್ದಂತೆ ನನಗೆ ತಿಳಿಸಿಕೊಡು.

ಜನಕನು ಇದಕ್ಕೆ ಹೇಳಿದ್ದೇನೆಂದರೆ: "ಜ್ಞಾನವಿಜ್ಞಾನಗಳಿಲ್ಲದೆ ಮೋಕ್ಷಪ್ರಾಪ್ತಿಯಾಗಲಾರದು; ಗುರುಸಂಬಂಧವಿಲ್ಲದೆ ಜ್ಞಾನಪ್ರಾಪ್ತಿಯಾಗಲಾರದು- ಎಂದು ಬಲ್ಲವರು ಹೇಳುತ್ತಾರೆ. ಅವನನ್ನು ಗುರುವೇ ದಾಟಿಸುವಾತನು, ಜ್ಞಾನವೇ ತೆಪ್ಪವೆನಿಸುತ್ತದೆ. ಆದರೆ ತತ್ತ್ವವನ್ನು ಅರಿತುಕೊಂಡು ಕೃತಕೃತ್ಯನಾದವನು ಸಂಸಾರವನ್ನು ದಾಟಿದ ಬಳಿಕ ಆ ಎರಡನ್ನೂ ಬಿಟ್ಟುಬಿಡಬೇಕು. ಅನೇಕ ಜನ್ಮಗಳಲ್ಲಿ ಈ ಕರ್ಮಯೋಗವನ್ನು ಮಾಡಿದ್ದರಿಂದ ಶುಭಾಶುಭಗಳನ್ನು ಬಿಟ್ಟು ಮೋಕ್ಷವೆಂಬುದು ಲಭಿಸುವದು. ಅನೇಕ ಸಂಸಾರಜನ್ಮಗಳಲ್ಲಿ ಕರಣಗಳನ್ನು ಭಾವನೆಮಾಡಿಕೊಂಡಬಳಿಕ ಶುದ್ಧಾತ್ಮನಾಗಿ ಮೊದಲನೆಯ ಆಶ್ರಮದಲ್ಲಿಯೇ ಮೋಕ್ಷವನ್ನು ಪಡೆದುಕೊಳ್ಳುವನು. ಅದನ್ನು ಪಡೆದುಕೊಂಡು ಮುಕ್ತನಾದವನಿಗೆ ಪುರುಷಾರ್ಥವನ್ನು ಕಂಡದ್ದಾಗಿರುವದರಿಂದ ಪರಮ ಪುರುಷಾರ್ಥದಲ್ಲಿ ಮಾತ್ರ ಇಚ್ಛೆಯಿರುವದರಿಂದ ಮೂರು ಆಶ್ರಮಗಳಲ್ಲಿ ಯಾವ ಪ್ರಯೋಜನವುತಾನೆ ಇದ್ದೀತು? ರಾಜಸವಾದ ಮತ್ತು ತಾಮಸವಾದ ದೋಷಗಳನ್ನು ಯಾವಾಗಲೂ ಬಿಟ್ಟು ಸಾತ್ತ್ವಿಕಮಾರ್ಗವನ್ನು ಅವಲಂಬಿಸಿ ಆತ್ಮನನ್ನು ತನ್ನಲ್ಲಿಯೇ ಕಂಡು ಕೊಳ್ಳಬೇಕು"

* * * * *

# 44. ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು*

## (3)

ಜನಕನು ಮತ್ತೂ ಇಂತೆಂದನು: "ಸರ್ವಪ್ರಾಣಿಗಳಲ್ಲಿಯೂ ಆತ್ಮನನು, ತನ್ನ ಆತ್ಮನಲ್ಲಿ ಸರ್ವಭೂತಗಳನ್ನೂ ಕಂಡುಕೊಂಡವನಿಗೆ– ನೀರಿನಲ್ಲಿರುವ ಜಲಚರಪ್ರಾಣಿಗೆ ಹೇಗೋ ಹಾಗೆ– ಯಾವ (ಕರ್ಮ) ಲೇಪವೂ ಆಗದೆ ಇರುವದು. ಪಕ್ಷಿಯಂತೆ ಊರ್ಧ್ವಮುಖನಾಗಿರುವದರಿಂದ ದೇಹದಿಂದ ನಿರ್ಮುಕ್ತನಾಗಿ, ನಿರ್ದ್ವಂದ್ವನೂ ಶಾಂತಿಯನ್ನೂ ಹೊಂದಿದವನೂ ಆಗಿ ಪರಲೋಕದಲ್ಲಿ ಆನಂತ್ಯರೂಪ(ಮೋಕ್ಷ)ವನ್ನೇ ಪಡೆಯುವನು. ಅಪ್ಪ, ಈ ವಿಷಯದಲ್ಲಿ ಯಯಾತಿಯು ಹಾಡಿದ ಗೀತೆಗಳನ್ನು ಹೇಳುವೆನು ಕೇಳು: ಅವುಗಳನ್ನು ಮೋಕ್ಷಶಾಸ್ತ್ರದಲ್ಲಿ ವಿಶಾರದರಾಗಿರುವವರು ಯಾವಾಗಲೂ ಮನಸ್ಸಿನಲ್ಲಿಟ್ಟು ಕೊಂಡಿರುವರು; "ಜ್ಯೋತಿಯು ತನ್ನೊಳಗೆ ಇರುತ್ತದೆಯೇ ಹೊರತು ಮತ್ತೆಲ್ಲಿಯೂ ಇರುವದಿಲ್ಲ; ಅದು ಸರ್ವಜೀವರುಗಳಲ್ಲಿಯೂ ಸಮಾನವಾಗಿರುತ್ತದೆ. ಚೆನ್ನಾಗಿ ಚಿತ್ತವನ್ನು ಸಮಾಧಾನದಲ್ಲಿಟ್ಟುಕೊಂಡವನು ಅದನ್ನು ತಾನೇ ಕಂಡುಕೊಳ್ಳಬಹುದು. ಯಾವಾತನಿಗೆ ಮತ್ತೊಬ್ಬನು ಅಂಜುವದಿಲ್ಲವೋ, ಮತ್ತೊಬ್ಬನಿಗೂ ಯಾವಾತನು ತಾನೂ ಅಂಜದೆ ಇರುವನೋ, ಮತ್ತು ಯಾವನು ಏನನ್ನೂ ಇಚ್ಛಿಸದೆ, ಏನನ್ನೂ ಹಗೆಮಾಡದೆ ಇರುವನೋ, ಅವನು ಆಗ ಬ್ರಹ್ಮದಲ್ಲಿ ಬೆರೆತುಹೋಗುವನು. ಯಾವಾಗ ಯಾವ ಪ್ರಾಣಿಗಳಲ್ಲಿಯೂ ಕರ್ಮದಿಂದಾಗಲಿ, ಮನಸ್ಸಿಂದಾಗಲಿ, ವಾಕ್ಕಿನಿಂದಾಗಲಿ ಕೆಟ್ಟ ಭಾವನೆಯನ್ನು ಮಾಡದೆಇರುವನೋ, ಆಗ ಬ್ರಹ್ಮದಲ್ಲಿ ಬೆರೆತುಹೋಗುವನು. ಮೋಹಕವಾದ ಈರ್ಷ್ಯೆಯನ್ನು ಬಿಟ್ಟು ಕಾಮವನ್ನೂ ಮೋಹವನ್ನೂ ಬಿಟ್ಟು ಮನಸ್ಸನ್ನು ಆತ್ಮನಲ್ಲಿ ಸೇರಿಸಿಕೊಳ್ಳುವನೋ, ಆಗ ಬ್ರಹ್ಮಭಾವವನ್ನು ಪಡೆದುಕೊಳ್ಳುತ್ತಾನೆ. ಯಾವಾಗ ಕೇಳಿಬಂದ, ಕಾಣಬಂದ, ವಸ್ತುವಿನಲ್ಲಿಯೂ ಮತ್ತು ಸರ್ವಪ್ರಾಣಿಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿ, ನಿರ್ದ್ವಂದ್ವನಾಗಿರುವನೋ ಆಗ ಬ್ರಹ್ಮದಲ್ಲಿ ಬೆರೆತುಹೋಗುವನು. ಯಾವಾಗ ಸ್ತುತಿಯನ್ನೂ ನಿಂದೆಯನ್ನೂ ಸಮವಾಗಿಯೇ ಕಾಣುವನೋ; ಚಿನ್ನವನ್ನೂ

---

* ಸಂಪುಟ 41; ಸಂಚಿಕೆ 12; ಆಗಸ್ಟ್ 1972

ಕಬ್ಬಿಣವನ್ನೂ, ಮತ್ತು ಸುಖವನ್ನೂ ದುಃಖವನ್ನೂ, ಶೀತವನ್ನೂ ಉಷ್ಣವನ್ನೂ, ಅರ್ಥವನ್ನೂ ಅನರ್ಥವನ್ನೂ, ಪ್ರಿಯವನ್ನೂ ಅಪ್ರಿಯವನ್ನೂ, ಬದುಕಿರುವದನ್ನೂ ಸಾವನ್ನೂ (ಸಮವಾಗಿಯೇ ಕಾಣುವನೋ) ಆಗ ಬ್ರಹ್ಮದಲ್ಲಿ ಬೆರೆತುಹೋಗುವನು. ಆಮೆಯು ಹೇಗೆ ತನ್ನ ಅವಯವಗಳನ್ನು ಹೊರಕ್ಕೆ ಚಾಚಿ ಮತ್ತೆ ಹಿಂದಕ್ಕೆಳೆದು ಕೊಳ್ಳುವದೋ ಹಾಗೆಯೇ ಇಂದ್ರಿಯಗಳನ್ನು ಭಿಕ್ಷುವಾದವನು ಬಿಗಿಹಿಡಿದುಕೊಂಡಿರ ಬೇಕು. ಕತ್ತಲೆ ಮುಸುಕಿದ ಮನೆಯನ್ನು ಹೇಗೆ ದೀಪದಿಂದ ಕಾಣಬಹುದೋ ಹಾಗೆ ಬುದ್ಧಿಯೆಂಬ ದೀಪದಿಂದ ಆತ್ಮನನ್ನು ಕಾಣಲಾಗುತ್ತದೆ."

ಎಲೆ ಬುದ್ಧಿವಂತರಲ್ಲಿ ಶ್ರೇಷ್ಠನಾದವನೆ, ಇದೆಲ್ಲವೂ ನನಗೆ ನಿನ್ನಲ್ಲಿ ಕಾಣಿಸುತ್ತಿದೆ. ಇನ್ನೂ ಅರಿತುಕೊಳ್ಳಬೇಕಾದದ್ದು ಏನೇನಿದೆಯೊ, ಅದೆಲ್ಲವನ್ನೂ ನೀನು ಇದ್ದದ್ದು ಇದ್ದಂತೆ ಅರಿತಿರುವೆ. ಬ್ರಹ್ಮರ್ಷಿಯೆ, ನಿನ್ನ ವಿಷಯವು ನನಗೆ ಗೊತ್ತಾಗಿದೆ. ನಿನ್ನ ತಂದೆಯ ಪ್ರಸಾದದಿಂದಲೂ ನಿನ್ನ ಅಭ್ಯಾಸ ಕ್ರಮದಿಂದಲೂ ನೀನು ವಿಷಯಾಂತವನ್ನು ಕಂಡುಕೊಂಡಿರುವೆ. ಆತನ ಪ್ರಸಾದದಿಂದಲೇ, ಎಲೈ ಮಹಾಮುನಿಯೆ, ನನಗೂ ದಿವ್ಯಜ್ಞಾನವು ಉಂಟಾಗಿರುತ್ತದೆ. ಆದ್ದರಿಂದ ನಿನ್ನ ನಿಜವು ನನಗೆ ಗೊತ್ತಾಯಿತು. ನಿನ್ನ ಜ್ಞಾನವು ಅಧಿಕವಾಗಿರುತ್ತದೆ. ನಿನಗೆ ಆಗುವ ಗತಿಯೂ ಅಧಿಕವಾದದ್ದು; ನಿನ್ನ ಐಶ್ವರ್ಯವೂ ಹೆಚ್ಚಿನದು, ಆದರೆ ಅದನ್ನು ಅರಿತುಕೊಳ್ಳದೆ ಇರುವೆ! ಹುಡುಗತನದಿಂದಲೋ, ಸಂಶಯದಿಂದಲೋ, ಮೋಕ್ಷವುಂಟಾಗುವದೆಂಬ ಅಂಜಿಕೆಯಿಂದಲೋ, ಜ್ಞಾನವುಂಟಾಗಿದ್ದರೂ ಆ ಗತಿಯನ್ನು ಮಾನವನು ಪಡೆದುಕೊಳ್ಳದೆ ಇರುತ್ತಾನೆ. ನನ್ನಂಥವರು ಸಂಶಯವನ್ನು ಕತ್ತರಿಸಿಹಾಕಲಾಗಿ, ಪರಮ ನಿಶ್ಚಯವುಂಟಾಗಲು ಹೃದಯಗ್ರಂಥಿಯನ್ನು ಬಿಚ್ಚಿಕೊಂಡು ಆ ಗತಿಯನ್ನು ಪಡೆದುಕೊಳ್ಳುತ್ತಾನೆ.

ನಿನಗೆ ವಿಜ್ಞಾನವು ಉಂಟಾಗಿದೆ. ಸ್ಥಿರಬುದ್ಧಿಯಾಗಿರುವೆ, ನೀನು ವಿಷಯಲೋಲುಪನಲ್ಲ. ನಿಶ್ಚಯವುಂಟಾಗದೆ ಇರುವದರಿಂದ ನಿನಗೆ ಆ ಗತಿಯು ಉಂಟಾಗಿರುವದಿಲ್ಲ. ನಿನಗೆ ಸುಖದುಃಖಗಳಲ್ಲಿ ಯಾವ ವಿಶೇಷವೂ ಇರುವದಿಲ್ಲ, ನೀನು ಲೋಲುಪನೂ ಆಗಿಲ್ಲ; ನೃತ್ಯಗೀತಗಳಲ್ಲಿ ನಿನಗೆ ಔತ್ಸುಕ್ಯವಿರುವದಿಲ್ಲ, ರಾಗವೂ ಉಂಟಾಗುತ್ತಿರುವದಿಲ್ಲ; ಮಹಾಭಾಗನೆ, ನಿನಗೆ ಬಂಧುಗಳಲ್ಲಿ ಆಸಕ್ತಿಯಿಲ್ಲ, ಭಯಗಳಿಗೆ ನೀನು ಅಳುಕುತ್ತಿಲ್ಲ. ನೀನು ಹೆಂಟೆ, ಕಲ್ಲು, ಚಿನ್ನ- ಇವುಗಳಲ್ಲಿ

ಸಮಬುದ್ಧಿಯಾಗಿಯೇ ಕಾಣುತ್ತಿರುವೆ. ನೀನು ಉತ್ತಮವಾದ ಅಕ್ಷಯವಾದ, ನಿರ್ದುಷ್ಟವಾದ ಮಾರ್ಗವನ್ನು ಹಿಡಿದಿರುವೆಯೆಂದು ನನಗೂ ಮಿಕ್ಕ ವಿದ್ವಾಂಸರಿಗೂ ಕಾಣಿಸುತ್ತಲಿರುವೆ; ಇಲ್ಲಿ ಬ್ರಾಹ್ಮಣನಿಗೆ ಯಾವದು ಫಲವೋ, ಯಾವ ಸ್ವರೂಪದ ಮೋಕ್ಷಾರ್ಥವೋ, ಅದರಲ್ಲಿಯೇ ಇರುವೆ. ಎಲೈ ಬ್ರಾಹ್ಮಣನೆ, ಮತ್ತೇನು ಕೇಳಲಿರುವೆ?

* * * * *

## 44. ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು*

## (ಶುಕನ ಪುನರಾಗಮನ)

## (4)

ಭೀಷ್ಮಾಚಾರ್ಯರಿಂತೆಂದರು: ಇಂತೆಂದ ಜನಕನ ವಚನವನ್ನು ಕೇಳಿ ವಿಶುದ್ಧಾಂತಃಕರಣನಾದ ಶುಕನು ನಿಶ್ಚಯವನ್ನು ಮಾಡಿಕೊಂಡು ಬುದ್ಧಿಯ ಬಲದಿಂದ ಆತ್ಮನಲ್ಲಿ ನೆಲೆನಿಂತು, ಆತ್ಮನನ್ನು ತಾನೇ ನೇರಾಗಿ ಕಂಡುಕೊಂಡು, ಕೃತಕೃತ್ಯನಾಗಿ ಸುಖದಿಂದಲೂ ಶಾಂತಿಯಿಂದಲೂ ಒಡಗೂಡಿ ಉತ್ತರದಿಕ್ಕಿಗೆ ಹಿಮಾಲಯದ ಕಡೆಗೆ ವಾಯುವೇಗದಿಂದ ಸುಮ್ಮನೆ ಹೊರಟುಹೋದನು.

ಇದೇ ಕಾಲದಲ್ಲಿಯೇ ದೇವರ್ಷಿಗಳಾದ ನಾರದರು ಸಿದ್ಧಚಾರಣರು ಸೇವಿಸುತ್ತಿದ್ದ ಹಿಮಾಲಯಪರ್ವತವನ್ನು ನೋಡಲು ಬಂದರು. ಆ ಪರ್ವತದಲ್ಲಿ ಅಪ್ಸರರ ಗುಂಪು ತುಂಬಿತ್ತು, ಅದು ಶಾಂತವಾದ ವಿವಿಧಪ್ರಾಣಿಗಳ ಧ್ವನಿಗಳಿಂದ ವ್ಯಾಪ್ತವಾಗಿತ್ತು. ಸಾವಿರಾರು ಕಿನ್ನರರೂ ಭ್ರಮರಗಳೂ, ಮದ್ಗುಗಳು, ಖಂಜರೀಟಗಳು, ಚಕೋರಗಳು, ಚಿತ್ರವಿಚಿತ್ರಪ್ರಮಾಣದ ನವಿಲುಗಳು, ರಾಜಹಂಸಸಮೂಹಗಳು, ಕರಿಯಕೋಗಿಲೆಗಳು – ಇವುಗಳ ಧ್ವನಿಯಿಂದ ಕೂಡಿತ್ತು. ಪಕ್ಷಿರಾಜನಾದ ಗರುಡನು ನಿತ್ಯವೂ ಆ ಪರ್ವತದ ಮೇಲೆ ಇರುತ್ತಿದ್ದನು. ನಾಲ್ಕು ಲೋಕಪಾಲರೂ ದೇವತೆಗಳೂ ಋಷಿಗಳೊಡನೆ ಲೋಕಕ್ಕೆ ಹಿತವಾಗಲೆಂದು ಅಲ್ಲಿಗೆ ನಿತ್ಯವೂ ಬರುತ್ತಿದ್ದರು. ಅಲ್ಲಿಯೇ ಮಹಾತ್ಮನಾದ ಶ್ರೀಕೃಷ್ಣನು ಪುತ್ರಪ್ರಾಪ್ತಿಗಾಗಿ ತಪಸ್ಸುಮಾಡಿದನು.

---

* ಸಂಪುಟ 42; ಸಂಚಿಕೆ 1; ಸೆಪ್ಟೆಂಬರ್ 1972

ಅಲ್ಲಿಯೇ ಕುಮಾರಷಣ್ಮುಖನು ಬಾಲ್ಯದಲ್ಲಿ ದೇವತೆಗಳನ್ನು ದೂರಕ್ಕೆ ಹಾಕಿ ಲೋಕತ್ರಯವನ್ನು ಅನಾದರಮಾಡಿ ತನ್ನ ಶಕ್ತಿಯನ್ನು ಇಟ್ಟನು. ಆ ಸ್ಕಂದನು ಹಾಗೆ ಶಕ್ತಿಯನ್ನು ಹಾಕಿದ ಬಳಿಕ "ನನಗಿಂತ ಹೆಚ್ಚು ವೀರ್ಯವಂತನಾದವನು ಯಾವನಿದಾನೆ? ಯಾವ ನನಗೆ ವಿಪ್ರರು ಹೆಚ್ಚು ಪ್ರಿಯರಾಗಿರುತ್ತಾರೋ ಅಂಥ ನನಗಿಂತಲೂ ಹೆಚ್ಚು ಬ್ರಹ್ಮಣ್ಯನೂ, ಮೂರು ಲೋಕಗಳಲ್ಲಿಯೂ ವೀರ್ಯವಂತನೂ ಆದವನೂ ಯಾವನಿದಾನೆ ? ಹಾಗೆ ಯಾವನಾದರೂ ಇದ್ದರೆ ಈ ಶಕ್ತಿಯನ್ನು ಮೇಲಕ್ಕೆ ಎತ್ತಲಿ! ಅಥವಾ ಅದನ್ನು ಅಲುಗಾಡಿಸಲಿ!" ಎಂದನು. ಅದನ್ನು ಕೇಳಿ ಜನರೆಲ್ಲರೂ 'ಇದನ್ನು ಯಾವನು ಮೇಲಕ್ಕೆತ್ತಲಾಪನೋ!' ಎಂದು ಚಿಂತಾಕ್ರಾಂತರಾಗಿದ್ದರು. ಆಗ (ಹೀಗೆ) ಇಂದ್ರಿಯಗಳೂ ಮನಸ್ಸೂ ಸಂಭ್ರಾಂತವಾಗಿದ್ದ ಸರ್ವದೇವ ಸಮೂಹವನ್ನು, ಹಾಗೂ ಅಸುರರಾಕ್ಷಸರನ್ನು ಕಂಡ ವಿಷ್ಣುಭಗವಂತನು 'ಈಗ ಏನುಮಾಡಿದರೆ ಚೆನ್ನಾಗಿದ್ದೀತು!' ಎಂದು ಯೋಚಿಸಿ, ಆ ದೇವತೆಗಳಿಗೆ ಆದ ತಿರಸ್ಕಾರವನ್ನು ಸಹಿಸಲಾರದೆ ಆ ಸ್ಕಂದನನ್ನು ನೋಡಿದನು. ಉರಿಯುತ್ತಿದ್ದ ಆ ಶಕ್ತಿಯನ್ನು ತೆಗೆದುಕೊಂಡು ಆ ಪುರುಷೋತ್ತಮನು ಎಡಗೈಯಿಂದ ಅಲುಗಾಡಿಸಿದನು. ಬಲಶಾಲಿಯಾದ ವಿಷ್ಣುವು ಶಕ್ತಿಯನ್ನು ಅಲುಗಾಡಿಸಲಾಗಿ, ಪರ್ವತವನಕಾನನಗಳ ಸಹಿತವಾದ ಭೂಮಿಯೇ ನಡುಗಿತು. ಮೇಲಕ್ಕೆತ್ತುವದಕ್ಕೆ ಶಕ್ತನಾಗಿದ್ದರೂ ವಿಷ್ಣುವು (ಸುಮ್ಮನೆ) ಅಲುಗಾಡಿಸಿದನು; ಆ ಪ್ರಭುವು ಕುಮಾರನು ಮಾಡಿದ ಅಪಮಾನದಿಂದ ದೇವಾದಿಗಳನ್ನು ರಕ್ಷಿಸಿದನು.

ಆ ಶಕ್ತಿಯನ್ನು ಅಲುಗಾಡಿಸಿದ ಬಳಿಕ ವಿಷ್ಣುಭಗವಂತನು ಪ್ರಹ್ಲಾದನನ್ನು ಕುರಿತು ಇಂತೆಂದನು: 'ನೋಡಿದೆಯ, ಕುಮಾರನ ವೀರ್ಯವನ್ನ? ಇದನ್ನು ಮತ್ತೆ ಯಾವನು ಮಾಡಿಯಾನು?' ಇಂತೆಂದ ಈ ಮಾತನ್ನು ಕೇಳಿ ಪ್ರಹ್ಲಾದನು ಸಹಿಸದೆ ಅದನ್ನು ಎತ್ತಬೇಕೆಂದು ನಿಶ್ಚಯಿಸಿ ಅದನ್ನು ಹಿಡಿದುಕೊಂಡನು; ಆದರೆ ಅದನ್ನು ಅಲುಗಾಡಿಸಲಾಗಲಿಲ್ಲ. ಹಿರಣ್ಯಕಶಿಪುವಿನ ಸುತನಾದ ಆ ಪ್ರಹ್ಲಾದನು ಗಟ್ಟಿಯಾಗಿ ಕೂಗಿ ಬೆಟ್ಟದ ಶಿಖರದಮೇಲೆ ಮೂರ್ಛಿತನಾಗಿ ವ್ಯಾಕುಲಚಿತ್ತದಿಂದ ಭೂಮಿಯ ಮೇಲೆ ಬಿದ್ದನು.

ಅಪ್ಪ ಯುಧಿಷ್ಠಿರನೆ, ಉತ್ತರಕ್ಕೆ ಹೋಗಿ ಆ ಶೈಲರಾಜನ ಪಕ್ಕದಲ್ಲಿ ವೃಷಧ್ವಜ ಶಿವನು ನಿರಂತರವಾಗಿ ದುರ್ಧರ್ಷವಾದ ತಪಸ್ಸನ್ನು ಮಾಡಿದನು. ಆ ಆಶ್ರಮವನ್ನು

ಅಗ್ನಿಯು ಸುತ್ತುವರೆದಿದ್ದನು, ಆ ಶಿಖರಕ್ಕೆ ಆದಿತ್ಯಪರ್ವತವೆಂದು ಹೆಸರು; ಅಲ್ಲಿ ಯಕ್ಷರಾಗಲಿ, ರಾಕ್ಷಸರಾಗಲಿ, ದಾನವರಾಗಲಿ ಪ್ರವೇಶಿಸುವಂತಿರಲಿಲ್ಲ. ಹತ್ತು ಯೋಜನದಷ್ಟು ವಿಸ್ತಾರವಾದ ಆ ಭಾಗದಲ್ಲಿ ಅಗ್ನಿಜ್ವಾಲೆಯು ಆವರಿಸಿಕೊಂಡಿರುವದು. ಅಲ್ಲಿ ವೀರ್ಯವಂತನಾದ ಭಗವಂತನಾದ ಅಗ್ನಿಯೇ ಅಲ್ಲಿದ್ದನು. ಧೀಮಂತನಾದ ಮಹಾದೇವನು ಒಂಟಿಗಾಲಿನಮೇಲೆ ನಿಂತುಕೊಂಡು ಹೆಚ್ಚಿನ ನಿಯಮದಿಂದ ತಪಸ್ಸು ಮಾಡುತ್ತಾ ದಿವ್ಯಸಹಸ್ರವರ್ಷಗಳವರೆಗೂ ಇದ್ದುಕೊಂಡಿರಲು, ಆ ದೇವನ ತಪಸ್ಸಿಗೆ ಯಾವ ವಿಘ್ನವೂ ಆಗದಂತೆ ಅಗ್ನಿಯು ನೋಡಿಕೊಳ್ಳುತ್ತಾ ಇರುತ್ತಿದ್ದನು.

ಧೀಮಂತನಾದ ಆ ಶೈಲರಾಜನ ಪೂರ್ವದಿಕ್ಕನ್ನು ಆಶ್ರಯಿಸಿಕೊಂಡು ಪರಾಶರಪುತ್ರರಾದ ವ್ಯಾಸರು ವಿವಿಕ್ತವಾದ ಪರ್ವತದ ತಪ್ಪಲಲ್ಲಿ ಶಿಷ್ಯರಿಗೆ ವೇದಗಳನ್ನು ಅಧ್ಯಾಪನಮಾಡಿಸುತ್ತಿದ್ದರು. ಮಹಾಭಾಗನಾದ ಸುಮಂತು, ವೈಶಂಪಾಯನ, ಪ್ರಾಜ್ಞನಾದ ಜೈಮಿನಿ, ತಪಸ್ವಿಯಾದ ಪೈಲ– ಈ ಶಿಷ್ಯರುಗಳಿಗೆ ಅವರು ಅಧ್ಯಯನಮಾಡಿಸುತ್ತಿದ್ದರು. ಹೀಗೆ ಶಿಷ್ಯರುಗಳಿಂದ ಪರಿವೃತರಾಗಿದ್ದ ವ್ಯಾಸರ ಉತ್ತಮವಾದ ರಮಣೀಯವಾಗಿದ್ದ ಆಶ್ರಮವನ್ನು ಶುಕನು ಕಂಡನು; ಆ ವಿಶುದ್ಧಾಂತಃಕರಣನಾದ ಶುಕನು ಆಕಾಶದಲ್ಲಿರುವ ಸೂರ್ಯನಂತೆ ಹೊಳೆಯುತ್ತಿದ್ದನು. ಇಷ್ಟರಲ್ಲಿ ವ್ಯಾಸರು ತಮ್ಮ ಸುತ್ತಲೂ ಧಗಧಗಿಸುತ್ತಿರುವ ಅಗ್ನಿಯಂತೆ ಕಾಣುತ್ತಿದ್ದ ಸೂರ್ಯಸಮಾನತೇಜಸ್ಕನಾದ ತನ್ನ ಮಗನು ಬರುತ್ತಿರುವದನ್ನು ಕಂಡರು. ಆ ಶುಕನು ಬಿಲ್ಲಿನ ಹೆದೆಯಿಂದ ಹಾರಿದ ಬಾಣದಂತೆ ಬಿರುಸಾಗಿ ಓಡುತ್ತಾ ಮರಗಳಲ್ಲಾಗಲಿ, ಬೆಟ್ಟಗಳಲ್ಲಾಗಲಿ ಮತ್ತೆ ಯಾವ ಪದಾರ್ಥಗಳಿಗೇ ಆಗಲಿ ತಗುಲದಂತೆ ಬರುತ್ತಿದ್ದುದ್ದನ್ನು ಕಂಡರು.

ಆ ಅರಣೀಪುತ್ರನು ಹತ್ತಿರಕ್ಕೆಬಂದು ತಂದೆಯ ಪಾದಗಳನ್ನು ಹಿಡಿದು ಕೊಂಡನು, ಮತ್ತು ಶಾಂತಭಾವದಿಂದ ಆ ಶಿಷ್ಯರೊಡನೆಯೂ ಸೇರಿಕೊಂಡನು. ಹೀಗೆ ವೀರ್ಯವಂತನಾದ ಆ ಮಹಾಮುನಿಯು ಶಿಷ್ಯರಿಗೂ ಪುತ್ರನಿಗೂ ಅಧ್ಯಯನಮಾಡಿಸುತ್ತಾ ಹಿಮವತ್ಪರ್ವತದ ತಪ್ಪಲಲ್ಲಿ ವಾಸಮಾಡಿಕೊಂಡಿದ್ದನು.

ಬಳಿಕ ಒಮ್ಮೆ ವೇದಾಧ್ಯಯನಸಂಪನ್ನರೂ ಶಾಂತಾಂತಃಕರಣರಾದವರೂ ಜಿತೇಂದ್ರಿಯರೂ ಸಾಂಗವೇದಗಳಲ್ಲಿ ಪಾರಂಗತರೂ ಮತ್ತು ತಪಸ್ವಿಗಳೂ ಆದ

ಶಿಷ್ಯರುಗಳು ಆ ವ್ಯಾಸರನ್ನು ಸುತ್ತುವರಿದು ಕುಳಿತುಕೊಂಡಿರುತ್ತಿದ್ದರು. ಅವರು ಕೈಮುಗಿದುಕೊಂಡು ಇಂತೆಂದರು: 'ನಾವು ತೇಜಸ್ವಿಗಳಾಗಿರುತ್ತೇವೆ, ನಮ್ಮ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿರುತ್ತದೆ. ಆದರೆ ಈಗ ಗುರುಗಳ ಒಂದು ಅನುಗ್ರಹವನ್ನು ಪಡದುಕೊಳ್ಳಬೇಕೆಂಬ ಇಚ್ಛೆಯು ನಮಗೆ ಉಂಟಾಗಿರುತ್ತದೆ'. ಇಂತೆಂಧ ಅವರ ವಚನವನ್ನು ಕೇಳಿ ಆ ಬ್ರಹ್ಮರ್ಷಿಗಳು 'ಮಕ್ಕಳಿರ, ನಿಮಗೆ ನಾನು ಯಾವ ಪ್ರಿಯವನ್ನು ಮಾಡಬೇಕೊ, ಹೇಳಿರಿ!' ಎಂದರು.

ಎಲೈ ರಾಜನೆ, ಆಗ ಇಂತೆಂದ ಗುರುಗಳ ವಚನವನ್ನು ಕೇಳಿ, 'ಎಲೈ ಮುನಿಸತ್ತಮರೆ, ಉಪಾಧ್ಯಾಯರಾದ ನೀವು ಪ್ರೀತರಾಗಿದ್ದರೆ ನಾವು ಧನ್ಯರು; ನಮಗೆ ಬೇಕಾಗಿರುವದು ಇದೊಂದೇ ವರ: ಅದೇನೆಂದರೆ, ಇನ್ನು ತಮ್ಮ ಆರನೆಯ ಶಿಷ್ಯನು ಮತ್ತೊಬ್ಬನು ಪ್ರಖ್ಯಾತನಾಗಬಾರದು. ಈ ಒಂದು ವರವನ್ನು ಕೊಡಬೇಕೆಂದು ಮಹರ್ಷಿಗಳಾದ ತಮ್ಮನ್ನು ಪ್ರಾರ್ಥಿಸುತ್ತೇವೆ. ಈ ವಿಷಯದಲ್ಲಿ ನಮ್ಮಲ್ಲಿ ತಾವು ಪ್ರಸನ್ನರಾಗಬೇಕು. ನಾವು ನಾಲ್ಕುಜನ ಶಿಷ್ಯರು, ಗುರುಪುತ್ರನು ಐದನೆಯವನು ನಮ್ಮಲ್ಲಿಯೇ ವೇದಗಳು ನಿಂತರಲಿ, ಇದೇ ನಾವು ಬೇಡುವ ವರವು.

ವೇದಾರ್ಥತತ್ತ್ವಜ್ಞರೂ ಪಾರಲೌಕಿಕಾರ್ಥದ ಚಿಂತಕರೂ ಆದ ವ್ಯಾಸರು ಧರ್ಮವೂ ನಿಃಶ್ರೇಯಸಕರವೂ ಆದ ಈ ವಾಕ್ಯವನ್ನು ನುಡಿದರು: "ಈ ವೇದವಿದ್ಯೆಯನ್ನು ಯಾವಾಗಲೂ ಬ್ರಾಹ್ಮಣನಿಗೆ ದಾನಮಾಡಬೇಕು. ಆ ಶಿಷ್ಯನಾದವನು ಶುಶ್ರೂಷುವಾಗಿರಬೇಕು, ಯಾವಾಗಲೂ ಬ್ರಹ್ಮಲೋಕದಲ್ಲಿ ವಾಸವಾಗಿರಬೇಕೆಂಬ ಇಚ್ಛೆಯುಳ್ಳವನಾಗಿರಬೇಕು. ನೀವು ಬಹುಸಂಖ್ಯಾಕರಾಗಿರಿ, ಈ ವೇದವನ್ನು ವಿಸ್ತರಪಡಿಸಿರಿ. ಶಿಷ್ಯನಲ್ಲದವನಿಗಾಗಲಿ, ನಿಯಮವಿಲ್ಲದವನಿಗಾಗಲಿ, ಕೃತಾತ್ಮನಲ್ಲದವನಿಗಾಗಲಿ ಹೇಳಬಾರದು. ಈ ಶಿಷ್ಯಗುಣಗಳನ್ನು ಯಥಾರ್ಥವಾಗಿ ತಿಳಿದುಕೊಳ್ಳಬೇಕು; ಪರೀಕ್ಷೆಮಾಡದೆ ಈ ವಿದ್ಯೆಯನ್ನು ಯಾರಿಗೆಂದರೆ ಅವನಿಗೆ ದಾನಮಾಡಬಾರದು. ಶಿಷ್ಯರ ಕುಲ, ಗುಣ-ಮುಂತಾದವುಗಳನ್ನು ಪರೀಕ್ಷಿಸಬೇಕು. ಶಿಷ್ಯರನ್ನು ಅಕಾರ್ಯದಲ್ಲಿ, ಅಥವಾ ಭಯಾಕುಲಕಾರ್ಯದಲ್ಲಿ ತೊಡಗಿಸಬೇಡಿರಿ. ಬುದ್ಧಿಗೂ ಪಠಣಕ್ರಮಕ್ಕೂ ಅನುಗುಣವಾಗಿ ವಿದ್ಯೆಯು ಫಲಿಸುವದು. ಒಬ್ಬೊಬ್ಬನೂ ಕಷ್ಟಗಳಿಂದ ಪಾರಾಗಲಿ!

ಎಲ್ಲರೂ ಕಲ್ಯಾಣವನ್ನು ಕಂಡುಕೊಳ್ಳಲಿ! ಬ್ರಾಹ್ಮಣನನ್ನು ಮುಂದುಮಾಡಿಕೊಂಡು ನಾಲ್ಕು ವರ್ಣದವರಿಗೂ ವಿದ್ಯೆಯನ್ನು ಹೇಳಬೇಕು. ಈ ವೇದವಿದ್ಯೆಯ ಅಧ್ಯಯನವು ಮಹಾಕಾರ್ಯವಾಗಿರುತ್ತದೆ. ಈ ವೇದಗಳನ್ನು ಸ್ವಯಂಭುವು ದೇವತೆಗಳ ಸ್ತುತ್ಯರ್ಥವಾಗಿ ಸೃಷ್ಟಿಸಿರುತ್ತಾನೆ; ವೇದಪಾರಂಗತನಾದ ಬ್ರಾಹ್ಮಣನನ್ನು ಯಾವನು ನಿಂದಿಸುವನೋ ಅವನಿಗೆ ನಿಸ್ಸಂಶಯವಾಗಿ ಪರಾಭವವುಂಟಾಗುವದು. ಯಾವನು ಅವಿಧಿಪೂರ್ವಕವಾಗಿ ಹೇಳುವನೋ ಯಾವನು ಅಧರ್ಮದಿಂದ ಕೇಳುವನೋ, ಅವರಿಬ್ಬರಲ್ಲಿ ಒಬ್ಬನು ಅವಶ್ಯವಾಗಿ ಮರಣವನ್ನು ಪಡೆಯುವನು. ಅಥವಾ ಒಬ್ಬನು ಇನ್ನೊಬ್ಬನಿಗೆ ದ್ವೇಷ್ಯನಾಗುವನು.

ಇಗೋ, ಅಧ್ಯಯನವಿಷಯದಲ್ಲಿ ನಿಮಗೆ ಎಲ್ಲವನ್ನೂ ಹೇಳಿರುತ್ತೇನೆ. ಇದರಿಂದ ಶಿಷ್ಯರಿಗೆ ಉಪಕಾರವಾಗುವದು. ಇದು ನಿಮ್ಮ ಹೃದಯದಲ್ಲಿರಲಿ!

* * * * *

## 45. ವ್ಯಾಸನಾರದ–ಸಮಾಗಮ*

## (1)

ಭೀಷ್ಮರಿಂತೆಂದರು: "ಗುರುಗಳ ಈ ವಾಕ್ಯವನ್ನು ಕೇಳಿದ ಮಹಾತೇಜಸ್ವಿಗಳಾದ ವ್ಯಾಸಶಿಷ್ಯರು ಹರ್ಷಯುಕ್ತರಾಗಿ ಒಬ್ಬರನ್ನೊಬ್ಬರು ಆಲಂಗಿಸಿಕೊಂಡರು. 'ಪೂಜ್ಯರಾದ ಗುರುಗಳು ನಮ್ಮ ಹಿತಕ್ಕಾಗಿ ಹೇಳಿದ್ದು ನಮ್ಮ ಮನಸ್ಸಿನಲ್ಲಿ ರೂಢವಾಗಿರುತ್ತದೆ. ಅದರಂತೆಯೇ ಮಾಡೋಣ!' ಎಂದು ಒಬ್ಬರೊಡನೊಬ್ಬರು ಮಾತನಾಡಿಕೊಂಡು ಸುಪ್ರೀತಮನಸ್ಕರಾಗಿ, ಆ ವಾಕ್ಯವಿಶಾರದರು ಮತ್ತೂ ಗುರುಗಳ ಬಳಿಯಲ್ಲಿ ಹೀಗೆಂದು ಬಿನ್ನವಿಸಿಕೊಂಡರು: "ಮಹಾಮುನಿಗಳೆ, ಈ ಪರ್ವತವನ್ನು

* ಸಂಪುಟ 42; ಸಂಚಿಕೆ 2; ಅಕ್ಟೋಬರ್ 1972

ಬಿಟ್ಟು ಭೂಲೋಕಕ್ಕೆ ಹೋಗಿ ವೇದಗಳನ್ನು ವಿಭಾಗಮಾಡಿ ಪ್ರಚಾರಮಾಡಬೇಕೆಂದು ನಮಗೆ ಇಚ್ಛೆಯುಂಟಾಗಿದೆ. ಇದು ತಮಗೆ ಒಪ್ಪಾದರೆ ಅನುಜ್ಞೆಯನ್ನು ಮಾಡಬೇಕು."

ಪರಾಶರಸುತರಾದ ವ್ಯಾಸಪ್ರಭುಗಳು ಆಗ ಅವರ ಮಾತನ್ನು ಕೇಳಿ, ಧರ್ಮಾರ್ಥಗಳಿಂದೊಡಗೂಡಿದ ಹಿತಕರವಾದ ಈ ವಾಕ್ಯವನ್ನು ನುಡಿದರು: 'ನಿಮಗೆ ಇಷ್ಟವೆಂದಾದರೆ ದೇವಲೋಕಕ್ಕಾದರೂ ಹೋಗಿರಿ, ಭೂಲೋಕಕ್ಕಾದರೂ ಹೋಗಿರಿ, ಆದರೆ ಎಚ್ಚರಿಕೆಯಿಂದಿರಬೇಕು; ಏಕೆಂದರೆ ಧರ್ಮವು ಅನೇಕ ನೆಪಗಳಿಂದ ಜನರನ್ನು ಪ್ರಲೋಭನಮಾಡುವ ಸಂಭವವಿದೆ.'

ಶಿಷ್ಯರು ಸತ್ಯವಾದಿಗಳಾದ ವ್ಯಾಸರ ಅನುಮತಿಯನ್ನು ಪಡೆದುಕೊಂಡು; ಅವರಿಗೆ ಪ್ರದಕ್ಷಿಣಪೂರ್ವಕವಾಗಿ ತಲೆಬಾಗಿ ಹೊರಟುಹೋದರು. ಭೂಲೋಕಕ್ಕೆ ಇಳಿದು ಬಂದು ಚತುರ್ಹೋತ್ರವನ್ನು (ಅಗ್ನಿಹೋತ್ರದಿಂದ ಹಿಡಿದು ಸೋಮಯಾಗದವರೆಗಿನ ಕರ್ಮವನ್ನು) ಪ್ರಚಾರಮಾಡುತ್ತಾ ವಿಪ್ರರನ್ನೂ ಕ್ಷತ್ರಿಯರನ್ನೂ ವೈಶ್ಯರನ್ನೂ ಕರ್ಮಗಳಲ್ಲಿ ತೊಡಗಿಸುತ್ತಾ ನಿತ್ಯವೂ ದ್ವಿಜರಿಂದ ಪೂಜಿತರಾಗಿ ಮೋದದಿಂದಿರುತ್ತಿದ್ದರು.

ಗೃಹಸ್ಥರಾಗಿ ಯಾಗವನ್ನು ಮಾಡಿಸುವದು, ಅಧ್ಯಯನವನ್ನು ಮಾಡಿಸುವದು- ಇವುಗಳಿಂದ ಶ್ರೀಮಂತರಾಗಿ ಲೋಕವಿಖ್ಯಾತರಾದರು.

ಹೀಗೆ ಶಿಷ್ಯರು ಭೂಲೋಕಕ್ಕೆ ಇಳಿದುಹೋಗಲಾಗಿ ವಿವೇಕಿಗಳಾದ ವ್ಯಾಸರು ಪುತ್ರನೊಡನೆ ಸುಮ್ಮನೆ ಧ್ಯಾನತತ್ಪರರಾಗಿ ಏಕಾಂತದಲ್ಲಿದ್ದುಬಿಟ್ಟರು.

ಆ ವ್ಯಾಸರನ್ನು ಮಹಾತಪಸ್ವಿಯಾದ ನಾರದರು ಆಶ್ರಮದಲ್ಲಿ ಕಂಡಾಗ ಸಮಯೋಚಿತವಾಗಿ ಮಧುರಾಕ್ಷರವಾದ ವಾಕ್ಕಿನಿಂದ ಇಂತೆಂದರು: "ಬ್ರಹ್ಮರ್ಷಿಗಳಾದ ವಾಸಿಷ್ಠರೆ, ಇಲ್ಲಿ ವೇದಘೋಷವೇ ಇಲ್ಲವಲ್ಲ! ಒಬ್ಬರೇ ಏನೋ ಯೋಚಿಸುತ್ತಿರುವವರಂತೆ ಸುಮ್ಮನೆ ಇರುವಿರಲ್ಲ, ಇದೇಕೆ? ವೇದಘೋಷವಿಲ್ಲದ ಈ ಪರ್ವತವು ಎಂದಿನಂತೆ ಶೋಭಿಸುತ್ತಿಲ್ಲ. ಧೂಳೂ ಕತ್ತಲೆಯೂ ಮುಸುಕಿ ಮಂಕಾಗಿರುವ ಚಂದ್ರನಂತೆಯೂ ನಿಷಾದರ ಮನೆಯಂತೆಯೂ ಕಾಂತಿಹೀನವಾಗಿದೆಯಲ್ಲ! ಇಲ್ಲಿ ದೇವತೆಗಳ, ಮತ್ತು ಋಷಿಗಳ ಗುಂಪು ಇರುತ್ತಿದ್ದರೂ

ವೇದಧ್ವನಿಯಿಲ್ಲದ್ದರಿಂದ ಎಂದಿನಂತೆ ಶೋಭಿಸುತ್ತಿಲ್ಲ: ಏಕೆಂದರೆ ಮಹಾತೇಜಸ್ವಿಗಳಿಂದ ವೇದಘೋಷವಿಲ್ಲದ್ದರಿಂದ ಘುನ್ನಿನಂತೆ ಶೋಭಿಸುತ್ತಿಲ್ಲವಲ್ಲ!"

ನಾರದರ ವಚನವನ್ನು ಕೇಳಿ ಕೃಷ್ಣದ್ವೈಪಾಯನವ್ಯಾಸರು ಇಂತೆಂದರು: "ವೇದವಾದವಿಚಕ್ಷಣರಾದ ಮಹರ್ಷಿಗಳೆ, ಇದು ನನ್ನ ಮನಸ್ಸಿಗೆ ಅನುಕೂಲವಾಗಿಯೇ ಇದೆ. ನೀವು ಸರ್ವಜ್ಞರೂ, ಸರ್ವದರ್ಶಿಗಳೂ ಎಲ್ಲಾ ವಿಷಯದಲ್ಲಿ ಕುತೂಹಲಿಗಳೂ ಆಗಿರುತ್ತೀರಿ; ಇದನ್ನು ತಾವೇ ಹೇಳಬೇಕು. ನಾನು ಏನುಮಾಡಬೇಕೋ, ಎಲೈ ಬ್ರಹರ್ಷಿಗಳೆ, ಅದನ್ನು ಹೇಳಿರಿ. ಶಿಷ್ಯರೆಲ್ಲರೂ ಬಿಟ್ಟಗಲಿದಬಳಿಕ ನನ್ನ ಮನಸ್ಸಿಗೆ ಅಷ್ಟು ಹರ್ಷವಾಗುತ್ತಿಲ್ಲ."

ಆಗ ನಾರದರಿಂತೆಂದರು: "ವೇದಗಳಿಗೆ ಮತ್ತೆ ಮತ್ತೆ ಹೇಳಿಕೊಳ್ಳದೆ ಇರುವದೇ ದೋಷವು; ಬ್ರಾಹ್ಮಣನಿಗೆ ನಿಯಮವನ್ನು ಪಾಲಿಸಿಕೊಳ್ಳದೆ ಇರುವದೇ ದೋಷವು; ಭೂಲೋಕಕ್ಕೆ ವಾಹೀಕನೇ ದೋಷವು, ಸ್ತ್ರೀಯರಿಗೆ ಕುತೂಹಲವಿರುವದೇ ದೋಷವು. ಆದ್ದರಿಂದ ತಾವು ಪುತ್ರನೊಡನೆ ವೇದಗಳನ್ನು ಅಧ್ಯಯನಮಾಡಿರಿ! ಆ ಬ್ರಹ್ಮಘೋಷದಿಂದ ರಾಕ್ಷಸರ ಭಯದಿಂದ ತಮಸ್ಸನ್ನು ತೊಲಗಿಸುತ್ತಿರಿ!"

ನಾರದರ ವಚನವನ್ನು ಕೇಳಿ ಪರಮಧರ್ಮಜ್ಞರಾದ ವ್ಯಾಸರು 'ಹಾಗೇ ಆಗಲಿ!' ಎಂದು ವೇದಾಭ್ಯಾಸದಲ್ಲಿ ಮನಸ್ಸನ್ನು ಗಟ್ಟಿಯಾಗಿ ನಿಲ್ಲಿಸಿಕೊಂಡು ಪರಮಹೃಷ್ಟರಾದರು. ಪುತ್ರನಾದ ಶುಕನೊಡನೆ ವೇದಾಭ್ಯಾಸವನ್ನು ಮಾಡಲಾರಂಭಿಸಿದರು. ಶಿಕ್ಷಾನಿಯಮಾನುಸಾರವಾಗಿ ಉಚ್ಚಸ್ವರದಿಂದ ಲೋಕವನ್ನೆಲ್ಲತುಂಬುತ್ತಿರುವರೋ- ಎಂಬಂತೆ ವೇದವನ್ನು ಪಠಿಸುತ್ತಿದ್ದರು.

* * * * *

# 45. ವ್ಯಾಸನಾರದ–ಸಮಾಗಮ*
## (ವ್ಯಾಸ ಶುಕರ ಸಂವಾದ)
## (2)

ಹೀಗೆ ವ್ಯಾಸರು, ಶುಕರು– ಇಬ್ಬರೂ ವೇದಾಧ್ಯಯನವನ್ನು ಅಭ್ಯಾಸ ಮಾಡುತ್ತಾ ಧರ್ಮವಿಚಾರದಲ್ಲಿ ವಾದಮಾಡುತ್ತಾ ಇರುವಲ್ಲಿ ಸಮುದ್ರಕಡೆಯಿಂದ ಬಂದ ಗಾಳಿಯ ವಶದಿಂದ ಎದ್ದ ಬಿರುಗಾಳಿಯು ಹೆಚ್ಚಾಗಿ ಬೀಸತೊಡಗಿತು. ಆಗ ಇದು ಅನಧ್ಯಾಯಕಾಲವೆಂದು ವ್ಯಾಸರು ಆ ಪುತ್ರನನ್ನು ಅಧ್ಯಯನಮಾಡದಂತೆ ನಿಲ್ಲಿಸಿಬಿಟ್ಟರು. ಶುಕನು ಹಾಗೆ ನಿಲ್ಲಿಸಿದ ಮಾತ್ರದಿಂದ ಕುತೂಹಲಯುಕ್ತನಾಗಿ ತಂದೆಯನ್ನು ಇಂತೆಂದು ಕೇಳಿದನು.

"ಬ್ರಾಹ್ಮಣೋತ್ತಮನೆ, ಈ ಬಿರುಗಾಳಿಯು ಹೇಗೆ ಉಂಟಾಗಿದೆ? ಗಾಳಿಯ ವ್ಯಾಪಾರವನ್ನೆಲ್ಲ ದಯವಿಟ್ಟು ನನಗೆ ವಿವರಿಸಿ ಹೇಳಬೇಕು."

ಇಂತೆಂದ ಶುಕನ ಮಾತನ್ನು ಕೇಳಿ ವ್ಯಾಸರು ಪರಮವಿಸ್ಮಯದಿಂದ ಅನಧ್ಯಯನ ನಿಮಿತ್ತವಾದ ವಿಷಯದಲ್ಲಿ ಈ ಮಾತನ್ನಾಡಿದರು: "ಮಗನೆ, ನಿನಗೆ ಈಗ ದಿವ್ಯಚಕ್ಷುಸ್ಸು ಉಂಟಾಗಿರುತ್ತದೆ. ನಿನ್ನ ಮನಸ್ಸು ತಾನೇ ನಿರ್ಮಲವಾಗಿರುತ್ತದೆ; ಕನ್ನಡಿಯಲ್ಲಿ ನಿನ್ನ ಪ್ರತಿಬಿಂಬವನ್ನು ನೀನೇ ಕಾಣುವಂತೆ ನಿನ್ನನ್ನು ನೀನೇ ನೋಡಿಕೊಳ್ಳುತ್ತಿರುವೆ. ತಮೋಗುಣವನ್ನೂ ರಜಸ್ಸನ್ನೂ ಬಿಟ್ಟು ಸತ್ತ್ವಗುಣವನ್ನು ಅವಲಂಬಿಸಿರುತ್ತೀಯೆ. ನಿನ್ನ ಸ್ವರೂಪವನ್ನೂ ವೇದಗಳನ್ನೂ ವಿಂಗಡಿಸಿಕೊಂಡು ಬುದ್ಧಿಯಿಂದ ವಿಚಾರಮಾಡಿಕೊ. ಮನುಷ್ಯನು ಸತ್ತಬಳಿಕ ವಿಷ್ಣುವಿನಬಳಿಗೆ ಹೋಗುವ ದೇವಯಾನವೆಂಬ ಸಾತ್ತ್ವಿಕಮಾರ್ಗವೊಂದು, ಪಿತೃಯಾಣವೆಂಬ ತಾಮಸಮಾರ್ಗವೊಂದು– ಇವೆರಡೂ ಊರ್ಧ್ವಗತಿಗೂ ಅಧೋಗತಿಗೂ ಕಾರಣವಾಗಿರುತ್ತವೆ. ಪೃಥಿವಿಯ ಮೇಲೂ ಅಂತರಿಕ್ಷದಲ್ಲಿಯೂ ಬೀಸುವ ವಾಯುಗಳಿವೆಯಲ್ಲ, ಇವು ಏಳು ಪ್ರಕಾರಗಳಾಗಿರುತ್ತವೆ. ಇವುಗಳನ್ನು ಒಂದೊಂದಾಗಿ ತಿಳಿಯಿಸಿಕೊಡುವೆನು. ಕೇಳು:

ಇಲ್ಲಿ ದೇವಗಣಗಳಾದ ಸಾಧ್ಯರು ಮಹಾಪ್ರಾಣಿಗಳು ಮತ್ತು ಮಹಾಬಲರು.

---
* ಸಂಪುಟ 42; ಸಂಚಿಕೆ 3; ನವೆಂಬರ್ 1972

ಅವರಿಗೆ ದುರ್ಜಯನಾದ **ಸಮಾನ**ವೆಂಬ ಮಗನು ಹುಟ್ಟಿದನು. ಅವರಿಗೆ **ಉದಾನ**ನೆಂಬ ಮಗನಾದನು. ಅವನಿಗೆ **ವ್ಯಾನ**ನೆಂಬ ಮಗನು ಹುಟ್ಟಿದನು. ಅವನಿಗೆ **ಅಪಾನ**ನೂ ಆ (ಅಪಾನನಿಗೆ) **ಪ್ರಾಣ**ನೆಂಬ ಮತ್ತೊಬ್ಬನು ಆದನು.

ಪ್ರಾಣನಿಗೆ ಮಕ್ಕಳಾಗಲಿಲ್ಲ; ಅವನು ತನಗೆ ಎದುರಿಲ್ಲದವನೂ ಶತ್ರುಗಳಿಗೆ ಸಂತಾಪವನ್ನುಂಟುಮಾಡುವವನೂ ಆಗಿದ್ದನು. ಆ (ಐವರಿಗೆ) ಬೇರೆಬೇರೆಯ ಕರ್ಮಗಳು ಯಾವಯಾವದೆಂಬುದನ್ನು ಇದ್ದದ್ದುಇದ್ದಂತೆ ತಿಳಿಯಿಸುವೆನು ಕೇಳು: ಪ್ರಾಣನು ಎಲ್ಲೆಲ್ಲಿಯೂ ಇರುವ ಪ್ರಾಣಿಗಳಿಗೆ ಬೇರೆ ಬೇರೆಯ ವ್ಯಾಪಾರವನ್ನು ಮಾಡಿಸುತ್ತಿರುತ್ತಾನೆ. ಪ್ರಾಣಿಗಳನ್ನು ಬದುಕುವಂತೆ ಮಾಡಿರುವದರಿಂದಲೇ ಅವನಿಗೆ **ಪ್ರಾಣನು** ಎಂದು ಹೆಸರು. ಹೊಗೆಯಿಂದಲೂ ಉಷ್ಣದಿಂದಲೂ ಹುಟ್ಟಿರುವ ಮೋಡಗಳನ್ನು ಒಂದುಕಡೆಯಿಂದ ಇನ್ನೊಂದುಕಡೆಗೆ ಒಯ್ಯುವ ವಾಯುವು **'ಪ್ರವಹ'**ನೆಂಬ ಒಂದನೆಯ ವಾಯು. ಅಂತರಿಕ್ಷದಲ್ಲಿ ರಸದ್ರವ್ಯವನ್ನು ಪಡೆದು ಮಿಂಚುಗಳಿಂದ ಮಹಾಕಾಂತಿಯುಕ್ತನಾಗಿ **ಆವಹ**ನೆಂಬ ಎರಡನೆಯ ವಾಯುವು ಗುಡುಗುತ್ತಿರುವನು. ಯಾವನು ಚಕ್ರಾದಿಜ್ಯೋತಿಗಳ ಉದಯವನ್ನು ಮಾಡಿಸುವನೋ, ದೇಹಗಳೊಳಗೆ ಇರುವ ಯಾವನನ್ನು 'ಉದಾನ' ವೆಂದು ಬಲ್ಲವರು ಕರೆಯುತ್ತಿರುವರೋ, ಯಾವನು ನಾಲ್ಕು ಸಮುದ್ರಗಳಿಂದ ನೀರನ್ನು ಎತ್ತಿ ಆಕಾಶದಲ್ಲಿರುವ ಮೋಡಗಳಿಗೆ ಸಲ್ಲಿಸುತ್ತಿರುವನೋ, ಯಾವನು ಮೋಡಗಳಿಗೆ ನೀರನ್ನು ಕೊಟ್ಟ ಬಳಿಕ ಪರ್ಜನ್ಯನಿಗೆ ಅದನ್ನು ಕೊಡುವನೋ, ಆ ಸದಾಗತಿಯಾದ ವಾಯುವು **ಉದ್ವಹ**ನೆಂಬ ಹೆಸರುಳ್ಳಾತನು, ಯಾವನಿಂದ ಬೇರೆಬೇರೆಯಾಗಿ ಹೋಗುತ್ತಿರುವ ಮೋಡಗಳು ರಾಶಿಯಾಗಿ ಕೂಡಿಸಿದ ಬಲವಾದ ಮೋಡಗಳಾಗಿ ಮಳೆಯನ್ನು ಕರೆಯುವದಕ್ಕೆ ಆರಂಭಿಸುವವೋ, ಸಣ್ಣಸಣ್ಣನದಿಗಳು ಒಟ್ಟುಗೂಡಿ ಭೋರ್ಗರೆಯುತ್ತಿರುವವೋ ಮತ್ತು ತಾವೂ ಯಾವಾತನ ಪ್ರೇರಣೆಯಿಂದ ಮೋಡಗಳಾಗುತ್ತಿರುವವೋ, ಯಾವಾತನು ಆಕಾಶದಲ್ಲಿ ಸಂಚರಿಸುವ ವಿಮಾನಗಳನ್ನು ತಾನೇ ನಡೆಯಿಸುತ್ತಿರುವನೋ, ಇವನು ಗಿರಿವಿಮರ್ದನನಾದ **ಸಂವಹ**ನೆಂಬ ನಾಲ್ಕನೆಯ ವಾಯು. ಯಾವನು ಸೂಕ್ಷ್ಮನಾಗಿ ವೇಗದಿಂದ ಮಹಾಶಬ್ದದೊಡನೆ ಬೀಸುತ್ತ ದೊಡ್ಡದೊಡ್ಡ ಮರಗಳನ್ನು ಕಿತ್ತುಹಾಕುತ್ತಿರುವನೋ, ಯಾವನಿಂದೊಡಗೂಡಿರುವ ಬಲಾಹಕಗಳೆಂಬ ಕಾಲಮೇಘಗಳು ದಾರುಣವಾಗಿ ಉತ್ಪಾತವನ್ನುಂಟುಮಾಡುತ್ತಾ ಸಂಚರಿಸುತ್ತಿರುವವೋ, ಆಕಾಶದಲ್ಲಿ ಗುಡುಗುತ್ತಿರುವ

ಅವನು **ವಿವಹ**ನೆಂಬ ಹೆಸರಿನ ಮಹಾವೇಗವುಳ್ಳ ಐದನೆಯ ವಾಯು. ಯಾವನ ಆಧಾರದಿಂದ ದಿವ್ಯಜಲವು ಆಕಾಶದಲ್ಲಿಯೇ ಹರಿಯುತ್ತಿರುವದೋ ಯಾವನು ಆಕಾಶಗಂಗೆಯ ಪವಿತ್ರಜಲವನ್ನು ಹಿಡಿದು ನಿಲ್ಲಿಸಿಕೊಂಡಿರುವನೋ, ಯಾವನಲ್ಲಿ ಸಹಸ್ರರಶ್ಮಿಯಾಗಿ ಭೂಮಿಯನ್ನು ಬೆಳಗುತ್ತಿರುವ ಸೂರ್ಯನು ತಡೆಯಲ್ಪಟ್ಟು ಒಂದೇ ರಶ್ಮಿಯುಳ್ಳವನಂತೆ ಕಾಣಿಸುತ್ತಿರುವನೋ, ಯಾವನಿಂದ ದಿವ್ಯಾಮೃತದ ನಿಧಿಯಾದ ಚಂದ್ರನು ಪೋಷಿತನಾಗಿರುತ್ತಾನೋ, ಆ ಜಯಶಾಲಿಗಳಲ್ಲೆಲ್ಲ ಶ್ರೇಷ್ಠನಾದ ಆರನೆಯ ವಾಯು **ಪರಿವಹ**ನೆಂಬ ಹೆಸರುಳ್ಳವನು, ಎಲ್ಲಾ ಪ್ರಾಣಿಗಳ ಪ್ರಾಣವನ್ನು ಯಾವನು ಅಂತಕಾಲದಲ್ಲಿ ತೊಲಗಿಸುವನೋ, ಮೃತ್ಯುವೂ ಯಮನೂ ಯಾವನ ಮಾರ್ಗವನ್ನೇ ಅನುಸರಿಸುತ್ತಿರುವದೋ, ಶಾಂತನಾದ ಬುದ್ಧಿಯಿಂದ ಚೆನ್ನಾಗಿ ಆತ್ಮನನ್ನೇ ನಿತ್ಯವೂ ಅನ್ವೀಕ್ಷಿಸಿಕೊಂಡಿರುವ ಧ್ಯಾನಸ್ವಭಾವದಲ್ಲಿಯೇ ಅಭಿರತರಾಗಿರುವವರಿಗೆ ಯಾವನು ಅಮೃತತತ್ವವನ್ನು ಕೊಡುವ ಸಾಮರ್ಥ್ಯವುಳ್ಳವನಾಗಿರುವನೋ ಯಾವನನ್ನು ಸೇರುವದಕ್ಕೆ ಪ್ರಜಾಪತಿಯ ಹತ್ತುಸಾವಿರ ಪುತ್ರರೂ ದಿಕ್ಕುಗಳ ಕೊನೆಯನ್ನು ಕಾಣಲಾರದೆಹೋದರೋ, ಯಾವನ ಸ್ಪರ್ಶದಿಂದ ಪರಾಭೂತನಾದವನು ಮುಂದಕ್ಕೆ ಹೋಗುತ್ತಾ ಇರುವನಲ್ಲದೆ ಹಿಂದಕ್ಕೆ ತಿರುಗಲಾರನೋ ಆ ದುರತಿಕ್ರಮನಾಗಿರುವ ವಾಯು **ಪರಾವಹ**ನೆಂಬ ಮತ್ತೊಬ್ಬನು. ಹೀಗೆ ದಿತಿಯ ಪುತ್ರರಾದ ಈ ಪರಮಾದ್ಭುತರೂಪರಾದ ಈ ವಾಯುಗಳು ಸತತವಾಗಿ ಸರ್ವವ್ಯಾಪಿಗಳಾಗಿ ಸರ್ವವನ್ನೂ ಧರಿಸಿಕೊಂಡು ನಿರಂತರವಾಗಿ ಬೀಸುತ್ತಿರುವರು. ಈ ಪರಮಾಶ್ಚರ್ಯ ವೃತ್ತಾಂತವನ್ನು – ಚೆನ್ನಾಗಿ ಬೀಸಿದ ಆ ವಾಯುವಿನಿಂದ ಈ ಪರ್ವತೋತ್ತಮವು ಇದ್ದಕ್ಕಿದ್ದಂತೆ ಏತಕ್ಕೆ ನಡುಗಿತೆಂಬ ವಿಷಯವನ್ನು – (ಹೇಳಿರುತ್ತೇನೆ). ವಿಷ್ಣುವಿನ ನಿಃಶ್ವಾಸನಾದ ಈ ವಾಯುವು ಇದ್ದಕ್ಕಿದ್ದಂತೆ ಯಾವಾಗ ಎದ್ದುಕೊಳ್ಳುವನೋ ಆಗ ಅಪ್ಪ, ಜಗತ್ತು ಬಹುವಾಗಿ ವ್ಯಥೆಯನ್ನು ಪಡೆಯುವದು. ಆದ್ದರಿಂದ ಬ್ರಹ್ಮವಿದರುಗಳು ಬಿರುಗಾಳಿಯೆದ್ದಾಗ ವೇದಗಳನ್ನು ಅಧ್ಯಯನ ಮಾಡುವದಿಲ್ಲ. ವಾಯುವಿಗೆ ವಾಯುವಿನಿಂದ ಭಯವಾಗಬೇಕಷ್ಟೆ? ಭಗವಂತನ ನಿಃಶ್ವಾಸವಾದ ವಾಯುವಿಗೂ ಎಂದರೆ ವೇದಕ್ಕೂ ಆದರಿಂದ ವಿಘ್ನವಾಗುವದು."

ಆ ಪರಾಶರಸುತನಾದ ವ್ಯಾಸನು ಇಷ್ಟನ್ನು ಹೇಳಿದಬಳಿಕ 'ಇನ್ನು ನೀನು ವೇದಾಧ್ಯಯನವನ್ನು ಮಾಡು' ಎಂದು ಹೇಳಿ ಆಕಾಶಗಂಗೆಯ ಕಡೆಗೆ ಹೊರಟುಹೋದನು.

# 46. ಶುಕನಿಗೆ ನಾರದರ ಉಪದೇಶ*

## (1)

ಭೀಷ್ಮರಿಂತೆಂದರು: ಈ ನಡುವೆ ಜನಶೂನ್ಯವಾಗಿದ್ದ ಆಶ್ರಮಕ್ಕೆ, ಸ್ವಾಧ್ಯಾಯನಿರತನಾಗಿದ್ದ ಶುಕನಿಗೆ ಬೇಕಾಗಿದ್ದ ವೇದಾರ್ಥಗಳನ್ನು ತಿಳಿಯಿಸಿ ಕೊಡಬೇಕೆಂದು, ನಾರದರು ಬಂದರು. ಅಲ್ಲಿಗೆ ಬಂದ ಆ ದೇವರ್ಷಿಗಳಾದ ನಾರದರನ್ನು ಶುಕನು ವೇದೋಕ್ತವಿಧಿಗನುಸಾರವಾಗಿ ಅರ್ಘ್ಯಾದಿಗಳಿಂದ ಸತ್ಕರಿಸಿದನು.

ಆಗ ನಾರದರು ಸುಪ್ರೀತರಾಗಿ 'ಧರ್ಮಾತ್ಮರಲ್ಲಿ ಶ್ರೇಷ್ಠನಾದ ಶುಕನೆ, ನಾನು ನಿನ್ನ ಸತ್ಕಾರದಿಂದ ಹೃಷ್ಟನಾಗಿರುತ್ತೇನೆ. ನಿನಗೆ ಯಾವ ಶ್ರೇಯಸ್ಸನ್ನುಂಟು ಮಾಡಲಿ? ಹೇಳು' ಎಂದರು. ಎಲೈ ಭರತವಂಶೋತ್ಪನ್ನನಾದ ಯುಧಿಷ್ಠಿರನೆ, ಆಗ ಶುಕನು ' ಈ ಲೋಕದಲ್ಲಿ ಯಾವದು ಹಿತವಾದದ್ದೋ ಅದನ್ನು ನನಗೆ ಉಪದೇಶಿಸಿರಿ' ಎಂದನು.

ಆಗ ನಾರದರಿಂತೆಂದರು: "ಪೂರ್ವದಲ್ಲಿ ಶುದ್ಧಾಂತಃಕರಣರಾದ ಋಷಿಗಳು ತತ್ತ್ವವನ್ನು ಅರಿತುಕೊಳ್ಳಬೇಕೆಂದು ಇರುವಲ್ಲಿ ಪೂಜ್ಯನಾದ ಸನತ್ಕುಮಾರನು ಈ ಮಾತನ್ನು ಹೇಳಿದನು.

**'ವಿದ್ಯೆಗೆ ಸಮನಾದ ಚಕ್ಷುರಿಂದ್ರಿಯವಿಲ್ಲ, ಸತ್ಯಕ್ಕೆ ಸಮನಾದ ತಪಸ್ಸಿಲ್ಲ, ರಾಗಕ್ಕೆ ಸಮನಾದ ದುಃಖವು ಮತ್ತೊಂದಿಲ್ಲ, ತ್ಯಾಗಕ್ಕೆ ಸಮನಾದ ಸುಖವು** ಇನ್ನೊಂದಿಲ್ಲ. ಪಾಪಕರ್ಮವನ್ನು ಬಿಡುವದು, ಯಾವಾಗಲೂ ಪುಣ್ಯಕರ್ಮವನ್ನೇ ಮಾಡುತ್ತಿರುವದು, ಉತ್ತಮವಾದ ನಡತೆ, ಉತ್ತಮವಾದ ಆಚಾರ– ಇದೇ ಎಲ್ಲಕ್ಕೂ ಹೆಚ್ಚಿನ ಶ್ರೇಯಸ್ಸು. ಸುಖರಹಿತವಾದ ಮನುಷ್ಯಜನ್ಮವನ್ನು ಹೊಂದಿದಾಗ ಯಾವನು ವಿಷಯಾಸಕ್ತನಾಗುತ್ತಾನೋ ಅವನು ಮೋಹಕ್ಕೊಳಗಾಗುತ್ತಾನೆ. ಅವನು ದುಃಖದಿಂದ ಮುಕ್ತನಾಗಲಾರನು. ಏಕೆಂದರೆ ವಿಷಯಸಂಯೋಗವೆಂಬುದು ದು:ಖರೂಪವಾಗಿಯೇ ಇರುತ್ತದೆ. ಯಾವನು ವಿಷಯಾಸಕ್ತನಾಗಿರುವನೋ ಅವನ

---

* ಸಂಪುಟ 42; ಸಂಚಿಕೆ 4; ಡಿಸೆಂಬರ್ 1972

ಬುದ್ಧಿಯು ಮೋಹಜಾಲವನ್ನು ಬೆಳೆಯಿಸುತ್ತದೆ. ಮೋಹಜಾಲದಿಂದ ಆವೃತನಾಗಿ ಅವನು ಇಲ್ಲಿಯೂ ಪರಲೋಕದಲ್ಲಿಯೂ ದುಃಖವನ್ನೇ ಪಡೆಯುವನು. ಶ್ರೇಯಸ್ಸಾಗಬೇಕೆಂದು ಇಚ್ಛಿಸುವವನು ಎಲ್ಲಾ ಉಪಾಯಗಳಿಂದಲೂ ಕಾಮವನ್ನೂ ಕ್ರೋಧವನ್ನೂ ಬಿಗಿಹಿಡಿಯುವದನ್ನು ಅಭ್ಯಾಸಮಾಡಬೇಕು. ಏಕೆಂದರೆ ಅವು ಶ್ರೇಯಸ್ಸನ್ನು ಹಾಳುಮಾಡುವದಕ್ಕೆ ಉದ್ಯುಕ್ತವಾಗಿರುತ್ತವೆ. ನಿತ್ಯವೂ ತಪಸ್ಸನ್ನು ಕ್ರೋಧಕ್ಕೆ ಸಿಕ್ಕದಂತೆ ಕಾಪಾಡಿಕೊಳ್ಳಬೇಕು, ಸಿರಿಯನ್ನು ಮಾತ್ಸರ್ಯಕ್ಕೊಳಗಾಗದಂತೆ ಕಾಪಾಡಿಕೊಳ್ಳಬೇಕು; ವಿದ್ಯೆಯನ್ನು ಮಾನಾಪಮಾನಗಳಿಗೆ ಒಳಗಾಗದಂತೆ ಕಾಪಾಡಿಕೊಳ್ಳಬೇಕು; ಅಂತಃಕರಣವನ್ನು ಪ್ರಮಾದಕ್ಕೆ ಸಿಕ್ಕದಂತೆ ಉಳಿಸಿಕೊಳ್ಳಬೇಕು. ಕ್ರೌರ್ಯವಿಲ್ಲದಿರುವದೇ ಪರಮಧರ್ಮವು. ಕ್ಷಮೆ ಎಂಬುದು ಎಲ್ಲಕ್ಕೂ ಹೆಚ್ಚಿನ ಬಲವು; ಆತ್ಮಜ್ಞಾನವು ಎಲ್ಲಕ್ಕೂ ಹೆಚ್ಚಿನ ಜ್ಞಾನವು. ಸತ್ಯಕ್ಕಿಂತ ಹೆಚ್ಚಿನದು ಇಲ್ಲವೇ ಇಲ್ಲ.

ಸತ್ಯವನ್ನು ನುಡಿಯವದೇ ಒಳ್ಳೆಯದು, ಸತ್ಯಕ್ಕಿಂತಲೂ ಹಿತವನ್ನು ಆಡುವದುತ್ತಮ. ಯಾವದು ಪ್ರಾಣಿಗಳಿಗೆ ಅತ್ಯಂತಹಿತವೋ ಇದೇ ಸತ್ಯವೆಂದು ನನ್ನ ಮತ. ಸರ್ವಕರ್ಮಗಳನ್ನೂ ಬಿಟ್ಟು ಯಾವ ಇಚ್ಛೆಯೂ ಇಲ್ಲದೆ, ತನ್ನದೆಂಬುದೇ ಇಲ್ಲದೆ, ಎಲ್ಲವನ್ನೂ ಯಾವನು ಬಿಟ್ಟಿರುವನೋ ಆತನೇ ವಿದ್ವಾಂಸನು, ಅವನೇ ಪಂಡಿತನು. ಯಾವನು ತನ್ನ ವಶದಲ್ಲಿರುವ ಇಂದ್ರಿಯಗಳಿಂದ ಇಂದ್ರಿಯಾರ್ಥಗಳನ್ನು ಅನುಭವಿಸುತ್ತಾ ತಾನೇ ಎಂದು ತೋರುತ್ತಿರುವ ದೇಹಾದಿಗಳಲ್ಲಿ ತಾನೆಂಬ ಅಭಿಮಾನವಿಲ್ಲದೆ ಅವುಗಳೊಡನೆ ಇದ್ದರೂ ಇಲ್ಲದಿದ್ದರೂ ಒಂದೇ ರೀತಿಯಿಂದ ಇರುತ್ತಿರುವನೋ, ಅವನು ವಿಮುಕ್ತನಾಗಿ ಪರಮಶ್ರೇಯಸ್ಸನ್ನು ಬಲುಬೇಗನೆ ಪಡೆದುಕೊಳ್ಳುವನು. ಎಲೈ ಮುನಿಯೆ, ಯಾವನು ಯಾವ ಪ್ರಾಣಿಗಳನ್ನೂ ಕಾಣದೆ, ಮುಟ್ಟದೆ, ಮಾತನಾಡಿಸದೆ ಇರುವನೋ ಅವನು ಪರಮಶ್ರೇಯಸ್ಸನ್ನು ಪಡೆದುಕೊಳ್ಳುವನು. ಯಾವ ಪ್ರಾಣಿಗಳನ್ನೂ ಹಿಂಸಿಸಬಾರದು, ಎಲ್ಲರಲ್ಲಿಯೂ ಮಿತ್ರಭಾವದಿಂದಿರುತ್ತಾ ಈ ಜನ್ಮವನ್ನು ಪಡೆದು ಯಾರೊಬ್ಬರೊಡನೆಯೂ ವೈರವನ್ನು ಮಾಡಬಾರದು. ಜಿತಾಂತಃಕರಣನಾಗಿರುವ ಆತ್ಮಜ್ಞಾನಿಗೆ, ಯಾವದೊಂದನ್ನೂ ತನ್ನದೆಂದಿಟ್ಟುಕೊಳ್ಳದೆ ಸುಸಂತುಷ್ಟನಾಗಿರುವದು, ಯಾವ ಇಚ್ಛೆಯೂ ಇಲ್ಲದಿರುವದು, ಚಾಪಲ್ಯವಿಲ್ಲದಿರುವದು– ಇದೇ ಪರಮಶ್ರೇಯಸ್ಸಿಗೆ ಸಾಧನವೆನಿಸುವದು.

ಅಪ್ಪ, ನನ್ನದು ಎಂಬುದನ್ನು ಬಿಟ್ಟು ಜಿತೇಂದ್ರಿಯನಾಗಿರು, ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ನಿಃಶೋಕವಾದ ನಿರ್ಭಯವಾದ ಅವಸ್ಥೆಯನ್ನವಲಂಬಿಸಿಕೊಂಡಿರು. ಯಾರಿಗೆ ಭೋಗಾಸಕ್ತಿಯಿರುವದಿಲ್ಲವೋ ಅವರಿಗೆ ಶೋಕವಿರುವದಿಲ್ಲ, ಆದ್ದರಿಂದ ಭೋಗತ್ಯಾಗವನ್ನು ಮಾಡಬೇಕು. ಭೋಗಾಸಕ್ತಿಯನ್ನು ಬಿಟ್ಟರೆ, ಅಪ್ಪ, ದುಃಖಸಂತಾಪದಿಂದ ಮುಕ್ತನಾಗುವೆ. ಯಾವನು ಅಜಿತವಾದ ಆತ್ಮಭಾವವನ್ನು ಸಂಪಾದಿಸಿಕೊಳ್ಳಲಿಚ್ಛಿಸುವನೋ ಅವನು ತಪೋನಿತ್ಯವಾಗಿರಬೇಕು, ದಾಂತನಾಗಿರಬೇಕು, ಮುನಿಯಾಗಿರಬೇಕು, ಅಂತಃಕರಣ ಸಂಯಮವುಳ್ಳಾತನಾಗಿರಬೇಕು, ಸಂಗವಿಷಯಗಳಲ್ಲಿ ಅಸಕ್ತನಾಗಿರಬೇಕು.

ಗುಣಸಂಗಗಳಲ್ಲಿ ಅನಾಸಕ್ತನಾಗಿ ಯಾವಾಗಲೂ ಒಬ್ಬನೇ ಸಂಚರಿಸುತ್ತಾ ಇರುವ ಬ್ರಾಹ್ಮಣನು ಬಲುಬೇಗನೆ ನಿರತಿಶಯವಾದ ಸುಖವನ್ನು ಪಡೆದು ಕೊಳ್ಳುತ್ತಾನೆ.

* * * * *

## 46. ಶಕುನಿಗೆ ನಾರದರ ಉಪದೇಶ*

## (2)

ನಾರದರು ಮತ್ತೂ ಇಂತೆಂದರು: "ದ್ವಂದ್ವಗಳಲ್ಲಿಯೇ ಕ್ರೀಡಿಸುತ್ತಿರುವ ಪ್ರಾಣಿಗಳೊಡನೆ ಇರುತ್ತಿದ್ದರೂ ಯಾವನು ತಾನೊಬ್ಬನೇ ಇದ್ದುಕೊಂಡಿರುವನೋ ಅವನೇ ಪ್ರಜ್ಞಾನತೃಪ್ತನೆಂದು ತಿಳಿದುಕೊ. ಜ್ಞಾನತೃಪ್ತನಾದವನಿಗೆ ಶೋಕವಿರುವದಿಲ್ಲ.

ಶುಭಕರ್ಮದಿಂದ **ದೇವತೆಯಜನ್ಮವನ್ನು** ಪಡೆದುಕೊಳ್ಳುತ್ತಾನೆ. ಪುಣ್ಯ ಪಾಪಗಳ ಮಿಶ್ರದಿಂದ **ಮನುಷ್ಯಜನ್ಮ**ವನ್ನು ಪಡೆಯುತ್ತಾನೆ; ಪಾಪಕರ್ಮಗಳಿಂದ **ಕೀಳುಜನ್ಮ**ವನ್ನು ಪಡೆಯುತ್ತಾನೆ. ಹೀಗೆ ಜೀವನು ಕರ್ಮಪರತಂತ್ರನಾಗಿ ಬೇರೆಬೇರೆಯ ಬಗೆಯ ಜನ್ಮವನ್ನು ಪಡೆದುಕೊಳ್ಳುತ್ತಿರುವನು. ಈ ಜನ್ಮಗಳಲ್ಲಿ ಪ್ರಾಣಿಯಾದವನು, ಸಾವು, ಮುಪ್ಪು – ಎಂಬಿವುಗಳಿಂದಾದ ದುಃಖದಿಂದ ಸುತ್ತುತ್ತಾ ಸತತವಾಗಿ ಬೆಂದುಬೆಂಡಾಗುತ್ತಿರುವನು. ಇದನ್ನು ನೀನು ಅರಿತುಕೊಳ್ಳದೆ

* ಸಂಪುಟ 42; ಸಂಚಿಕೆ 5; ಜನವರಿ 1973

ಇರುವೆಯಲ್ಲ, ಇದು ಹೇಗೆ? ಅಹಿತವನ್ನು ಹಿತವೆಂದು ಭಾವಿಸಿಕೊಳ್ಳುತ್ತಾ, ಅನಿತ್ಯವಾದದ್ದನ್ನೇ ನಿತ್ಯವೆಂದು ಭಾವಿಸಿಕೊಳ್ಳುತ್ತಾ, ಅನರ್ಥವನ್ನೇ ಪುರುಷಾರ್ಥ ವೆಂದುಕೊಳ್ಳುತ್ತಾ ಇರುವೆಯಲ್ಲ! ಇದನ್ನೇಕೆ ಮನದಂದುಕೊಳ್ಳದೆ ಇರುವೆ? ನಿನ್ನಿಂದಲೇ ಹುಟ್ಟಿರುವ ದುಃಖಗಳಿಂದ – ಬಹಳ ದಾರಗಳಿಂದ ಸುತ್ತು ವರಿಯಲ್ಪಟ್ಟಿದ್ದರೂ ಅರಿಯದಿರುವ ರೇಷ್ಮೆಯ ಹುಳುವಿನಂತೆ– ಮನಸ್ಸಿಗೆ ತಂದುಕೊಳ್ಳದೆ ಇರುವೆ! ಪದಾರ್ಥಗಳನ್ನು ಕೂಡಿಹಾಕಿಕೊಂಡು ನನ್ನದೆಂದಿರುವದು ಇನ್ನು ಸಾಕು. ಏಕೆಂದರೆ ನನ್ನದೆಂಬುದೇ ದೋಷಯುಕ್ತವಾಗಿರುತ್ತದೆ. ರೇಷ್ಮೆಯಹುಳುವು ಹೀಗೆ ಕೂಡಿಹಾಕಿಕೊಳ್ಳುವದರಿಂದಲೇ ಅಲ್ಲವೆ, ಬಂಧನ ಕ್ಕೊಳಗಾಗುತ್ತಿರುವದು? ಮಕ್ಕಳುಮರಿ, ಹೆಂಡಿರು, ಕುಟುಂಬ ಇವುಗಳಲ್ಲಿ ಸಕ್ತರಾದ ಪ್ರಾಣಿಗಳು ಕೆಸರಿನ ಗುಂಡಿಗಳಲ್ಲಿ ಬಿದ್ದ ಕಾಡಾನೆಗಳಂತೆ ವಿಷಾದಕ್ಕೊಳಗಾಗುವರು. ಬಲೆಯಿಂದ ಸೆಳೆದುಕೊಂಡ ಮೀನುಗಳು ನೆಲದಮೇಲೆ ಬಿದ್ದಿರುವಂತೆ ಮೋಹವೆಂಬ ಬಲೆಗೆ ಸಿಲುಕಿ ಬಹಳ ದುಃಖಕ್ಕೆ ಒಳಗಾಗಿರುವ ಪ್ರಾಣಿಗಳನ್ನು ನೋಡು! ಕುಟುಂಬ, ಹೆಂಡಿರು ಮಕ್ಕಳು, ಧನಸಹಾಯ– ಇವೆಲ್ಲವೂ ಪರರದೇ, ಅನಿತ್ಯವೇ ; ಇಲ್ಲಿ ತನ್ನದೆಂಬುದು ಯಾವದು? ಪುಣ್ಯ, ಪಾಪ!

ಪರವಶನಾಗಿರುವ ನೀನು ಇದೆಲ್ಲವನ್ನೂ ಬಿಟ್ಟು ಹೋಗಬೇಕಾಗುವದರಿಂದ ಅನರ್ಥದಲ್ಲಿಯೇ ಏಕೆ ಪ್ರಸಕ್ತನಾಗುತ್ತಿರುವೆ? ನಿನ್ನ ಪುರುಷಾರ್ಥಕ್ಕಾಗಿ ಸಾಧನವನ್ನೇಕೆ ಮಾಡಿಕೊಳ್ಳುತ್ತಿಲ್ಲ? ವಿಶ್ರಮಿಸಿಕೊಳ್ಳುವದಕ್ಕೆ ಸ್ಥಳವಿಲ್ಲ. ಯಾವದೊಂದರ ಆಸರೆಯೂ ಇಲ್ಲ. ಹತ್ತಿರ ಬುತ್ತಿಯಿಲ್ಲ, ದಾರಿಯನ್ನು ತೋರಿಸುವವರಿಲ್ಲ– ಇಂಥ ಕಗ್ಗತ್ತಲೆಯ ಕಗ್ಗಾಡಿನಲ್ಲಿ ಒಬ್ಬನೇ ಹೇಗೆ ಸಂಚರಿಸುವೆ? ಹೀಗೆ ಹೊರಟಿರುವ ನಿನ್ನ ಹಿಂದೆ ಯಾರೊಬ್ಬರೂ ಬರುವದೇ ಇಲ್ಲ. ಪುಣ್ಯ ಪಾಪ ಎಂಬುದು ಮಾತ್ರ ನಿನ್ನನ್ನು ಹಿಂಬಾಲಿಸುತ್ತಿರುವದು.

ವಿದ್ಯೆ, ಕರ್ಮ, ಶುಚಿತ್ವ, ಬಹುವಿಸ್ತಾರವಾಗಿರುವ ಜ್ಞಾನ– ಇವುಗಳನ್ನು ಅನುಸರಿಸುವಾತನು ಕೃತಾರ್ಥನಾಗಿ ಮುಕ್ತನಾಗುತ್ತಾನೆ. ಊರಿನಲ್ಲಿ ವಿಷಯಾಸಕ್ತಿ ಯಿಂದಲೇ ವಾಸಮಾಡಿಕೊಂಡಿರುವದೆಂಬುದು ಮನುಷ್ಯನನ್ನು ಕಟ್ಟಿಹಾಕುತ್ತಿರುವ ಹಗ್ಗವು; ಇದನ್ನು ಕತ್ತರಿಸಿಹಾಕಿ ಪುಣ್ಯಾತ್ಮರು ಮುಂದಕ್ಕೆ ಹೋಗುವರು, ಪಾಪಿಗಳು ಇದನ್ನು ಕತ್ತರಿಸಲಾರದೆ ಇರುವರು. ಈ **ಸಂಸಾರ**ವೆಂಬುದು ಒಂದು ನದಿಯು.

ರೂಪವೇ ಇದಕ್ಕೆ ದಡವು; ಮನಸ್ಸೇ ಪ್ರವಾಹವು, ಸ್ಪರ್ಶವು ಇದರಲ್ಲಿರುವ ದ್ವೀಪವು. ರಸವೇ ಸೆಳವು. ವಾಸನೆಯೇ ಇಲ್ಲಿ ಕೆಸರು, ಶಬ್ದವೇ ನೀರು, ಸ್ವರ್ಗವೆಂಬುದು ದುರ್ಗಮವಾದ ಘಟ್ಟವು, ಕ್ಷಮೆಯೇ ಇಲ್ಲಿ ಉಪಯೋಗಿಸಬೇಕಾದ ಹುಟ್ಟು. ಇದು ಸತ್ಯಮಯವಾಗಿರುತ್ತದೆ. ಧರ್ಮ, ಸ್ಥೈರ್ಯ- ಇವೇ ನಿಲ್ಲುವದಕ್ಕೆ ಸಾಧನ. ತ್ಯಾಗವೆಂಬ ಗಾಳಿಯ ಸಹಾಯದಿಂದ ವೇಗದಿಂದ ಹರಿಯುತ್ತಿರುವ ಈ ನದಿಯನ್ನು ದಾಟಬೇಕಾಗಿರುತ್ತದೆ. ಧರ್ಮವನ್ನು ಬಿಡು, ಅಧರ್ಮವನ್ನು ಬಿಡು; ಸತ್ಯಾನೃತಗಳೆರಡನ್ನೂ ಬಿಡು: ಯಾವ ಅಭಿಮಾನದಿಂದ ಅವನ್ನು ಬಿಡಬೇಕಾಗುವದೋ ಅದನ್ನು ಬಿಟ್ಟುಬಿಡು.

ಮೂಳೆ ಎಂಬ ಕಂಬವುಳ್ಳದ್ದಾಗಿ ನರಗಳಿಂದ ಕೂಡಿ, ಮಾಂಸರಕ್ತಗಳಿಂದ ಬಳಿದಿರುವ ಚರ್ಮದ ಹೊದಿಕೆಯುಳ್ಳದ್ದೂ ಕೆಟ್ಟನಾತವುಳ್ಳದ್ದೂ ಆಗಿರುವ ಮಲಮೂತ್ರಗಳಿಂದ ತುಂಬಿರುವ, ಮುಪ್ಪುಸಾವುಗಳಿಂದ ಪೂರ್ಣವಾಗಿರುವ ರೋಗದ ಮನೆಯಾಗಿ ದುಃಖದ ಸ್ಥಾನವಾಗಿ ಕಲ್ಮಷಯುಕ್ತವಾಗಿ ಅನಿತ್ಯವಾಗಿರುವ ಈ ಪಂಚಭೂತಗಳ ಆಶ್ರಯವಾಗಿರುವ ಈ ಶರೀರದ ಅಭಿಮಾನವನ್ನು ಬಿಟ್ಟುಬಿಡು!

ಈ ಚರಾಚರರೂಪವಾದದ್ದೆಲ್ಲವೂ ಪಂಚಭೂತಾತ್ಮಕವಾಗಿರುತ್ತದೆ. ಇದಕ್ಕಿಂತಲೂ ಸೂಕ್ಷ್ಮವಾದ ಮಹತ್ತತ್ತ್ವ, ಐದು ಇಂದ್ರಿಯಗಳು, ತನ್ಮಾತ್ರೆಗಳು ಮತ್ತು ಸತ್ತ್ವರಜಸ್ತಮೋರೂಪವಾದ ಈ ಹದಿನೇಳರ ರಾಶಿಗೆ **ಅವ್ಯಕ್ತ**ವೆಂದು ಹೆಸರು. ಇವುಗಳಲ್ಲದೆ ಐದು ವಿಷಯಗಳು ಮನೋಹಂಕಾರಗಳು. ಇವುಗಳ ವ್ಯಕ್ತರೂಪ ಮತ್ತು ಅವ್ಯಕ್ತರೂಪದಿಂದ ಕೂಡಿದ ಪ್ರಪಂಚವು ಇಪ್ಪತ್ತುನಾಲ್ಕು ತತ್ತ್ವಗಳ ರಾಶಿಯಾಗಿರುತ್ತದೆ. ಇವುಗಳೆಲ್ಲವುಗಳಿಂದ ಕೂಡಿದವನು, **ಪುರುಷ**ನೆನಿಸುತ್ತಾನೆ. ಯಾವಾತನು ಧರ್ಮಾರ್ಥಕಾಮಗಳೆಂಬ ತ್ರಿವರ್ಗವನ್ನೂ ಸುಖ, ದುಃಖ, ಬದುಕು, ಸಾವು- ಇವುಗಳನ್ನೂ ಅರಿತಿರುವನೋ ಅವನಿಗೆ ಸೃಷ್ಟಿಪ್ರಲಯಗಳು ತಿಳಿಯುವವು.

ಇಂದ್ರಿಯಗಳನ್ನು ಬಿಗಿಹಿಡಿದುಕೊಂಡಿರುವವನು- ನೀರಡಿಕೆಯವನು ಜಲಧಾರೆಗಳಿಂದ ತೃಪ್ತನಾಗುವಂತೆ-ತೃಪ್ತನಾಗಿರುತ್ತಾನೆ. ಲೋಕದಲ್ಲೆಲ್ಲ ತನ್ನ

ಆತ್ಮನು ವ್ಯಾಪಿಸಿರುವದನ್ನೂ ತನ್ನ ಆತ್ಮನಲ್ಲಿ ಪ್ರಾಣಿಗಳೆಲ್ಲವೂ ಇರುವದನ್ನೂ ಕಂಡುಕೊಳ್ಳುವ, ಪರಾವರದರ್ಶಿಯಾದವನ ಜ್ಞಾನಮೂಲಕವಾದ ಶಕ್ತಿಯು ಎಂದಿಗೂ ನಾಶವಾಗದೆ ಇರುತ್ತದೆ. ಎಲ್ಲಾ ಪ್ರಾಣಿಗಳನ್ನೂ ಯಾವ ಅವಸ್ಥೆಯಲ್ಲಿ ಕಂಡರೂ, ಯಾವ ಪ್ರಾಣಿಗಳ ಜೊತೆಯಲ್ಲಿದ್ದರೂ ಅವನಿಗೆ ಅಶುಭಕರ್ಮಗಳು ಇರುವದಿಲ್ಲ. ಜ್ಞಾನದಿಂದ ವಿಧವಿಧವಾದ ಕ್ಲೇಶಗಳನ್ನು ಮೀರಿರುವವನಿಗೆ ಲೋಕದಲ್ಲಿ ಬುದ್ಧಿಪ್ರಕಾಶವಾದರೂ ಯಾವ ಲೋಕದ ವ್ಯವಹಾರವೂ ಗೋಳಾಡಿಸುವದಿಲ್ಲ.

ಮೋಕ್ಷೋಪಾಯವನ್ನು ಬಲ್ಲ ನಾರಾಯಣನು ಹೇಳುತ್ತಾನೇನೆಂದರೆ: ಜ್ಞಾನಿಯು ತನ್ನೊಳಗೆ ಅನಾದ್ಯನಂತನಾದ ಅವ್ಯಯನಾದ ಅಕರ್ತೃವು ಅರೂಪನೂ ಆದ ಪರಮಾರ್ಥಜೀವನು ಇರುತ್ತಾನೆ' ಎಂದು ಅರಿತಿರುತ್ತಾನೆ. ಯಾವ ಜೀವನು ತಾನು ಮಾಡುವ ಆಯಾ ಕರ್ಮಗಳಿಂದ ದುಃಖಿಯಾಗಿರುತ್ತಾನೋ, ಅವನು ದುಃಖನಾಶಕ್ಕಾಗಿ ಪ್ರಾಣಿಗಳನ್ನು ಬಗೆಬಗೆಯಾಗಿ ಹಿಂಸಿಸುತ್ತಿರುವನು; ಬಳಿಕ ಮತ್ತೆ ಮತ್ತೊಂದು ಬಗೆಯ ಹೊಸ ಕರ್ಮವನ್ನು ಕೈಗೊಳ್ಳುತ್ತಿರುವನು. ಮತ್ತೆ ಅಪಥ್ಯವನ್ನು ಸೇವಿಸುವ ರೋಗಿಯಂತೆ ಆದರಿಂದ ಪರಿತಪಿಸುತ್ತಾನೆ. ಮೋಹಾಂಧನಾಗಿ ದುಃಖಗಳಲ್ಲಿಯೇ ಸುಖವೆಂಬ ಭಾವನೆಯುಳ್ಳಾತನಾಗಿ ಕರ್ಮಗಳಿಂದ ಬದ್ಧನಾಗಿ ಕಡೆಗೋಲಿನಂತೆ ಕಡೆಯಲ್ಪಡುತ್ತಾನೆ. ಅದರಿಂದ ಬದ್ಧನಾಗಿ ಕರ್ಮಗಳ ಫಲವು ಆರಂಭವಾದಂತೆ ಒಂದೊಂದು ಜನ್ಮವನ್ನು ದಾಟುತ್ತಾ ಬಹುವ್ಯಥೆಯಿಂದ ಸಂಸಾರದಲ್ಲಿ ಚಕ್ರದಂತೆ ಸುತ್ತುತ್ತಿರುತ್ತಾನೆ.

ಹೀಗಿರುವದರಿಂದ ನೀನು ಬಂಧಗಳನ್ನು ತಪ್ಪಿಸಿಕೊಂಡು, ಕರ್ಮದಿಂದಲೂ ಹಿಂತಿರುಗಿ ಸರ್ವವನ್ನೂ ಅರಿತುಕೊಂಡು, ಎಲ್ಲವನ್ನೂ ಗೆದ್ದುಕೊಂಡು ಸಾಂಸಾರಿಕ ಭಾವನೆಯಿಲ್ಲದವನಾಗಿ ಸಿದ್ಧನಾಗು; ಅನೇಕಜನರು ತಪಸ್ಸಿನ ಬಲದಿಂದ ಸಂಯಮವನ್ನು ವಶಗೊಳಿಸಿ ಹೊಸ ಬಂಧವನ್ನು ನಿವಾರಣೆಮಾಡಿಕೊಂಡು ಸುಖವುಂಟಾಗುವ ನಿರ್ಬಾಧವಾದ ಸಿದ್ಧಿಯನ್ನು ಪಡೆದುಕೊಂಡಿರುತ್ತಾರೆ.

* * * * *

# 46. ಶುಕನಿಗೆ ನಾರದರ ಉಪದೇಶ*

## (3)

ನಾರದರು ಮತ್ತೆ ಇಂತೆಂದರು: "ಶುಕನೆ, ಶೋಕದ ನಾಶಕ್ಕಾಗಿ ಶೋಕರಹಿತವಾದ ಶಾಂತಿಯನ್ನುಂಟುಮಾಡುವ ಶಾಸ್ತ್ರವನ್ನು ಶ್ರವಣಮಾಡಿದರೆ ಸರಿಯಾದ ಜ್ಞಾನವನ್ನು ಪಡೆದುಕೊಂಡು ಸುಖವನ್ನು ಹೊಂದುತ್ತಾನೆ. ಮೂಢನಾದವನಿಗೆ ಒಂದೊಂದು ದಿನವೂ ಸಾವಿರಾರು ಶೋಕಕ್ಕೆ ನಿಮಿತ್ತಗಳೂ, ನೂರಾರು ಭಯನಿಮಿತ್ತಗಳೂ ಬಂದೊದಗುತ್ತಲೇ ಇರುವವು. ಪಂಡಿತನಿಗೆ ಅವು ಎಂದಿಗೂ ತಟ್ಟುವದಿಲ್ಲ. ಆದ್ದರಿಂದ ಅನಿಷ್ಟವು ನಾಶವಾಗುವದಕ್ಕಾಗಿ ಒಂದು ಇತಿಹಾಸವನ್ನು ಹೇಳುವೆನು ಕೇಳು. ಸರಿಯಾದ ಬುದ್ಧಿಯು ವಶದಲ್ಲಿದ್ದರೆ ಶೋಕನಾಶವು ದಕ್ಕುವದು.

ಅನಿಷ್ಟವು ಬಂದೊದಗುವದರಿಂದ ಪ್ರಿಯವಾದದ್ದು ನಾಶವಾಗುವದರಿಂದಲೂ ಅಲ್ಪಬುದ್ಧಿಯ ಮನುಷ್ಯರು ಮನಸ್ಸಿನಲ್ಲಿ ದುಃಖವನ್ನು ಅನುಭವಿಸುತ್ತಿರುವರು. ವಸ್ತುಗಳು ನಷ್ಟವಾಗಲು ಅವುಗಳ ಗುಣಗಳನ್ನು ಮನಸ್ಸಿನಲ್ಲಿ ಚಿಂತಿಸಿಕೊಳ್ಳಬಾರದು. ಆ ಗುಣಗಳನ್ನು ಆದರದಿಂದ ಚಿಂತಿಸುತ್ತಿರುವವನಿಗೆ ಅವುಗಳ ಆಸಕ್ತಿಯ ಬಂಧನದಿಂದ ಬಿಡುಗಡೆಯಾಗಲಾರದು. ಯಾವದರಲ್ಲಿ ರಾಗವುಂಟಾಗುವದೋ ಅದರಲ್ಲಿ ದೋಷಬುದ್ಧಿಯುಳ್ಳವನಾಗಬೇಕು. ಅದರಿಂದ ಬೆಳೆದುಕೊಳ್ಳುವ ಅನಿಷ್ಟವನ್ನೇ ಮನಗಾಣಬೇಕು: ಹಾಗಾದರೆ ಬೇಗನೆ ಅದರಲ್ಲಿ ವಿರಕ್ತನಾಗುವನು. ಯಾವನು ಕಳೆದು ಹೋದದ್ದನ್ನು ಕುರಿತು ಶೋಕಿಸುತ್ತಿರುವನೋ ಅವನಿಗೆ ಅರ್ಥವಾಗಲಿ, ಧರ್ಮವಾಗಲಿ, ಕೀರ್ತಿಯಾಗಲಿ ಲಭಿಸುವದಿಲ್ಲ. ಅವುಗಳ ಅಭಾವದಿಂದ ದುಃಖವನ್ನೇ ಅನುಭವಿಸುವನು. ಅದು ಅವನಿಗೆ ಎಂದಿಗೂ ತೊಲಗದೆ ಇರುತ್ತದೆ. ಎಲ್ಲಾ ಜೀವರಿಗೂ ಗುಣಯುಕ್ತವಾದ ಪದಾರ್ಥಗಳು ಪ್ರಾಪ್ತವಾಗುತ್ತಲೂ ಮತ್ತೆ ತೊಲಗುತ್ತಲೂ ಇದ್ದೇ ಇರುವವು; ಇದು ಯಾವನೋ ಒಬ್ಬನಿಗಲ್ಲ; ಆದ್ದರಿಂದ ಶೋಕಕ್ಕೆ ಕಾರಣವೇ ಇಲ್ಲ.

---

* ಸಂಪುಟ 42; ಸಂಚಿಕೆ 6; ಫೆಬ್ರವರಿ 1973

ಸತ್ತುಹೋದವನು ಅಥವಾ ನಾಶವಾದದ್ದು- ಹೀಗೆ ಆಗಿಹೋಗಿರುವದನ್ನು ಕುರಿತು ಯಾವನು ಶೋಕಿಸುತ್ತಿರುವನೋ ಅವನಿಗೆ ದುಃಖದಿಂದ ದುಃಖವೇ ಉಂಟಾಗುವದು. ಅವನು ಎರಡು ಅನರ್ಥಗಳನ್ನು ಹೊಂದಿದಂತಾಗುವದು. ಜನರಲ್ಲಿ ಹೀಗೆ ದುಃಖವು ಪ್ರಾಪ್ತವಾಗಿರುವದನ್ನು ತಿಳಿದು ಯಾರು ಕಣ್ಣೀರುಹಾಕದೆ ಇರುವರೋ ಅವರೇ ವಿವೇಕಿಗಳು. ಎಲ್ಲವೂ ಒಳ್ಳೆಯದೇ ಎಂದು ಕಾಣುತ್ತಿರುವವರಿಗೆ ಕಣ್ಣೀರಿಡುವದಕ್ಕೆ ಕಾರಣವೇ ಇರುವದಿಲ್ಲ. ದುಃಖಗಳ ಪರಿಹಾರಕ್ಕೆ ಅವುಗಳನ್ನು ಮತ್ತೆ ಮತ್ತೆ ಧ್ಯಾನಿಸಿಕೊಳ್ಳದಿರುವದೆಂಬುದೇ ಔಷಧವು. ಮತ್ತೆ ಮತ್ತೆ ಚಿಂತಿಸಿಕೊಳ್ಳುತ್ತಿದ್ದರೆ ಅದು ಹೋಗುವದೂ ಇಲ್ಲ, ಮತ್ತಷ್ಟು ಹೆಚ್ಚುತ್ತಲೂ ಇರುವದು. ಮಾನಸದುಃಖವನ್ನು ವಿವೇಕದಿಂದಲೂ ಶಾರೀರದುಃಖವನ್ನು ಔಷಧಗಳಿಂದಲೂ ತೊಲಗಿಸಿಕೊಳ್ಳಬೇಕು. ಇದೇ ವಿವೇಕದ ಸಾಮರ್ಥ್ಯವು. ವಿವೇಕಿಯು ಮಕ್ಕಳಂತೆ ಆಗಬಾರದು. ದೇಶದವರಿಗೆಲ್ಲ ಆಗುವ ದುಃಖವನ್ನು ಕುರಿತು ತಾನೊಬ್ಬನೇ ಶೋಕಿಸಬಾರದು. ಯಾವದಾದರೂ ಪ್ರತಿಕ್ರಿಯೆಯು ತೋರಿದರೆ ಶೋಕವನ್ನು ಬಿಟ್ಟು ಅದಕ್ಕೆ ಪ್ರತೀಕಾರವನ್ನು ಮಾಡಬೇಕು.

ಜೀವನದಲ್ಲಿ ಸುಖಕ್ಕಿಂತಲೂ ದುಃಖವೇ ಹೆಚ್ಚಾಗಿರುವದೆಂಬುದಕ್ಕೆ ಸಂಶಯವಿಲ್ಲ; ಇಂದ್ರಿಯಾರ್ಥಗಳಲ್ಲಿ ಮೋಹದಿಂದ ಆಸಕ್ತಿಯನ್ನು ಇಟ್ಟುಕೊಂಡರೆ ಅಪ್ರಿಯವಾದ ಮೃತ್ಯುವು ಬಂದೊದಗುವದು. ದುಃಖವಾಗಲಿ ಸುಖವಾಗಲಿ ಯಾವ ಮನುಷ್ಯನು ಎರಡನ್ನೂ ಬಿಟ್ಟುಬಿಡುವನೋ ಅವನು ನಾಶರಹಿತವಾದ ಬ್ರಹ್ಮವನ್ನೇ ಸೇರುವನು; ಅವನ ವಿಷಯಕ್ಕೆ ಬಲ್ಲವರು ಶೋಕಿಸುವದಿಲ್ಲ. ಹೆಚ್ಚುಹೆಚ್ಚಾಗಿ ಧನವನ್ನು ಸಂಗ್ರಹಿಸಿದಂತೆಲ್ಲ ಜನರು ಅತೃಪ್ತಿಯನ್ನೇ ಪಡೆಯುತ್ತಿರುವರು. ಅದು ನಷ್ಟವಾದರೂ ಪಂಡಿತರು ಸಂತೋಷವನ್ನೇ ಹೊಂದುವರು. ಎಲ್ಲಾ ಸಂಚಯಗಳೂ ಕ್ಷಯದಲ್ಲಿ ಕೊನೆಗಾಣುತಕ್ಕವೇ, ಮೇಲಕ್ಕೇಳುವ ಸಂದರ್ಭಗಳು ಬೀಳುವದರಲ್ಲಿಯೇ ಕೊನೆಗಾಣತಕ್ಕವು; ಒಂದು ವಸ್ತುವಿನ ಸಂಯೋಗವು ಅದರ ವಿಯೋಗದಲ್ಲಿಯೇ ಕೊನೆಗಾಣತಕ್ಕದ್ದು. ಬದುಕೆಂಬುದು ಮರಣದಲ್ಲಿಯೇ ಕೊನೆಗಾಣತಕ್ಕದ್ದು.

ತೃಷ್ಣೆಗೆ ಕೊನೆಯಿಲ್ಲ; ತೃಪ್ತನಾಗುವದೆಂಬುದೇ ಪರಮಸುಖವು. ಆದ್ದರಿಂದ ಸಂತೋಷವೇ ಧನವು ಎಂದು ಪಂಡಿತರು ಭಾವಿಸುತ್ತಾರೆ. ಆಯುಸ್ಸೆಂಬುದು

ಮುಂದುಮುಂದಕ್ಕೆ ಹೋಗುತ್ತಲೇ ಇರುವದು, ಒಂದು ನಿಮಿಷವೂ ನಿಲ್ಲುವದಿಲ್ಲ. ತಮ್ಮ ಶರೀರಗಳೇ ಅನಿತ್ಯವಾಗಿರುವಲ್ಲಿ ಯಾವದು ತಾನೆ ನಿತ್ಯವೆಂದು ಭಾವಿಸುವದಕ್ಕಾದೀತು?

ಯಾರು ಎಲ್ಲಾ ಪ್ರಾಣಿಗಳಲ್ಲಿಯೂ ಇರುವ ಆಲೋಚನೆಗೆ ಆಶ್ರಯವಾದ ಮನಸ್ಸಿಗೂ ಆಚೆ ಇರುವ ಪರಮಾತ್ಮನನ್ನು ಅರಿತುಕೊಂಡು ಶೋಕರಹಿತ ರಾಗಿರುವರೋ ಅವರು ದಾರಿಯನ್ನು ನಡೆದಮೇಲೆ ಶೋಕಿಸುವದಿಲ್ಲ. ಏಕೆಂದರೆ ಅವರು ಪರಗತಿಯನ್ನೇ ಪಡೆದುಕೊಂಡು ಬ್ರಹ್ಮವನ್ನು ಕಂಡುಕೊಂಡಿರುತ್ತಾರೆ. ಕಾಮಗಳನ್ನು ಕೂಡಿಹಾಕುತ್ತಲೇ ಇದ್ದು ಎಂದಿಗೂ ತೃಪ್ತಿಯಿಲ್ಲದವನನ್ನು – ಹುಲಿಯು ಪಶುವನ್ನು ಎತ್ತಿಕೊಂಡು ಹೋಗುವಂತೆ – ಮೃತ್ಯುವು ಎಳೆದುಕೊಂಡು ಹೋಗುವದು.

ಹೀಗಿದ್ದರೂ ದುಃಖದಿಂದ ಬಿಡುಗಡೆಯಾಗುವ ಉಪಾಯವನ್ನು ಕಂಡುಹಿಡಿಯುವದಕ್ಕೆ ಪ್ರಯತ್ನಿಸಬೇಕು. ಶೋಕವನ್ನು ಮಾಡದೆ ಸಾಧನವನ್ನು ಮಾಡುವಾತನು ದುಃಖರಹಿತನಾಗಿ ಮುಕ್ತನಾಗಿರುವನು.

ಧನವಂತನಾಗಿರಲಿ, ನಿರ್ಧನನಾಗಿರಲಿ, ಶಬ್ದ, ಸ್ಪರ್ಶ, ರೂಪ, ರಸ, ಗಂಧ– ಇವುಗಳ ಉಪಭೋಗವಾದಬಳಿಕ ಯಾವ ಸುಖದ ಪ್ರತೀತಿಯೂ ಇರುವದಿಲ್ಲ. ಪ್ರಾಣಿಗಳಿಗೆ ಸಂಯೋಗವಾಗುವ ಮುಂಚೆ ಯಾವ ದುಃಖವೂ ಇಲ್ಲ, ವಿಯೋಗವಾಗಲು ಎಲ್ಲರಿಗೂ ದುಃಖ; ಆದ್ದರಿಂದ ಸ್ವಭಾವ ಸ್ಥಿತಿಯಲ್ಲಿದ್ದುಕೊಂಡು ಶೋಕಿಸದೆ ಇದ್ದುಕೊಳ್ಳಬೇಕು. ಶಿಶ್ನೋದರಗಳನ್ನು ಧೈರ್ಯದಿಂದ ಕಾಪಾಡಿಕೊಳ್ಳಬೇಕು; ಪಾಣಿಪಾದಗಳನ್ನು ಚಕ್ಷುರಿಂದ್ರಿಯದ ಸಹಾಯದಿಂದ ಕಾಪಾಡಿಕೊಳ್ಳಬೇಕು; ಚಕ್ಷುರಿಂದ್ರಿಯಗಳನ್ನು ಮನಸ್ಸಿನ ನೆರವಿನಿಂದ ಕಾಪಾಡಿಕೊಳ್ಳಬೇಕು. ಮನಸ್ಸನ್ನೂ ವಾಕ್ಕನ್ನೂ ವಿದ್ಯೆಯಿಂದ ಕಾಪಾಡಿಕೊಳ್ಳಬೇಕು. ಗೌರವಾರ್ಹರು, ಹಾಗಿಲ್ಲದವರು– ಯಾರೊಬ್ಬರಲ್ಲಿಯೂ ಸ್ನೇಹವನ್ನು ಮಾಡಿಕೊಳ್ಳದೆ ವಿನಯದಿಂದ ವ್ಯವಹರಿಸುತ್ತಿರಬೇಕು– ಇಂಥ ಮನುಷ್ಯನೇ ಸುಖಿಯು, ಆತನೇ ಪಂಡಿತನು. ಅಧ್ಯಾತ್ಮದಲ್ಲಿಯೇ ರತನಾಗಿ, ಯಾವದರಲ್ಲಿಯೂ ಅಪೇಕ್ಷೆಯಿಲ್ಲದವನಾಗಿ ಯಾವದೆ ಭೋಗದ ಆಶೆಯೂ ಇಲ್ಲದೆ ತನಗೆತಾನೇ ಸಹಾಯನಾಗಿದ್ದುಕೊಂಡು ಯಾವನು ವ್ಯವಹರಿಸುತ್ತಿರುವನೋ ಅವನು ಸುಖಿಯಾಗಿರುವನು.

# 46. ಶುಕನಿಗೆ ನಾರದರ ಉಪದೇಶ*

## (4)

ನಾರದರು ಇಂತೆಂದರು: ಶುಕನೆ, ಸುಖದುಃಖಗಳ ವಿಷಯಕ್ಕೆ, ಸುಖವನ್ನು ದುಃಖವೆಂದೂ ದುಃಖವನ್ನು ಸುಖವೆಂದೂ ಅರಿತುಕೊಂಡಾಗ, ಅಂಥವರಿಗೆ ಪ್ರಜ್ಞೆಯಾಗಲಿ ಸುನೀತಿಯಾಗಲಿ ಪೌರುಷವಾಗಲಿ ಉಂಟಾಗುವದಿಲ್ಲ. ಸ್ವಭಾವ ದಿಂದಲೇ ಪ್ರಯತ್ನವನ್ನು ಮಾಡಬೇಕು. ಯತ್ನವನ್ನು ಮಾಡುತ್ತಿರುವವನು ಎಂದಿಗೂ ಕುಸಿದು ಬೀಳದೆ ಇರುತ್ತಾನೆ. ಪ್ರಿಯನಾಗಿರುವ ತನ್ನ ಆತ್ಮನನ್ನು ಜರಾಮರಣರೋಗಗಳಿಗೆ ಪಕ್ಕಾಗದಂತೆ ಉದ್ಧಾರಮಾಡಿಕೊಳ್ಳಬೇಕು. ದೇಹವನ್ನು ಶರೀರದಿಂದಾದ ರೋಗಗಳೂ ಮನಸ್ಸಿನಿಂದಾದ ರೋಗಗಳೂ ಕಾಡುತ್ತಲೇ ಇರುವವು. ಇವುಗಳು– ಗಟ್ಟಿಗರಾದ ಬಿಲ್ಗಾರರು ಬಿಟ್ಟ ಬಾಣಗಳಂತೆ – ದೇಹಗಳನ್ನು ವ್ಯಥೆಗೊಳಿಸುತ್ತಿರುವವು.

ತೃಷ್ಣೆಗಳಿಂದ ವ್ಯಥೆಪಡುತ್ತಿರುವ ದುಃಖಿಯ ಶರೀರವು ಇನ್ನೂ ಬದುಕಿರ ಬೇಕೆಂಬ ಇಚ್ಛೆಯಿದ್ದರೂ ಶರೀರವು ಪರವಶತೆಯಿಂದ ಕೃಶವಾಗುತ್ತಿರುವದು. ಹಗಲುರಾತ್ರೆಗಳು ಮರ್ತ್ಯನ ಆಯುಸ್ಸನ್ನು, ಹರಿಯುತ್ತಿರುವ ನದಿಯ ಪ್ರವಾಹಗಳಂತೆ ಮತ್ತೆ ಮತ್ತೆ ಕೊಚ್ಚಿಕೊಂಡು ಹೋಗುತ್ತಿರುವವು. ಶುಕ್ಲಕೃಷ್ಣಪಕ್ಷಗಳು ಒಂದಾಗುತ್ತಲೊಂದು ಸುತ್ತುತ್ತಿರುವವು, ಮತ್ತು ಹುಟ್ಟಿದ ಮನುಷ್ಯರೆಲ್ಲರನ್ನೂ ಮುಪ್ಪಿ ನಿಂದ ಸವೆಯಿಸುತ್ತಲೇ ಇರುವವು; ಒಂದು ನಿಮಿಷವೂ ಇದ್ದಂತೆ ಇರುವದಿಲ್ಲ. ಮತ್ತೆ ಮತ್ತೆ ಈ ಸೂರ್ಯನು ಹುಟ್ಟುತ್ತಲೂ ಮುಳುಗುತ್ತಲೂ ಇದ್ದರೂ ಮುಪ್ಪಿಲ್ಲದವನಾಗಿ ಪ್ರಾಣಿಗಳ ಸುಖದುಃಖಗಳನ್ನು ಸವೆಯಿಸುತ್ತಿರುವವನು. ಹಗಲು ರಾತ್ರೆಗಳು ಮನುಷ್ಯರಿಗೆ ಹಿಂದೆ ಎಂದಿಗೂ ಕಾಣದ ಅಶಂಕಿತವಾದ ಇಷ್ಟಗಳನ್ನೂ ಅನಿಷ್ಟಗಳನ್ನೂ ತಂದುಕೊಟ್ಟು ಹೋಗುತ್ತಿರುವವು.

ಮನುಷ್ಯನು ಯಾವಯಾವ ಕಾಮಗಳನ್ನು ಇಚ್ಛಿಸಿದರೂ ಫಲವು ಪರಾಧೀನವಿಲ್ಲದಿದ್ದರೆ ಆಯಾ ಫಲವು ದೊರಕುತ್ತಿರುವದು. ಇಂದ್ರಿಯ ಸಂಯಮವುಳ್ಳವರೂ ದಕ್ಷರೂ ಬುದ್ಧಿವಂತರೂ ಆಗಿರುವ ಮಾನವರು ಕೂಡ

---

* ಸಂಪುಟ 42; ಸಂಚಿಕೆ 7; ಮಾರ್ಚ್ 1973

ಫಲಪ್ರಾಪ್ತಿಯಿಲ್ಲದೆ ಎಲ್ಲಾ ಕರ್ಮಗಳನ್ನೂ ಬಿಟ್ಟಿರುವದು ಕಂಡು ಬರುತ್ತದೆ. ಇನ್ನು ಕೆಲವರು ಯಾವ ಗುಣವೂ ಇಲ್ಲದೆ ಪುರುಷಾಧಮರಾಗಿ ಹುಡುಗರಂತೆ ನಡೆಯುತ್ತಾ ಎಲ್ಲ ಕಾಮಗಳೂ ತಮಗೆ ಆಗಬೇಕೆಂದು ಬಯಸುತ್ತಿರುವರು; ಅವರಿಗೆ ತಮ್ಮ ಇಚ್ಛೆಯು ಪರಿಪೂರ್ಣವಾಗದೆಯೇ ಇರುವದು ಕಂಡುಬರುತ್ತಿದೆ. ಒಬ್ಬೊಬ್ಬನು ಪ್ರಾಣಿಗಳ ಹಿಂಸೆಯಲ್ಲಿಯೇ ನಿರಂತರವಾಗಿ ಉದ್ಯುಕ್ತನಾಗಿ ಜನರನ್ನು ವಂಚಿಸುತ್ತಲೇ ಇದ್ದರೂ ಮುಪ್ಪಡರುವವರೆಗೂ ಸುಖಗಳನ್ನೇ ಭೋಗಿಸುತ್ತಿರುವನು. ಸ್ವಲ್ಪವೂ ಕೆಲಸವನ್ನು ಮಾಡದೆ ಸುಮ್ಮನೆ ಕುಳಿತಿರುವವನಿಗೂ ಸಿರಿಯ ಪ್ರಾಪ್ತಿಯಾಗುತ್ತಿರುವದು; ಮತ್ತೊಬ್ಬನು ಕರ್ಮನಿರತನಾಗಿಯೇ ಇದ್ದರೂ ಇಷ್ಟಾರ್ಥಪ್ರಾಪ್ತಿಯಿಲ್ಲದೆ ಇರುತ್ತಾನೆ! ಇದೆಲ್ಲ ಮನುಷ್ಯನ, ಪ್ರಾಕ್ಕರ್ಮದ ಅಪರಾಧದಿಂದಲೇ ಆಗುವದೆಂದು ತಿಳಿದುಕೊ. ವೀರ್ಯವು ಒಂದು ಕಡೆಯಲ್ಲಿ ಹುಟ್ಟುತ್ತದೆ. ಆದರೆ ಸಂತಾನೋತ್ಪತ್ತಿಗಾಗಿ ಮತ್ತೆ ಎಲ್ಲಿಯೋ ಹೋಗುತ್ತಿರುವದು. ಅದು ಸ್ತ್ರೀಯೋನಿಯಲ್ಲಿ ಬಿದ್ದರೂ ಗರ್ಭವು ಆಗುವದೊ, ಇಲ್ಲವೊ? ಮಾವಿನ ಹೂವಿನಂತೆ ಅದು ಮರೆಯಾಗುವದು! ಸಂತಾನವು ಬೆಳೆಯಬೇಕೆಂದು ಇಚ್ಛಿಸುತ್ತಿದ್ದರೂ ಕೆಲವರಿಗೆ ಪ್ರಯತ್ನಿಸಿದರೂ ಗರ್ಭಪಿಂಡವೇ ಹುಟ್ಟುವದಿಲ್ಲ. ಗರ್ಭವು ಆಗಬಾರದೆಂದು– ಭುಸುಗುಟ್ಟುವ ಹಾವಿಗೆ ಅಂಜುವಂತೆ– ಇರುವವನಿಗೆ ಆಯುಷ್ಮಂತನಾದ ಮಗನು ಹುಟ್ಟಿ ಪ್ರೇತದಂತೆ ಕೃಶನಾಗಿರುತ್ತಾನೆ! ದೇವತೆಗಳನ್ನು ಪೂಜಿಸುತ್ತಲೂ ತಪಸ್ಸುಮಾಡುತ್ತಲೂ ಪುತ್ರನಾಗಬೇಕೆಂದು ಹಂಬಲಿಸುತ್ತಿರುವವರಿಗೆ ಹತ್ತು ತಿಂಗಳವರೆಗೆ ಹೊತ್ತ ಗರ್ಭದಿಂದ ಕಾಲಕ್ಕೆ ಕಳಂಕವನ್ನು ತರುವ ಮಗನು ಹುಟ್ಟುತ್ತಾನೆ. ಕೆಲವರು ತಂದೆಯ ಕೂಡಿಟ್ಟಿದ್ದ ಧನಧಾನ್ಯಗಳನ್ನೂ ವಿಪುಲವಾದ ಭೋಗಗಳನ್ನೂ ಅನುಭವಿಸುವ ಅಧಿಕಾರಿಗಳಾಗಿ ಜನಿಸುತ್ತಾರೆ. ಅನ್ಯೋನ್ಯವಾಗಿ ಪ್ರೀತಿಯಿಂದೊಡಗೂಡಿ ಪರಸ್ಪರ ಸಂಪರ್ಕದಿಂದ ಸುಖವನ್ನು ಪಡಬೇಕೆನ್ನುವವರಿಗೆ ಅಡ್ಡಿಯಾಗಿ ಯಾವದೋ ಉಪದ್ರವವು ಬಂದಂತೆ ಗರ್ಭವುಂಟಾಗಿ ಬಿಡುತ್ತದೆ.

ನಿರ್ವೀರ್ಯನಾಗಿ ಶರೀರವನ್ನು ಕಳೆದುಕೊಂಡ ಜೀವನಿಗೆ ಮಾಂಸರಕ್ತಾದಿಗಳಿಂದೊಡಗೂಡಿ ಬೇರೆಯ ಶರೀರಗಳು ಬಲುಬೇಗನೆ ಬಂದುಸೇರಿಕೊಳ್ಳುತ್ತಿರುವವು. ಮತ್ತೊಂದು ದೇಹವು ನಾಶವಾದಮೇಲೂ ಅವನ ಕರ್ಮಗಳು–

ಒಂದು ತೆಪ್ಪವು ಮುಳುಗಿಹೋದರೆ ಮತ್ತೊಂದನ್ನು ಏರ್ಪಡಿಸುವಂತೆ- ಇನ್ನೊಂದು ಚಲಾಚಲಶರೀರವನ್ನು ಕೊಟ್ಟು ಮೃತ್ಯುವಿನಕಡೆಗೆ ಒಯ್ಯುತ್ತಿರುವವು. ಸ್ತ್ರೀಪುರುಷರ ಸಂಗಮದಿಂದ ಹೊಟ್ಟೆಯಲ್ಲಿಟ್ಟ ಅಚೇತನವಾದ ರೇತೋಬೀಜವು ಯಾವ ಯತ್ನದಿಂದ ಬದುಕಿರುವದೆಂಬುದನ್ನು ಬಲ್ಲೆಯ? ಯಾವ ಹೊಟ್ಟೆಯಲ್ಲಿ ಬಿದ್ದ ಅನ್ನಪಾನಾದಿಗಳೂ ತಿಂದ ಭಕ್ಷ್ಯಗಳೂ ಅರಗಿಹೋಗುವವೋ, ಅದೇ ಹೊಟ್ಟೆಯಲ್ಲಿ ಗರ್ಭವು ಅನ್ನಾದಿಗಳಂತೆ ಅರಗಿಹೋಗುವದಿಲ್ಲವೇಕೆ? ಮಲಮೂತ್ರಗಳನ್ನು ಧರಿಸಿರುವದಕ್ಕೂ ಅವುಗಳನ್ನು ಹೊರಕ್ಕೆ ಬಿಡುವದಕ್ಕೂ ಸ್ವಭಾವವೊಂದೇ ಕಾರಣವಾಗಿರುತ್ತದೆ; ಅವನ್ನು ಧರಿಸುವದಕ್ಕಾಗಲಿ ಬಿಡುವದಕ್ಕಾಗಲಿ ಸ್ವತಂತ್ರನಾದ ಕರ್ತನು ಯಾವನೂ ಇರುವದಿಲ್ಲ. ಗರ್ಭಧಾರಣವಾದಮೇಲೂ ಕೆಲವು ಗರ್ಭಗಳು ಸ್ರಾವವಾಗಿಬಿಡುತ್ತದೆ, ಕೆಲವು ಹುಟ್ಟಿದ ಮಕ್ಕಳೂ ಹುಟ್ಟಿದಕೂಡಲೇ ಸಾಯುವವು. ಈ ಯೋನಿ ಸಂಬಂಧದಿಂದ ಮುಕ್ತನಾಗಿ ಯಾವನು ಬದುಕಿರುವನೋ ಮತ್ತು ಮಕ್ಕಳನ್ನು ಹಡೆಯುವನೋ ಅವನು ಮತ್ತೆ ದ್ವಂದ್ವಗಳಲ್ಲಿ ಪ್ರಸಕ್ತನಾಗುವನು.

ಶರೀರದ ಸಂಬಂಧದಿಂದೊಡಗೂಡಿ ಬರುವ ಜೀವನಿಗೆ ಜನ್ಮ, ಬಾಲ್ಯ, ಕೌಮಾರ, ಪೌಗಂಡ- ಮುಂತಾದ ಒಂಬತ್ತು ಅವಸ್ಥೆಗಳು ಬರುವವು; ಆ ಬಳಿಕ ಆಯುಸ್ಸು, ಹೋಗಲಾಗಿ ಪಂಚಭೂತಗಳ ಶರೀರವು ತೊಲಗಿಬಿಡುವದು. ಬೇಡರು ಸಣ್ಣಪುಟ್ಟಮೃಗಗಳನ್ನು ಗೋಳಾಡಿಸುವಂತೆ, ಶರೀರವನ್ನು ಕಡೆಯುತ್ತಿರುವ ರೋಗಗಳನ್ನು ತಪ್ಪಿಸಿಕೊಳ್ಳುವದಕ್ಕೆ ಯಾವ ಉಪಾಯವೂ ಇರುವದಿಲ್ಲ. ಇದರಲ್ಲಿ ಯಾವ ಸಂಶಯವೂ ಇಲ್ಲ. ರೋಗಗಳು ಹೀಗೆ ಕಡೆಯುತ್ತಿರುವಲ್ಲಿ ಹೇರಳವಾದ ಹಣವನ್ನು ಬಿಟ್ಟು ತೆರಳುವ ಮನುಷ್ಯನ ಸಂಕಷ್ಟವನ್ನು- ಎಷ್ಟೇ ಪ್ರಯತ್ನವನ್ನು ಮಾಡಬಲ್ಲ ಚಿಕಿತ್ಸಕರು ಕೂಡ ನೀಗಲಾರರು. ಆ ವೈದ್ಯರುಕೂಡ- ಬೇಡರು ಅಟ್ಟಿಸಿಕೊಂಡು ಬರುವ ಮೃಗಗಳಂತೆ-ತಾವು ಎಷ್ಟೇ ಜಾಣರಾದರೂ ಎಷ್ಟೇ ಔಷಧಗಳನ್ನು ಕೂಡಿಹಾಕಿಕೊಂಡಿದ್ದರೂ, ರೋಗಗಳ ಸೆಳೆತಕ್ಕೆ ಸಿಕ್ಕಿರುವರು. ಅವರು ಬಗೆಬಗೆಯ ಕಷಾಯಗಳನ್ನೂ ಘೃತಗಳನ್ನೂ ಪಾನಮಾಡುತ್ತಿದ್ದರೂ, ಆನೆಗಳು ಸೆಳೆಯುತ್ತಿರುವ ಹೆಮ್ಮರಗಳಂತೆ, ಮುಪ್ಪಿನ ಸೆಳೆತದಿಂದ ಬೀಳುತ್ತಿರುವರು. ರೋಗದಿಂದ ನರಳುವ ಮೃಗಪಕ್ಷಿಗಳಿಗೆ ಚಿಕಿತ್ಸೆಮಾಡುವವರು ಯಾರು? ಹಿಂಸ್ರಮೃಗಗಳಿಗೂ ಬಡವರಿಗೂ ವೈದ್ಯರು ಯಾರು? ಅವಕ್ಕೆ ಬಲುಮಟ್ಟಿಗೆ

ರೋಗವೇ ಬರುತ್ತಿರುವದಿಲ್ಲ. ಎದುರಿಲ್ಲದ, ಉಗ್ರತೇಜಸ್ವಿಗಳಾದ ರಾಜರುಗಳನ್ನು ಕೂಡ ರೋಗಗಳು ವಶಪಡಿಸಿಕೊಂಡು ಪಶುಗಳನ್ನು ದೊಡ್ಡಪಶುಗಳ ಗುಂಪುಗಳಂತೆ – ಕೊಂಡೊಯ್ಯುತ್ತಿರುವವು.

ಹೀಗೆ ಲೋಕವು ಶೋಕಮೋಹಗಳಲ್ಲಿ ಮುಳುಗಿ ಅತಿಬಲವತ್ತರವಾದ ಸಂಸಾರಸಾಗರಪ್ರವಾಹಕ್ಕೆ– ಅಳುವದಕ್ಕೆ ಕೂಡ ಎಡೆಯಿಲ್ಲದೆ– ಸಿಕ್ಕಿ ಕೊಚ್ಚಿಹೋಗುತ್ತಿರುವದು; ಕರ್ಮಪರವಶರಾಗಿರುವ ದೇಹಿಗಳನ್ನು ಧನದಿಂದಲಾಗಲಿ, ರಾಜ್ಯದಿಂದಲಾಗಲಿ, ಉಗ್ರವಾದ ತಪಸ್ಸಿನಿಂದಲಾಗಲಿ ಹಿಂತಿರುಗಿಸುವದಕ್ಕೆ ಆಗುವಂತಿಲ್ಲ. ಇದರಿಂದ ತಪ್ಪಿಸಿಕೊಳ್ಳುವದಕ್ಕೆ ಪ್ರಯತ್ನವು ತಮ್ಮ ವಶದಲ್ಲಿದ್ದಿದ್ದರೆ ಎಲ್ಲರಿಗೂ ಎಲ್ಲಾ ಇಚ್ಛೆಗಳೂ ನೆರವೇರಬಹುದಾಗಿತ್ತು, ಯಾರೂ ಸಾಯುತ್ತಿರಲಿಲ್ಲ. ಹುಟ್ಟುತ್ತಲೂ ಇರಲಿಲ್ಲ; ಅವರಿಗೆ ಅಪ್ರಿಯವೆಂಬುದೇ ಕಾಣಿಸದೆಇರುತ್ತಿತ್ತು. ಪ್ರತಿಯೊಬ್ಬನೂ ಎಲ್ಲರಿಗಿಂತಲೂ ಇನ್ನೂಮೇಲೆ ಇರಬೇಕೆಂದು ಪ್ರಯತ್ನಿಸುತ್ತಿರುವನು. ಅದಕ್ಕೆ ತಕ್ಕ ಪ್ರಯತ್ನವನ್ನೂ ಮಾಡುತ್ತಿರುವನು. ಆದರೆ ಹಾಗೆ ಮಾತ್ರ ಆಗುವದಿಲ್ಲ.

ಕೆಲವರಿಗೆ ಅವರು ನಿರೀಕ್ಷಿಸದೆ ಇದ್ದ ಕ್ಲೇಶಗಳು ತಮಗೆತಾನೇ ಪರಿಹಾರವಾಗುತ್ತಿರುವವು. ಮತ್ತೆ ಕೆಲವರಿಗೆ ಯಾವದೂ ಅರಿವಿಗೇ ಗೋಚರವಾಗುವದಿಲ್ಲ. ಕರ್ಮಸಂಧಿಗಳಲ್ಲಿ ಬಹಳ ಫಲವೈಷಮ್ಯವು ಕಾಣಬರುತ್ತಿರುವದು.

ಜೀವರೆಲ್ಲರೂ ದ್ವಂದ್ವಗಳಲ್ಲಿ ರತರಾಗಿರುವರಾದರೂ ಅವರಲ್ಲಿ ಒಬ್ಬೊಬ್ಬರಿಗೂ ಸುಖವೊ, ದುಃಖವೊ, ಒಂದೊಂದೆ ದೊರಕುತ್ತಿರುವದು. ಈ ಬ್ರಹ್ಮವಸ್ತುವು ಅವಕ್ಕಿಂತ ಭಿನ್ನವಾಗಿರುತ್ತದೆ ಎಂದು ಅರಿತುಕೊಂಡರೆ, ಆಗ ನೀನು ದ್ವಂದ್ವಗಳಲ್ಲಿ ಮೋಹವನ್ನು ಪಡೆಯದೆ ಇರುವೆ. **ಧರ್ಮವನ್ನು ಬಿಡು, ಅಧರ್ಮವನ್ನು ಬಿಡು, ಸತ್ಯ, ಅನೃತ– ಇವೆರಡನ್ನೂ ಬಿಡು. ಸತ್ಯಾನೃತಗಳೆರಡನ್ನೂ ಬಿಟ್ಟ ಬಳಿಕ ಯಾವ ಅಭಿಮಾನದಿಂದ ಇವನ್ನು ಬಿಡುವೆಯೋ ಅದನ್ನೂ ಬಿಟ್ಟುಬಿಡು.**

ಎಲೈ ಋಷಿಶ್ರೇಷ್ಠನೆ, ಈ ಪರಮರಹಸ್ಯವನ್ನು ನಿನಗೆ ಹೇಳಿರುತ್ತೇನೆ. ಇದರ ಅವಲಂಬನೆಯಿಂದಲೇ ದೇವತೆಗಳು ಮರ್ತ್ಯಲೋಕವನ್ನು ಬಿಟ್ಟು ಸ್ವರ್ಗವನ್ನು ಸೇರಿರುತ್ತಾರೆ.

* * * * *

# 46. ಶುಕನಿಗೆ ನಾರದರ ಉಪದೇಶ*

## (ಊರ್ಧ್ವಗಮನಕ್ಕೆ ಶುಕನ ನಿಶ್ಚಯ)

## (5)

**ಭೀಷ್ಮಾಚಾರ್ಯರು ಹೇಳುತ್ತಾರೆ:**

ನಾರದರ್ಷಿಯ ಮಾತನ್ನು ಕೇಳಿ, ಮಹಾಬುದ್ಧಿಶಾಲಿಯಾದ ಶುಕನು ಮನಸ್ಸಿನಲ್ಲಿ ಇದನ್ನೆಲ್ಲ ಆಲೋಚಿಸಿದಮೇಲೂ ಮುಂದಿನ ಕರ್ತವ್ಯದ ವಿಷಯಕ್ಕೆ ಯಾವದೊಂದು ನಿಶ್ಚಯವನ್ನೂ ಮಾಡಲಾರದೆಹೋದನು. ಬಳಿಕ ಒಂದು ಮುಹೂರ್ತಕಾಲ ಚೆನ್ನಾಗಿ ಮನಸ್ಸಿನಲ್ಲಿ ಹೀಗೆಂದು ಆಲೋಚನೆ ಮಾಡಿಕೊಂಡನು: "ನಾನು ಹೇಗೆ ನಡೆದುಕೊಂಡರೆ ಸಂಸಾರಸಂಪರ್ಕವಿಲ್ಲದ ಪರಮಗತಿಯನ್ನು ಪಡೆದುಕೊಂಡೇನು? ಏನು ಮಾಡಿದರೆ ಮತ್ತೆ ಮತ್ತೆ ಹುಟ್ಟುವ ಈ ಸಂಸಾರಸಾಗರಲ್ಲಿ ಮುಳುಗುವದಕ್ಕೆ ಹಿಂತಿರುಗದೆ ಇದ್ದೇನು? ನನಗೆ ಬೇಕಾಗಿರುವದು ಪುನರಾವೃತ್ತಿಯಿಲ್ಲದ ಪರಮಭಾವವು. ಆದ್ದರಿಂದ ಎಲ್ಲಾ ಸಂಗಗಳನ್ನೂ ಬಿಟ್ಟು, ನನ್ನ ಮನಸ್ಸಿಗೆ ಎಲ್ಲಿ ಶಾಂತಿಯು ದೊರಕುವದೋ ಅಲ್ಲಿಗೆ ಹೋಗುವೆನು. ಎಲ್ಲಿ ನಾಶವಿಲ್ಲದೆ, ವಿಕಾರವಿಲ್ಲದೆ, ಶಾಶ್ವತವಾಗಿ ಇದ್ದುಕೊಂಡಿರಬಹುದೋ ಅಲ್ಲಿಗೆ ತೆರಳುವೆನು."

"ಆ ಪರಮಗತಿಯು ಯೋಗವಿಲ್ಲದೆ ದೊರಕುವದೇಇಲ್ಲ; ಜ್ಞಾನಿಯಾದ ವನಿಗೆ ಕರ್ಮಗಳಿಂದಾಗುವ ನಿಕೃಷ್ಟವಾದ ಬಂಧವು ಎಂದಿಗೂ ಆಗಲಾರದಲ್ಲವೆ? ಆದ್ದರಿಂದ ಯೋಗವನ್ನವಲಂಬಿಸಿ ಈ ಶರೀರವೆಂಬ ಮನೆಯನ್ನು ಬಿಟ್ಟು ವಾಯುರೂಪನಾಗಿ ಹೊರಟು ತೇಜೋಮಯನಾದ ಸೂರ್ಯನನ್ನು ಪ್ರವೇಶಿಸುವೆನು. ದೇವತೆಗಳು ಚಂದ್ರನ ಅಮೃತವನ್ನು ಪಾನಮಾಡುವದರಿಂದ ಹೇಗೆ ಆತನನ್ನು ಕ್ಷಯಗೊಳಿಸುವರೋ, ಹಾಗೆ ಈ ಸೂರ್ಯನು ಕ್ಷಯವಾಗು ವವನಲ್ಲ. ಚಂದ್ರನನ್ನು ಪಡೆದವನು ಮತ್ತೆ ಮತ್ತೆ ಭೂಮಿಯ ಮೇಲೆ ಬಿದ್ದು ಮತ್ತೆ ಮತ್ತೆ ಏರಬೇಕಾಗುವದು. ಚಂದ್ರನು ಮತ್ತೆಮತ್ತೆ ಕ್ಷಯವಾಗುತ್ತಲೂ ಮತ್ತೆ

---

* ಸಂಪುಟ 42; ಸಂಚಿಕೆ 8; ಏಪ್ರಿಲ್ 1973

ಮತ್ತೆ ಬೆಳೆದು ಪೂರ್ಣವಾಗುತ್ತಲೂ ಇರುತ್ತಾನೆ. ಸೂರ್ಯನಾದರೊ, ಉಲ್ಬಣವಾದ ಕಿರಣಗಳಿಂದ ಲೋಕಗಳನ್ನು ತಪಿಸುತ್ತಲೂ ಎಲ್ಲಾ ಕಡೆಯಿಂದಲೂ ತೇಜಸ್ಸನ್ನು ಸೆಳೆದುಕೊಳ್ಳುತ್ತಲೂ ಎಂದೆಂದಿಗೂ ಅಕ್ಷಯನಾಗಿರುವನು. ಆದ್ದರಿಂದ ಝುಗಝುಗಿಸುವ ತೇಜಸ್ಸಿನಿಂದೊಡಗೂಡಿದ ಸೂರ್ಯನನ್ನೇ ಸೇರಬೇಕೆಂದು ನನ್ನ ಮನಸ್ಸಿಗೆ ತೋರುತ್ತಿದೆ. ಯಾವ ಶಂಕೆಯೂ ಇಲ್ಲದ ಮನಸ್ಸಿನಿಂದ ಆತನಲ್ಲಿಗೆ ಹೋಗುವೆನು. ಅಲ್ಲಿ ಯಾರೊಬ್ಬರೂ ನನ್ನನ್ನು ಪರಾಭವಗೊಳಿಸುವವರಿಲ್ಲ ವಾದುದರಿಂದ ಅಲ್ಲಿ ವಾಸಮಾಡಿಕೊಂಡಿರುವೆನು. ಸೂರ್ಯಲೋಕದಲ್ಲಿ ಈ ಶರೀರವನ್ನಿಟ್ಟು ಅತಿದುಃಸಹವಾದ ಆ ಸೂರ್ಯತೇಜಸ್ಸಿನಲ್ಲಿ ಋಷಿಗಳೊಡನೆ ವಾಸಮಾಡಿಕೊಂಡಿರುವೆನು."

"ನಗಗಳನ್ನೂ ನಾಗರುಗಳನ್ನೂ ಪರ್ವತವನ್ನೂ ಭೂಮಿಯನ್ನೂ ದಿಕ್ಕುಗಳನ್ನೂ ಅಂತರಿಕ್ಷವನ್ನೂ ದೇವತೆಗಳು, ದಾನವರು, ಗಂಧರ್ವರು– ಇವರನ್ನೂ ಪಿಶಾಚರು, ಉರಗರು, ರಾಕ್ಷಸರು– ಇವರನ್ನೂ ಕೇಳಿ ಅನುಜ್ಞೆಯನ್ನು ಪಡೆದುಕೊಳ್ಳುವೆನು; ಲೋಕಗಳಲ್ಲಿರುವ ಎಲ್ಲಾ ಭೂತಗಳೊಳಗೂ ಪ್ರವೇಶಿಸುವೆನು ದೇವತೆಗಳೆಲ್ಲರೂ ಋಷಿಗಳೊಡನೆ ನನ್ನ ಯೋಗವೀರ್ಯವನ್ನು ನೋಡುತ್ತಿರಲಿ!"

ಹೀಗೆಂದು ಆತನು ದೇವರ್ಷಿಯಾದ ನಾರದರ ಅನುಜ್ಞೆಯನ್ನು ಪಡೆದು ಕೊಂಡು ತಂದೆಯಬಳಿಗೆ ಹೋದನು. ಮಹಾತ್ಮನಾದ ಕೃಷ್ಣದ್ವೈಪಾಯನ ಮುನಿಯನ್ನು ನಮಸ್ಕರಿಸಿದಬಳಿಕ ಶುಕನು ಪ್ರದಕ್ಷಿಣೆಮಾಡಿ ಹೋಗಿಬರುತ್ತೇನೆಂದು ತಿಳಿಸಿದನು. ಮಹಾತ್ಮನಾದ ಆ ಋಷಿಯು ಶುಕನ ಈ ಮಾತನ್ನು ಕೇಳಿ ಸಂತೋಷದಿಂದ ಇವನನ್ನು ಕುರಿತು ಮತ್ತೂ ಇಂತೆಂದನು: ಅಪ್ಪ, ಮಗನೆ, ನನ್ನ ಕಣ್ಣಿಗೆ ಹಬ್ಬವನ್ನು ಮಾಡಿಕೊಳ್ಳುವವರೆಗೆ ಸ್ವಲ್ಪ ಹಾಗೆಯೇ ಇರು!

ಆದರೆ ಇಚ್ಛಾರಹಿತನಾದ ಶುಕನು, ಯಾವ ಅಭಿಮಾನವೂ ಇಲ್ಲದೆ ಸಂಶಯಗಳಿಲ್ಲದೆ ಇದ್ದವನಾದ್ದರಿಂದ ಮೋಕ್ಷದ, ಚಿಂತೆಯಲ್ಲಿಯೇ ಇದ್ದುಕೊಂಡು ಹೋಗುವದಕ್ಕೆ ಮನಸ್ಸುಮಾಡಿಕೊಂಡನು, ಆ ಮುನಿಶ್ರೇಷ್ಠನಾದ ಶುಕನು ತಂದೆಯನ್ನು ಬಿಟ್ಟುಹೊರಟು ಸಿದ್ಧಸಂತರುಗಳು ವಾಸಮಾಡುತ್ತಿದ್ದ ವಿಸ್ತಾರವಾದ ಕೈಲಾಸದ ತಪ್ಪಲನ್ನು ಸೇರಿಬಿಟ್ಟನು.

* * * * *

# 46. ಶುಕನಿಗೆ ನಾರದರ ಉಪದೇಶ*

## (ಶುಕನ ಊರ್ಧ್ವಗತಿಯ ವರ್ಣನೆ)

## (6)

ಅನಂತರ ಭೀಷ್ಮಾಚಾರ್ಯರು ಇಂತೆಂದರು:

"ಎಲೈ ಭರತಕುಲನಂದನನೆ, ಕೈಲಾಸಪರ್ವತದ ಶಿಖರವನ್ನೇರಿದ ಶುಕನು ಏಕಾಂತಸ್ಥಲದಲ್ಲಿ ತೃಣಾದಿಗಳಿಲ್ಲದ ಸಮಭೂಮಿಯ ಮೇಲೆ, ಶಾಸ್ತ್ರದಲ್ಲಿ ಹೇಳಿರುವ ವಿಧಾನದಿಂದ ಪಾದದಿಂದ ತಲೆಯವರೆಗೂ ಅಂಗಗಳನ್ನು ಕ್ರಮಯೋಗ ವನ್ನನುಸರಿಸಿ ಸ್ವಾಧೀನದಲ್ಲಿಟ್ಟುಕೊಂಡು, ಪೂರ್ವಾಭಿಮುಖವಾಗಿ ಸೂರ್ಯನು ಉದಯಿಸಲು ಕೈಕಾಲುಗಳನ್ನು ಬಿಗಿಹಿಡಿದು ವಿನೀತಭಾವದಿಂದ ಕುಳಿತು ಕೊಂಡನು. ಆ ವ್ಯಾಸಪುತ್ರನು ಯೋಗಾಭ್ಯಾಸವನ್ನಾರಂಭಿಸುವ ಪ್ರದೇಶದಲ್ಲಿ ಪಕ್ಷಿಗಳ ಕಲಕಲವಿರಲಿಲ್ಲ, ದೃಷ್ಟಿಯನ್ನು ಸೆಳೆಯುವ ಯಾವ ದೃಶ್ಯವೂ ಇರಲಿಲ್ಲ.

ಆಗ ಅವನಿಗೆ ಸರ್ವಸಂಗರಹಿತವಾದ ಆತ್ಮದರ್ಶನವಾಯಿತು. ಅವನು ಅದನ್ನು ಕಂಡು ನಕ್ಕನು. ಅವನು ಮೋಕ್ಷಮಾರ್ಗದ ಜ್ಞಾನಕ್ಕಾಗಿ ಮತ್ತೆ ಯೋಗವನ್ನಾಶ್ರಯಿಸಿ ಮಹಾಯೋಗೇಶ್ವರನಾಗಿ ಅಂತರಿಕ್ಷವನ್ನು ಅತಿಕ್ರಮಿಸಿದನು. ಬಳಿಕ ನಾರದರ ಬಳಿಗೆ ಬಂದು ಅವರಿಗೆ ಪ್ರದಕ್ಷಿಣೆಯನ್ನು ಮಾಡಿ ಆ ಪರಮ ಋಷಿಗಳಿಗೆ ತನ್ನ ಯೋಗವನ್ನು ತಿಳಿಯಿಸಿದನು. "ಎಲೈ ತಪೋಧನರಾದ, ಮಹಾಕಾಂತಿಯುಕ್ತರಾದ ನಾರದರೆ, ಮಾರ್ಗವನ್ನು ಕಂಡುಕೊಂಡೆನು. ತಮಗೆ ಸ್ವಸ್ತಿಯಾಗಲಿ! ತಮ್ಮ ಪ್ರಸಾದದಿಂದ ಹೊರಟಿರುತ್ತೇನೆ, ನನಗೆ ಇಷ್ಟವಾದ ಗತಿಯನ್ನು ಪಡೆದುಕೊಳ್ಳುವೆನು."

ಹೀಗೆಂದು ನಾರದರ ಅನುಮತಿಯನ್ನು ಪಡೆದುಕೊಂಡು ದ್ವೈಪಾಯನ ಪುತ್ರನಾದ ಶುಕನು, ಅವರಿಗೆ ನಮಸ್ಕರಿಸಿ, ಮತ್ತೆ ಯೋಗವನ್ನಾಶ್ರಯಿಸಿ ಅಂತರಿಕ್ಷಕ್ಕೇರಿದನು. ಕೈಲಾಸದ ಮೇಲ್ಭಾಗದಿಂದ ಮೇಲಕ್ಕೆ ಹಾರಿ ಅಂತರಿಕ್ಷದಲ್ಲಿಯೇ ವಾಯುರೂಪದಿಂದ ಸಂಚರಿಸುತ್ತಾ ಮೇಲಕ್ಕೇರಿದನು.

---

* ಸಂಪುಟ 42; ಸಂಚಿಕೆ 9; ಮೇ 1973

ವೈನತೇಯನಂತೆ ಬೆಳಗುತ್ತಾ ಮನೋವೇಗವಾಯುವೇಗಗಳಿಂದ ಮೇಲಕ್ಕೇರುತ್ತಿರುವ ಆ ದ್ವಿಜಶ್ರೇಷ್ಠನನ್ನು ಸಮಸ್ತಪ್ರಾಣಿಗಳು ನೋಡುತ್ತಿದ್ದವು. ಮೂರು ಲೋಕಗಳನ್ನೂ ನಿಶ್ಚಿತಬುದ್ಧಿಯಿಂದ ಸಮನಾಗಿ ಬಗೆಯುತ್ತಾ ಆ ಅಗ್ನಿಸೂರ್ಯಸಮಾನತೇಜಸ್ಸುಳ್ಳ ಶುಕನು ದೀರ್ಘವಾದ ಮಾರ್ಗವನ್ನು ನಡೆಯುತ್ತಿದ್ದನು. ಹೀಗೆ ಒಂದೇ ಮನಸ್ಸಿನಿಂದ ಬೇರೆ ಕಡೆಗೆ ಚಲಿಸದೆ, ಏತಕ್ಕೂ ಅಂಟದೆ ಇರುತ್ತಿದ್ದ ಆತನನ್ನು ಸ್ಥಾವರಜಂಗಮಪ್ರಾಣಿಗಳು ನೋಡುತ್ತಿದ್ದವು. ದೇವತೆಗಳು ತಕ್ಕಂತೆ ಯಥಾಶಕ್ತಿಯಾಗಿ ಹೂಮಳೆಯನ್ನು ಕರೆಯುತ್ತಾ ಅವನನ್ನು ಗೌರವಿಸಿದರು. ಆತನನ್ನು ಕಂಡು ಗಂಧರ್ವರೂ ಅಪ್ಸರರ ಗುಂಪುಗಳೂ ಋಷಿಗಳೂ ಸಿದ್ಧರೂ ಪರಮವಿಸ್ಮಯದಿಂದ 'ತಪಸ್ಸಿನಿಂದ ಸಿದ್ಧಿಯನ್ನು ಪಡೆದು ಶರೀರವನ್ನು ಕೆಳಕ್ಕೂ ಮುಖವನ್ನು ಮೇಲಕ್ಕೂ ಮಾಡಿಕೊಂಡು ನಮ್ಮ ಕಂಗಳಿಗೆ ರಂಜನೆಯನ್ನು ತಂದುಕೊಡುತ್ತಿರುವ ಈತನು ಯಾರೊ!' ಎನ್ನುತ್ತಿದ್ದರು.

ಆಗ ಆ ಪರಮಧರ್ಮಾತ್ಮನು ಮೂರು ಲೋಕದಲ್ಲಿಯೂ ವಿಖ್ಯಾತನಾಗಿ ಭಾಸ್ಕರನನ್ನೇ ನೆರೆನೋಡುತ್ತಾ ಮೌನದಿಂದ ಪೂರ್ವಾಭಿಮುಖನಾಗಿಯೇ ಹೋಗುತ್ತಿದ್ದನು! ಶಬ್ದದಿಂದ ಆಕಾಶವೆಲ್ಲವನ್ನೂ ಎಲ್ಲಾ ಕಡೆಯಲ್ಲಿಯು ತುಂಬುತ್ತಿರುವಂತೆ ತೋರುತ್ತಿದ್ದನು. ಹೀಗೆ ಹಾರಿಬರುತ್ತಿರುವ ಇವನನ್ನು ಕಂಡು ಎಲ್ಲಾ ಅಪ್ಸರೋಗಣಗಳೂ ಪರಮವಿಸ್ಮಿತರಾಗಿ ಸಂಭ್ರಮದಿಂದ "ಅಯ್ಯಾ ರಾಜನೆ, ಪಂಚಚೂಡರೇ ಮೊದಲಾದ ಅಪ್ಸರರು ಅರಳಿದ ಕಂಗಳಿಂದ ಯಾವದೋ ದೇವತೆಯು ಸರ್ವಸಂಶಯವುಕ್ತವಾಗಿ, ಸರ್ವಬಂಧಮುಕ್ತವಾಗಿ ನಿಶ್ಚಯವಾಗಿಯೂ ಇಲ್ಲಿಗೆ ಬಂದಿರುತ್ತದೆ" ಎಂದುಕೊಂಡರು.

ಬಳಿಕ ಆತನು ಮಲಯವೆಂಬ ಪರ್ವತಕ್ಕೆ ಬಂದನು; ಆ ಪರ್ವತದಲ್ಲಿ ಊರ್ವಶಿಯೂ ಪೂರ್ವಚಿತ್ತಿಯೂ ನಿತ್ಯವೂ ಇರುತ್ತಿರುವರು. ಅವರು ಬ್ರಹ್ಮರ್ಷಿಗಳಾದ ವ್ಯಾಸರ ಪುತ್ರನ ಈ ಉತ್ತಮಗತಿಯನ್ನು ಕಂಡು, 'ವೇದಾಭ್ಯಾಸನಿರತನಾದ ಈ ದ್ವಿಜನಿಗೆ ಇಷ್ಟುಬೇಗನೆ ಬುದ್ಧಿಯ ಸಮತೆಯು ಬಂದಿರುತ್ತದೆಯಲ್ಲ! ಹೀಗೆ ಚಂದ್ರನಂತೆ ಆಕಾಶದಲ್ಲಿ ಸಂಚರಿಸುತ್ತಿರುವನಲ್ಲ! ಪಿತೃಶುಶ್ರೂಷೆಯಿಂದ ಈತನಿಗೆ ಇಂಥ ಉತ್ತಮವಾದ ಬುದ್ಧಿಯು ಬಂದಿದೆ. ಈತನು ಪಿತೃಭಕ್ತನು, ತಪಸ್ಸಿನಲ್ಲಿ ದಾರ್ಢ್ಯವನ್ನು ಹೊಂದಿದವನು, ತಂದೆಗೆ

ಅತಿಪ್ರಿಯನಾದವನು. ಇವನಲ್ಲಿಯೇ ನೆಟ್ಟಿದ್ದ ಮನಸ್ಸಿನ ಆ ತಂದೆಯು ಈತನನ್ನು ಹೇಗೆ ಕಳುಹಿಸಿಕೊಟ್ಟನೋ!'- ಎನ್ನುತ್ತಿದ್ದರು. ಊರ್ವಶಿಯ ಮಾತನ್ನು ಕೇಳಿದ ಪರಮಧರ್ಮಜ್ಞನಾದ ಶುಕನು ಆ ಮಾತಿನಲ್ಲಿಯೇ ಮನಸ್ಸಿಟ್ಟು ಎಲ್ಲಾ ಕಡೆಗೂ ನೋಡುತ್ತಿದ್ದನು. ಆತನು ಆಗ ಅಂತರಿಕ್ಷವನ್ನೂ ಬೆಟ್ಟಗಳನ್ನೂ ವನಗಳನ್ನೂ ಕಾಡುಗಳನ್ನೂ ಸರೋವರಗಳನ್ನೂ ನದಿಗಳನ್ನೂ ನೋಡಿದನು.

ಆ ದ್ವೈಪಾಯನಪುತ್ರನಾದ ಶುಕನನ್ನು ದೇವತೆಗಳೆಲ್ಲರೂ ಕೈಮುಗಿದು ಕೊಂಡು ನೋಡುತ್ತಿದ್ದರು! ಅವರೆಲ್ಲರನ್ನೂ ಕುರಿತು ಪರಮಧರ್ಮಜ್ಞನಾದ "ಶುಕನು "ತಂದೆಯು 'ಶುಕನೆ'! ಎಂದು ಕೂಗುತ್ತಾ ನನ್ನನ್ನು ಹಿಂಬಾಲಿಸಿದರೆ, ನೀವೆಲ್ಲರೂ ಕೂಡಲೆ ಸಮಾಹಿಚಿತ್ತರಾಗಿ ಅವರಿಗೆ ಪ್ರತಿವಚನವನ್ನು ಕೊಡಬೇಕು. ನನ್ನ ಮೇಲಿನ ಪ್ರೀತಿಯಿಂದ ನೀವೆಲ್ಲರೂ ನನ್ನ ಮಾತನ್ನು ನಡೆಯಿಸಿಕೊಡಬೇಕು!" ಎಂದನು."

ಇಂತೆಂದ ಶುಕನ ಮಾತನ್ನು ಕೇಳಿದ ಸರ್ವದಿಕ್ಕುಗಳೂ ಕಾನನಗಳೂ ಸಮುದ್ರಗಳೂ ನದಿಗಳೂ ಬೆಟ್ಟಗಳೂ- ಎಲ್ಲಾ ಕಡೆಯಿಂದಲೂ "ಎಲೈ ವಿಪ್ರನೆ, ನೀನು ಅಪ್ಪಣೆಮಾಡಿದಂತೆಯೇ ಅವಶ್ಯವಾಗಿ ಮಾಡುವೆವು. ಋಷಿಯು ನಿನ್ನನ್ನು ಕೂಗಿ ಕರೆದರೆ ನಾವೆಲ್ಲರೂ ಉತ್ತರವನ್ನು ಕೊಡುವೆವು" ಎಂದವು.

* * * * *

## 46. ಶುಕನಿಗೆ ನಾರದರ ಉಪದೇಶ*
## (ಶುಕನಿಗೆ ಪರಮಪದ ಪ್ರಾಪ್ತಿ)
## (7)

ಬಳಿಕ ಭೀಷ್ಮಾಚಾರ್ಯರಿಂತೆಂದರು: "ಎಲೈ ಯುಧಿಷ್ಠಿರನೆ, ಈ ಮಾತನ್ನು ಹೇಳಿದ ಬಳಿಕ ಮಹಾತಪಸ್ವಿಯಾದ ಶುಕನು ಬ್ರಹ್ಮರ್ಷಿಯ ಸಿದ್ಧಿಯನ್ನು ಪಡೆಯುವ ಉದ್ದೇಶದಿಂದ ನಾಲ್ಕು ಪ್ರಕಾರದ ದೋಷಗಳನ್ನು ತಪ್ಪಿಸಿಕೊಂಡು ಮುಂದು ವರಿದನು. ಎಂಟು ಪ್ರಕಾರದ ತಮೋಗುಣವನ್ನೂ ಐದು ಬಗೆಯ ರಜೋಗುಣ ವನ್ನೂ ತ್ಯಜಿಸಿ, ಬಳಿಕ ಆ ಬುದ್ಧಿವಂತನು ಸತ್ತ್ವವನ್ನೂ ತ್ಯಜಿಸಿದನು. ಅದೇ ಒಂದು

---

* ಸಂಪುಟ 42; ಸಂಚಿಕೆ 10; ಜೂನ್ 1973

ಅದ್ಭುತವಾದಂತೆ ಆಯಿತು. ಬಳಿಕ ಆ ಲಿಙ್ಗರಹಿತವಾದ ನಿತ್ಯನಿರ್ಗುಣಬ್ರಹ್ಮ ದಲ್ಲಿ ಹೊಗೆಯಿಲ್ಲದ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದನು.

ಆ ಕ್ಷಣದಲ್ಲಿ ಕೊಳ್ಳಿಗಳು ಬೀಳಲಾರಂಭಿಸಿದವು; ದಿಕ್ಕುಗಳೆಲ್ಲವೂ ಸುಡಲಾರಂಭಿಸಿದವು; ಭೂಮಿಯು ನಡುಗಲಾರಂಭಿಸಿತು. ಇದೊಂದು ಅದ್ಭುತ ಘಟನೆಯಾಯಿತು. ಮರಗಳಿಂದ ಕೊಂಬೆಗಳು ಉದುರ ಲಾರಂಭಿಸಿದವು; ಪರ್ವತಗಳಿಂದ ಶಿಖರಗಳು ಕಳಚಿಬಿದ್ದವು. ಗಿರಿರಾಜ ಹಿಮವಂತನು ಸೀಳಿ ಕೊಂಡನೋ ಎಂಬಂತೆ ಖಟಿಲ್ ಖಟಿಲ್– ಎಂಬ ಶಬ್ದವಾಯಿತು. ಸೂರ್ಯನು ಬೆಳಗದೆ ಮಂಕಾದನು. ಬೆಂಕಿಯು ಜ್ವಲಿಸದೆ ಇದ್ದಿತು. ಮಡುಗಳೂ ನದಿಗಳೂ ಪ್ರಕ್ಷುಬ್ಧವಾದವು. ಇಂದ್ರನು ರುಚಿಕರವೂ ಸುಗಂಧಯುಕ್ತವೂ ಆದ ಜಲವನ್ನು ಮಳೆಗರೆದನು. ವಾಯುವೂ ದಿವ್ಯವಾದ ವಾಸನೆಯನ್ನು ಬೀರುವ ಶುಚಿಯಾದ ಗಾಳಿಯನ್ನು ಬೀಸುವಂತೆ ಮಾಡಿದನು.

ಎಲೈ ಭರತನಂದನನೆ, ಆಗ ಶುಕನಿಗೆ ಎರಡು ದಿವ್ಯವಾದ ಬಿಳಿಯ ಮತ್ತು ಹಳದಿಯ ಬೆಳ್ಳಿಯ ಮತ್ತು ಚಿನ್ನದ ಶಿಖರಗಳು ಕಾಣಿಸಿದವು; ಅವು ನೂರು ಯೋಜನದಷ್ಟು ವಿಸ್ತಾರವಾಗಿ ಅಡ್ಡಡ್ಡಲಾಗಿಯೂ ಮೇಲಕ್ಕೂ ಹರಡಿಕೊಂಡು ಹೊಳೆಯುತ್ತಿದ್ದವು. ಆಗ ಶುಕನು ನಿಶ್ಶಂಕನಾಗಿ ಹಾಗೆಯೇ ತಪಸ್ಸುಮಾಡುತ್ತಿದ್ದನು. ಆಗ ಆ ಎರಡು ಕೋಡುಗಲ್ಲುಗಳೂ ಇದ್ದಕ್ಕಿದ್ದಂತೆ ಇಬ್ಭಾಗವಾಗಿ ಕಾಣಿಸಿಕೊಂಡವು. ಮಹಾರಾಜನೆ, ಅದೊಂದು ಅದ್ಭುತದರ್ಶನ ವಾಗಿದ್ದಿತು. ಬಳಿಕ ಅವನು ಆ ಪರ್ವತದ ಕೋಡುಗಲ್ಲು ಗಳಿಂದ ತಟ್ಟನೆ ಹೊರಕ್ಕೆ ಬಂದನು. ಆ ಪರ್ವತವು ಅವನ ಗತಿಗೆ ಯಾವ ಅಡ್ಡಿಯನ್ನೂ ಮಾಡಲಿಲ್ಲ. ಇದನ್ನು ಕಂಡು ಎಲ್ಲಾ ದೇವತೆಗಳು ಗಂಧರ್ವರೂ ಋಷಿಗಳೂ ಇನ್ನೂ ಬೇರೆಯ ಆ ಬೆಟ್ಟದಲ್ಲಿದ್ದ ನಿವಾಸಿಗಳೂ ಒಟ್ಟಿಗೆ ಕೂಗುವ ಶಬ್ದವು ಎದ್ದುಮೂಡಿತು. ಎಲೈ ಭರತವಂಶೋತ್ಪನ್ನನೆ, ಶುಕನು ಈಚೆಗೆ ಹಾರಿದುದರಿಂದ ಬೆಟ್ಟವು ಎರಡು ಭಾಗವಾಗಿ ಸೀಳಿಕೊಂಡಿದ್ದನ್ನು ಕಂಡು ಎಲ್ಲೆಲ್ಲಿಯೂ 'ಸಾಧು ಸಾಧು! ಬಹಳ ಚೆನ್ನಾಗಿದೆ, ಬಹಳ ಚೆನ್ನಾಗಿದೆ!' ಎಂದು ಅವರು ಕೂಗಿ ಹೇಳಿದ ಧ್ವನಿಯು ಎಲ್ಲಾ ಕಡೆಯಲ್ಲಿಯೂ ಕೇಳಬಂದಿತು.

ಎಲೈ ಮಹಾರಾಜನೆ, ಆತನನ್ನು ದೇವತೆಗಳೂ ಗಂಧರ್ವರೂ ಋಷಿಗಳೂ ವಿದ್ಯಾಧರಗಣಗಳೂ ಪೂಜಿಸುತ್ತಿದ್ದವು. ಅವನು ಹೀಗೆ ಮೇಲಕ್ಕೇರುತ್ತಿರಲು ಅಂತರಿಕ್ಷವೆಲ್ಲವೂ ದಿವ್ಯಪುಷ್ಪಗಳಿಂದ ತುಂಬಿಹೋಯಿತು. ಆ ಬಳಿಕ ರಮ್ಯದ ಮಂದಾಕಿನೀ (ನದಿ)ಯನ್ನು ಮೀರಿಹೋಗುತ್ತಿರುವ ಆ ಧರ್ಮಾತ್ಮನಾದ ಶುಕನು ಹೂಬಿಟ್ಟ ವೃಕ್ಷಗಳ ಕಾನನದಿಂದ ಆವೃತವಾಗಿರುವ ಆ ಆಕಾಶಗಂಗೆಯನ್ನು ಕಂಡನು. ಅದರಲ್ಲಿ ಜಲಕ್ರೀಡೆಯನ್ನು ಆಡುತ್ತಿದ್ದ ಅಪ್ಸರಸ್ತ್ರೀಯರು ಬಾಹ್ಯಧ್ಯಾನರಹಿತನಾಗಿದ್ದ ಆ ಶುಕನನ್ನು ಕಂಡೂ ವಸ್ತ್ರಾಚ್ಛಾದನವನ್ನು ಮಾಡಿಕೊಳ್ಳದೆಯೇ ಇರುತ್ತಿದ್ದರು.

ಹೀಗೆ ಶುಕನು ಮೇಲಕ್ಕೆರುತ್ತಿದ್ದದ್ದನ್ನು ಕಂಡು ತಂದೆಯಾದ ವ್ಯಾಸರು ಉತ್ತಮಗತಿಯನ್ನಾಶ್ರಯಿಸಿ ಹಿಂಬಾಲಿಸುತ್ತಿದ್ದರು. ಶುಕನಾದರೋ ವಾಯುವಿಗಿಂತಲೂ ವೇಗವಾಗಿರುವ ಗತಿಯನ್ನು ಆಶ್ರಯಿಸಿ ಸರ್ವಭೂತಗಳಲ್ಲಿರುವ ತನ್ನ ಪ್ರಭಾವವನ್ನು ಪ್ರಕಟಿಸಿಬಿಟ್ಟನು.

ಮಹಾತಪಸ್ವಿಗಳಾದ ವ್ಯಾಸರು ಇನ್ನೊಂದು ಮಹಾಯೋಗಗತಿಯನ್ನು ಅವಲಂಬಿಸಿಕೊಂಡು ನಿಮಿಷಮಾತ್ರದಲ್ಲಿ ಶುಕನು ಹೋಗುತ್ತಿದ್ದ ಕಡೆಗೆ ಬಂದು ಪರ್ವತಾಗ್ರವನ್ನು ಎರಡಾಗಿ ಸೀಳಿಕೊಂಡು ಶುಕನು ಹೊರಟಿದ್ದನ್ನು ಕಂಡರು. ಆಗ ಅಲ್ಲಿದ್ದ ಋಷಿಗಳೂ ಅವರ ಮಗನ ಅದ್ಭುತಕರ್ಮವನ್ನು ಹೇಳಿದರು. ಆಗ ವ್ಯಾಸರು 'ಶುಕನೆ!'ಎಂದು ದೀರ್ಘಸ್ವರದಿಂದ ಕೂಗಿದರು. ಅದನ್ನು ಕೇಳಿ ಶುಕನು ಮೂರು ಲೋಕಗಳೂ ಪ್ರತಿಧ್ವನಿಕೊಡುವಂತೆ ಸರ್ವಗತನಾಗಿ ಸರ್ವಾತ್ಮನಾಗಿ ಸರ್ವತೋಮುಖನಾಗಿ 'ಭೋಃ'ಎಂದು ಪ್ರತಿವಚನವನ್ನು ಕೊಟ್ಟನು. ಆಗ 'ಭೋಃ'ಎಂಬ ಏಕಸ್ವರದಿಂದ ಸ್ಥಾವರಜಂಗಮಜಗತ್ತೆಲ್ಲವೂ ಪ್ರತಿಧ್ವನಿಯನ್ನು ಕೊಟ್ಟಿತು. ಅಂದಿನಿಂದ ಎಲ್ಲಾ ಪ್ರಾಣಿಗಳೂ ಕೊಟ್ಟ ಪ್ರತಿಧ್ವನಿಯನ್ನು ಗಿರಿಗುಹೆಗಳ ಬಳಿಯಿಂದ ಈಗಲೂ ಕೊಡುತ್ತಲೇ ಇರುವವು. ಆಗ ಶುಕನು ತನ್ನ ಪ್ರಭಾವವನ್ನು ತೋರಿಸಿಕೊಂಡು ಅಂತರ್ಹಿತನಾಗಿ ಶಬ್ದಾದಿಗುಣಗಳನ್ನು ಬಿಟ್ಟು ಪರಮಪದವನ್ನೈದಿದನು.

ಅಪರಿಮಿತತೇಜಸ್ವಿಯಾದ ಪುತ್ರನ ಮಹಿಮೆಯನ್ನು ಕಂಡು, ಪುತ್ರನನ್ನೇ ಮನಸ್ಸಿನಲ್ಲಿ ಚಿಂತನೆಮಾಡುತ್ತಾ ವ್ಯಾಸರು ಪರ್ವತದ ತಪ್ಪಲಿನಲ್ಲಿ ಕುಳಿತರು. ಆ

ಋಷಿಯು ಹತ್ತಿರವಾಗಲು ಅಲ್ಲಿದ್ದ ಅಪ್ಸರಸ್ತ್ರೀಯರು ಕೆಲವರು ನೀರಿನೊಳಗೇ ಮುಳುಗಿಕೊಂಡರು; ಕೆಲವರು ಪೊದರುಗಳೊಳಗೆ ಅಡಗಿಕೊಂಡರು; ಕೆಲವರು ವಸ್ತ್ರಗಳನ್ನು ಧರಿಸಿಕೊಂಡರು. ಆಗ ಮಗನು ಮುಕ್ತಸಂಗನಾಗಿರುವದನ್ನು ಕಂಡು ವ್ಯಾಸರು ಸುಪ್ರೀತರಾದರು. ತಾವು ಆಸಕ್ತರಾಗಿರುವದನ್ನು ತಿಳಿದು ನಾಚಿಕೆಗೆ ಈಡಾದರು. ಅವರ ಬಳಿಗೆ ದೇವಗಂಧರ್ವರೊಡಗೂಡಿ ಮಹಾಗಣಗಳಿಂದ ಪೂಜಿತನಾಗಿ ಪಿನಾಕಪಾಣಿಯಾದ ಶಂಕರನು ಬಂದನು. ಶೋಕದಿಂದ ಸಂತಪ್ತರಾಗಿದ್ದ ಆ ಕೃಷ್ಣದ್ವೈಪಾಯನರನ್ನು ಸಂತೈಸುತ್ತಾ "ಎಲೈ ಬ್ರಾಹ್ಮಣೋತ್ತಮನೆ, ಭೂಮಿ, ಜಲ, ವಾಯು, ಆಕಾಶಗಳಿಗೆ ಸಮಾನವಾದ ವೀರ್ಯವುಳ್ಳ ಪುತ್ರನು ಬೇಕೆಂದು ನೀನು ವರವನ್ನು ಕೇಳಿಕೊಂಡಿದ್ದೆಯಷ್ಟೆ? ನನ್ನ ಪ್ರಸಾದದಿಂದ ಬ್ರಹ್ಮ ತೇಜೋಮಯನೂ ಶುಚಿಯೂ ಆದ ಮಗನನ್ನು ಪಡೆದುಕೊಂಡೆ, ಜಿತೇಂದ್ರಿಯ ರಲ್ಲದವರಿಗೆ ಸಿಕ್ಕಲಾರದ ಗತಿಯನ್ನು ಅವನು ಈಗ ಪಡೆದುಕೊಂಡಿರುತ್ತಾನೆ. ಪರ್ವತಗಳು ಇರುವವರೆಗೂ ನಗರಗಳು ಇರುವವರೆಗೂ ನಿನ್ನ ಅಕ್ಷಯಕೀರ್ತಿಯು ಮಗನ ಕೀರ್ತಿಯೊಡನೆ ನಿಂತಿರುವಾಗ, ಮಹಾಮುನಿಯೆ, ನನ್ನ ಪ್ರಸಾದದಿಂದ ಮಗನಂತೆ ಇರುವ ಛಾಯೆಯು ನಿನ್ನ ಹಿಂದೆಯೇ ಇರುತ್ತಿರುವದು" ಎಂದು ನುಡಿದನು. ಹೀಗೆ ಸಾಕ್ಷಾತ್ ರುದ್ರನಿಂದ ಅನುನೀತರಾಗಿ (ವ್ಯಾಸರು) ತಮ್ಮ ಸುತ್ತಲೂ ಆ ಬಗೆಯ ಛಾಯೆಯನ್ನು ಕಂಡು ಪರಮಸಂತೋಷದಿಂದ ಯುಕ್ತರಾದರು.

"ಎಲೈ ರಾಜನೆ, ನೀನು ಕೇಳಿದ ಶುಕನ ಜನ್ಮವನ್ನೂ ಸದ್ಗತಿಯನ್ನೂ ಕುರಿತ ಈ ಆಖ್ಯಾನವನ್ನು ನನಗೆ ನಾರದರು ಹೇಳಿದ್ದರು. ಮಹಾಯೋಗಿ ಗಳಾದ ವ್ಯಾಸರೂ ಆಗಾಗ್ಗೆ ಹೇಳುತ್ತಿದ್ದರು. ಈ ಪುಣ್ಯಪ್ರದವಾದ ಮೋಕ್ಷಧರ್ಮ ದಿಂದೊಡಗೂಡಿರುವ ಈ ಇತಿಹಾಸವನ್ನು ಶಾಂತಿಯುಕ್ತನಾಗಿ ಯಾವಾತನು ಸ್ಮರಿಸುವನೋ ಅವನು ಪರಮಗತಿಯನ್ನೈದುವನು."

॥ ಓಂ ತತ್‌ಸತ್ ॥

## ಉಪಸಂಹಾರ - ಫಲಶ್ರುತಿ

### ಭಾರತಸಾವಿತ್ರಿ

ಮಹರ್ಷಿರ್ಭಗವಾನ್ ವ್ಯಾಸಃ ಕೃತ್ವೇಮಾಂ ಸಂಹಿತಾಂ ಪುರಾ ।
ಶ್ಲೋಕೈಶ್ಚತುರ್ಭಿರ್ಧರ್ಮಾತ್ಮಾ ಪುತ್ರಮಧ್ಯಾಪಯಚ್ಛುಕಮ್ ॥[1]
ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ ।
ಸಂಸಾರೇಷ್ವನುಭೂತಾನಿ ಯಾನ್ತಿ ಯಾಸ್ಯನ್ತಿ ಚಾಪರೇ ॥

ಹರ್ಷಸ್ಥಾನಸಹಸ್ರಾಣಿ ಭಯಸ್ಥಾನಶತಾನಿ ಚ ।
ದಿವಸೇ ದಿವಸೇ ಮೂಢಮಾವಿಶನ್ತಿ ನ ಪಣ್ಡಿತಮ್ ॥
ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ ।[2]
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥

ನ ಜಾತು ಕಾಮಾನ್ನ ಭಯಾನ್ನ ಲೋಭಾ-
ದ್ಧರ್ಮಂ ತ್ಯಜೇಜ್ಜೀವಿತಸ್ಯಾಪಿ[3] ಹೇತೋಃ ।
ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯಃ
ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ ॥

ಇಮಾಂ ಭಾರತಸಾವಿತ್ರೀಂ ಪ್ರಾತರುತ್ಥಾಯ ಯಃ[4] ಪಠೇತ್ ।
ಸ ಭಾರತಫಲಂ ಪ್ರಾಪ್ಯ ಪರಂ ಬ್ರಹ್ಮಾಧಿಗಚ್ಛತಿ ॥

ಪೂರ್ವದಲ್ಲಿ ಧರ್ಮಾತ್ಮನೂ ಪೂಜ್ಯನೂ ಮಹರ್ಷಿಯೂ ಆದ ವ್ಯಾಸನು

---

1 ಪುರಾ ಧರ್ಮಾತ್ಮಾ ಮಹರ್ಷಿಃ ಭಗವಾನ್ ವ್ಯಾಸಃ, ಇಮಾಂ ಸಂಹಿತಾಂ ಕೃತ್ವಾ ಚತುರ್ಭಿಃ ಶ್ಲೋಕೈಃ ಪುತ್ರಂ ಶುಕಂ ಅಧ್ಯಾಪಯತ್ (ಅ).

2 ಏಷಃ (ಅಹಮ್) ಊರ್ಧ್ವಬಾಹುಃ ವಿರೌಮಿ, ನ ಚ ಮೇ ಕಶ್ಚಿತ್ ಶೃಣೋತಿ (ಅ).

3 ಕಾಮಾತ್ ಧರ್ಮಂ ನ ಜಾತು ತ್ಯಜೇತ್, ಭಯಾತ್ ನ (ತ್ಯಜೇತ್), ಲೋಭಾತ್ ನ (ತ್ಯಜೇತ್), ಜೀವಿತಸ್ಯ ಹೇತೋರಪಿ (ನ ತ್ಯಜೇತ್), ಧರ್ಮೋ ನಿತ್ಯಃ, ಸುಖದುಃಖೇ ತು ಅನಿತ್ಯೇ, ಜೀವೋ ನಿತ್ಯಃ, ಅಸ್ಯ ಹೇತುಸ್ತು ಅನಿತ್ಯಃ

4 ಯಃ ಪ್ರಾತರುತ್ಥಾಯ ಇಮಾಂ ಭಾರತಸಾವಿತ್ರೀಂ ಪಠೇತ್ (ಅ).

ಈ (ಭಾರತ) ಸಂಹಿತೆಯನ್ನುಮಾಡಿ ನಾಲ್ಕು ಶ್ಲೋಕಗಳಿಂದ (ಅದನ್ನು ಸಂಗ್ರಹಿಸಿ) ಮಗನಾದ ಶುಕನನ್ನು ಓದಿಸಿದನು.

ತಾಯಿತಂದೆಗಳ (ಎಷ್ಟೋ) ಸಾವಿರಗಳು, ಮತ್ತು ಮಕ್ಕಳು ಹೆಂಡಿರ (ಎಷ್ಟೋ) ನೂರುಗಳು ಸಂಸಾರದಲ್ಲಿ ಅನುಭವಿಸಲ್ಪಟ್ಟವು,(ಈಗ) ಬರುತ್ತಲಿವೆ, ಬೇರೆ (ಎಷ್ಟೋ) ಮಂದಿಯೂ (ಮುಂದೆ) ಬರುವರು.

ಸಂತೋಷಕ್ಕೆ ಕಾರಣಗಳು ಸಾವಿರಾರು, ಹೆದರಿಕೆಗೆ ಕಾರಣಗಳು ನೂರಾರು- ದಿನದಿನದಲ್ಲಿಯೂ ಮೂಢನಾದವನನ್ನು ಬಂದು ಸೇರುತ್ತವೆ, ಪಂಡಿತನನ್ನು (ಸೇರುವದು) ಇಲ್ಲ.

ಇಗೋ, ಮೇಲಕ್ಕೆತ್ತಿದ ಭುಜಗಳುಳ್ಳವನಾಗಿ (ಮೇಲಕ್ಕೆ ಕೈಯೆತ್ತಿ) ಸಾರಿ ಹೇಳುತ್ತಿದ್ದೇನೆ. ನನ್ನ (ಮಾತನ್ನು) ಯಾರೂ ಕೇಳುವದಿಲ್ಲ (ಕೇಳುವದಿಲ್ಲವಲ್ಲ!) ಧರ್ಮದ ದೆಸೆಯಿಂದ ಅರ್ಥವೂ ಕಾಮವೂ (ಆಗುತ್ತವೆ); ಅದು ಏತಕ್ಕೋಸ್ಕರ ಮಾಡಲ್ಪಡುವದಿಲ್ಲ? (ಧರ್ಮದಿಂದಲೇ ಅರ್ಥವೂ ಕಾಮವೂ ಉಂಟಾಗುತ್ತವೆಯಲ್ಲ, ಅಂಥ ಧರ್ಮವನ್ನು ಏಕೆ ಅನುಸರಿಸಬಾರದು?)

ಕಾಮದ ದೆಸೆಯಿಂದ ಎಂದಿಗೂ ಧರ್ಮವನ್ನು ಬಿಡಬಾರದು, ಭಯದ ದೆಸೆಯಿಂದಲೂ (ಹೆದರಿಕೆಯಿಂದಲೂ) ಬಿಡಬಾರದು, ಲೋಭದ ದೆಸೆಯಿಂದಲೂ (ಲೋಭದಿಂದಲೂ) ಬಿಡಬಾರದು, ಪ್ರಾಣದ ಕಾರಣದಿಂದ ಕೂಡ ಬಿಡಬಾರದು. (ಆಸೆಯನ್ನು ಪೂರ್ತಿಮಾಡಿಕೊಳ್ಳುವದಕ್ಕಾಗಲಿ, ತನಗುಂಟಾಗಬಹುದಾದ ಕಷ್ಟಕ್ಕೆ ಹೆದರಿಯಾಗಲಿ, ಇದ್ದದ್ದು ಕಳೆದುಹೋಗಬಾರದೆಂದು ಜಿಪುಣತನದಿಂದಾಗಲಿ, ಧರ್ಮವನ್ನು ಬಿಡಬಾರದು; ತನ್ನ ಪ್ರಾಣವೇ ಹೋಗುವಂತಿದ್ದರೂ ಬಿಡಬಾರದು.) ಧರ್ಮವು ನಿತ್ಯವಾದದ್ದು, ಸುಖದುಃಖಗಳಾದರೋ ಅನಿತ್ಯವಾದವುಗಳು; ಜೀವನು ನಿತ್ಯನು, ಇವನ (ಸುಖದುಃಖಕ್ಕೆ) ಕಾರಣವಾದದ್ದಾದರೋ ಅನಿತ್ಯವು.

ಯಾವನು ಬೆಳಗ್ಗೆ ಎದ್ದು ಈ ಭಾರತಸಾವಿತ್ರಿಯನ್ನು ಹೇಳುತ್ತಾನೋ ಅವನು ಭಾರತ(ವನ್ನು ಓದಿದ) ಫಲವನ್ನು ಹೊಂದಿ ಪರಬ್ರಹ್ಮವನ್ನು ಪಡೆಯುತ್ತಾನೆ.

* * * * *

# ಪರಿಶಿಷ್ಟ

## ಶ್ರೀಶ್ರೀಗಳವರು ಅಧ್ಯಾತ್ಮಪ್ರಕಾಶ ಪತ್ರಿಕೆಯ ಅನೇಕ ಸಂಚಿಕೆಗಳಲ್ಲಿ ಬರೆದು ಪ್ರಕಟಿಸಿದ್ದ 81 ಲೇಖನಗಳ ಮೂಲದ ವಿವರಗಳನ್ನು ಸೂಚಿಸಿದೆ.

## ಭಾಗ - I ನಾರಾಯಣೀಯ

| ಸಂಖ್ಯೆ | ವಿಷಯ | ಸಂಪುಟ ಸಂಚಿಕೆ ತಿಂಗಳು ವರ್ಷ |
|---|---|---|
| 1. | ಸರ್ವಾಶ್ರಮಿಗಳಿಗೂ ಪೂಜ್ಯವಾಗಿರುವ ದೇವತೆ | 36-1- ಸೆಪ್ಟೆಂಬರ್ 1966 |
| 2. | ಪಾಂಚರಾತ್ರಶಾಸ್ತ್ರದ ಉತ್ಪತ್ತಿ | 36-2- ಅಕ್ಟೋಬರ್ 1966 |
| 3. | ಉಪರಿಚರವಸುವಿನ ಯಜ್ಞ | 36-3- ನವೆಂಬರ್ 1966 |
| 4. | ಉಪರಿಚರವಸುವಿಗೆ ಅಧೋಗತಿ, ಪುನರುತ್ಥಾನ | 36-6- ಫೆಬ್ರವರಿ 1967 |
| 5. | ನಾರದನು ಭಗವಂತನನ್ನು ಸ್ತುತಿಸಿದ್ದು | 36-7- ಮಾರ್ಚ್ 1967 |
| 6-1 | ನಾರದನಿಗೆ ಭಗವಂತನ ಉಪದೇಶ | 36-8- ಏಪ್ರಿಲ್ 1967 |
| 6-2 | ನಾರದನಿಗೆ ಭಗವಂತನ ಉಪದೇಶ | 36-9- ಮೇ 1967 |
| 6-3 | ನಾರದನಿಗೆ ಭಗವಂತನ ಉಪದೇಶ | 36-10- ಜೂನ್ 1967 |
| 7. | ಪಾಂಚರಾತ್ರಶಾಸ್ತ್ರದ ಗುರುಪರಂಪರೆ ಫಲಶ್ರುತಿ | 36-11- ಜುಲೈ 1967 |
| 8-1 | ಭಗವಂತನು ಬ್ರಹ್ಮಾದಿಗಳಿಗೆ ಉಪದೇಶಿಸಿದ ಪ್ರವೃತ್ತಿ ನಿವೃತ್ತಿ ಧರ್ಮಗಳ ರಹಸ್ಯ | 36-12- ಆಗಸ್ಟ್ 1967 |
| 8-2 | ಭಗವಂತನು ಬ್ರಹ್ಮಾದಿಗಳಿಗೆ ಉಪದೇಶಿಸಿದ ಪ್ರವೃತ್ತಿ ನಿವೃತ್ತಿ ಧರ್ಮಗಳ ರಹಸ್ಯ | 37-1- ಸೆಪ್ಟೆಂಬರ್ 1967 |
| 8-3 | ಭಗವಂತನು ಬ್ರಹ್ಮಾದಿಗಳಿಗೆ ಉಪದೇಶಿಸಿದ ಪ್ರವೃತ್ತಿ ನಿವೃತ್ತಿ ಧರ್ಮಗಳ ರಹಸ್ಯ | 37-2- ಅಕ್ಟೋಬರ್ 1967 |
| 9. | ಭಗವಂತನು ಅರ್ಜುನನಿಗೆ ತನ್ನ ನಾಮಗಳ ಉತ್ಪತ್ತಿಯನ್ನು ಮಾಹಾತ್ಮ್ಯವನ್ನು ತಿಳಿಸಿಕೊಟ್ಟದ್ದು | 37-3- ನವಂಬರ್ 1967 |
| 10-1 | ಶ್ರೀಕೃಷ್ಣಾರ್ಜುನ ಸಂವಾದ | 37-4- ಡಿಸೆಂಬರ್ 1967 |
| 10-2 | ಶ್ರೀಕೃಷ್ಣಾರ್ಜುನ ಸಂವಾದ | 37-5- ಜನವರಿ 1968 |
| 10-3 | ಶ್ರೀಕೃಷ್ಣಾರ್ಜುನ ಸಂವಾದ | 37-6- ಫೆಬ್ರವರಿ 1968 |
| 10-4 | ಶ್ರೀಕೃಷ್ಣಾರ್ಜುನ ಸಂವಾದ | 37-7- ಮಾರ್ಚ್ 1968 |

## ಭಾಗ - II ಶುಕಾನುಶಾಸನ

**(ಮೋಕ್ಷಧರ್ಮಪರ್ವ - 231ನೆ ಅಧ್ಯಾಯದಿಂದ)**

| | | |
|---|---|---|
| 19. | ಬ್ರಾಹ್ಮಣರ ಕರ್ತವ್ಯ , ಬ್ರಾಹ್ಮಣರಿಗೆ ಕೊಡುವ ದಾನದ ಮಹತ್ತ್ವ | 39-6- ಫೆಬ್ರವರಿ 1970 |
| 20. | ಬ್ರಾಹ್ಮಣನ ಕರ್ತವ್ಯ ಮತ್ತು ಕಾಲ ನದಿಯನ್ನು ದಾಟುವದಕ್ಕೆ ಉಪಾಯ | 39-7- ಮಾರ್ಚ್ 1970 |
| 21. | ಧ್ಯಾನಯೋಗ | 39-8- ಏಪ್ರಿಲ್ 1970 |
| 22. | ಬುದ್ಧಿಯ ಪ್ರಭಾವ, ಪ್ರಾಣಿಗಳಲ್ಲಿ ತಾರತಮ್ಯ | 39-9- ಮೇ 197 |
| 23. | ಕರ್ಮತತ್ತ್ವ, ಯುಗಧರ್ಮ, ಕಾಲಮಹತ್ತ್ವ | 39-10- ಜೂನ್ 1970 |
| 24. | ಜ್ಞಾನಸಾಧನ, ಜ್ಞಾನಮಹಿಮೆ | 39-11- ಜುಲೈ 1970 |
| 25. | ಯೋಗದಿಂದ ಪರಮಾತ್ಮಪ್ರಾಪ್ತಿ | 39-12- ಆಗಸ್ಟ್ 1970 |

## ಭಾಗ - III ಶುಕಾನುಪ್ರಶ್ನ

| | | |
|---|---|---|
| 26. | ಕರ್ಮಜ್ಞಾನಗಳ ತಾರತಮ್ಯ, ಬ್ರಹ್ಮಪ್ರಾಪ್ತಿಗೆ ಉಪಾಯ | 40-1- ಸೆಪ್ಟೆಂಬರ್ 1970 |
| 27. | ಬ್ರಹ್ಮಚರ್ಯಾಶ್ರಮ | 40-2- ಅಕ್ಟೋಬರ್ 1970 |
| 28. | ಗೃಹಸ್ಥಾಶ್ರಮ | 40-3- ನವಂಬರ್ 1970 |
| 29. | ವಾನಪ್ರಸ್ಥಾಶ್ರಮ | 40-4- ಡಿಸೆಂಬರ್ 1970 |
| 30-1 | ಸಂನ್ಯಾಸಾಶ್ರಮ | 40-5- ಜನವರಿ 1971 |
| 30-2 | ಸಂನ್ಯಾಸಾಶ್ರಮ | 40-6- ಫೆಬ್ರವರಿ 1971 |
| 31. | ಪರಮಾತ್ಮದರ್ಶನ | 40-7- ಮಾರ್ಚ್ 1971 |
| 32. | ಮಹಾಭೂತಾದಿ ತತ್ತ್ವಗಳ ವಿವೇಚನ | 40-8- ಏಪ್ರಿಲ್ 1971 |
| 33. | ಬುದ್ಧಿಯ ಹೆಚ್ಚುಗಾರಿಕೆ, ಪ್ರಕೃತಿ ಪುರುಷ ವಿವೇಕ | 40-9- ಮೇ 1971 |
| 34. | ಜ್ಞಾನಸಾಧನ ಮತ್ತು ಜ್ಞಾನಿಯ ಲಕ್ಷಣವೂ ಮಹಿಮೆಯೂ | 40-10- ಜೂನ್ 1971 |
| 35. | ಪರಮಶ್ರೇಷ್ಠ ಧರ್ಮ, ಜ್ಞಾನದಿಂದ ಮುಕ್ತಿ | 40-11- ಜುಲೈ 1971 |
| 36. | ಬ್ರಹ್ಮಜ್ಞಾನಿಯ ಲಕ್ಷಣ | 40-12- ಆಗಸ್ಟ್ 1971 |
| 37. | ಪಂಚಭೂತಗಳ ಕಾರ್ಯ | 41-1- ಸೆಪ್ಟೆಂಬರ್ 1971 |
| 38. | ಪರಬ್ರಹ್ಮಾನುದರ್ಶನ | 41-2- ಅಕ್ಟೋಬರ್ 1971 |

| | | |
|---|---|---|
| 39. | ಕಾಮವೃಕ್ಷ, ಶರೀರಪುರ | 41-3- ನವೆಂಬರ್ 1971 |
| 40. | ಪಂಚಭೂತಗಳ ಮತ್ತು ಮನೋಬುದ್ಧಿಗಳ ಗುಣಗಳು | 41-4- ಡಿಸೆಂಬರ್ 1971 |
| 41. | ವ್ಯಾಸರು ಶುಕನಿಗೆ ಧರ್ಮ, ವೈರಾಗ್ಯ ಪೂರ್ಣವಾದ ಉಪದೇಶವನ್ನು ಕೊಟ್ಟದ್ದು | 41-5- ಜನವರಿ 1972 |
| 42-1 | ವ್ಯಾಸರು ಶುಕನಿಗೆ ಮಾಡಿದ ಉಪದೇಶ | 41-6- ಫೆಬ್ರವರಿ 1972 |
| 42-2 | ವ್ಯಾಸರು ಶುಕನಿಗೆ ಮಾಡಿದ ಉಪದೇಶ | 41-7- ಮಾರ್ಚ್ 1972 |

## ಭಾಗ - IV ಶುಕವೃತ್ತಾಂತ

### (ಮೋಕ್ಷಧರ್ಮ 323ನೆಯ ಅಧ್ಯಾಯದಿಂದ)

| | | |
|---|---|---|
| 43-1 | ಶುಕವೃತ್ತಾಂತ | 41-8- ಏಪ್ರಿಲ್ 1972 |
| 43-2 | ಶುಕನಿಗೆ ವ್ಯಾಸರ ಉಪದೇಶ | 41-9- ಮೇ 1972 |
| 44-1 | ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು | 41-10- ಜೂನ್ 1972 |
| 44-2 | ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು | 41-11- ಜುಲೈ 1972 |
| 44-3 | ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು | 41-12- ಆಗಸ್ಟ್ 1972 |
| 44-4 | ಶುಕನಿಗೆ ಮಿಥಿಲಾನಗರಿಯಲ್ಲಿ ಆದ ಉಪಚಾರಗಳು | 42-1- ಸೆಪ್ಟೆಂಬರ್ 1972 |
| 45-1 | ವ್ಯಾಸನಾರದ ಸಮಾಗಮ | 42-2- ಅಕ್ಟೋಬರ್ 1972 |
| 45-2 | ವ್ಯಾಸನಾರದ ಸಮಾಗಮ | 42-3- ನವೆಂಬರ್ 1972 |
| 46-1 | ಶುಕನಿಗೆ ನಾರದರ ಉಪದೇಶ | 42-4- ಡಿಸೆಂಬರ್ 1972 |
| 46-2 | ಶುಕನಿಗೆ ನಾರದರ ಉಪದೇಶ | 42-5- ಜನವರಿ 1973 |
| 46-3 | ಶುಕನಿಗೆ ನಾರದರ ಉಪದೇಶ | 42-6- ಫೆಬ್ರವರಿ 1973 |
| 46-4 | ಶುಕನಿಗೆ ನಾರದರ ಉಪದೇಶ | 42-7- ಮಾರ್ಚ್ 1973 |
| 46-5 | ಶುಕನಿಗೆ ನಾರದರ ಉಪದೇಶ | 42-8- ಏಪ್ರಿಲ್ 1973 |
| 46-6 | ಶುಕನಿಗೆ ನಾರದರ ಉಪದೇಶ | 42-9- ಮೇ 1973 |
| 46-7 | ಶುಕನಿಗೆ ನಾರದರ ಉಪದೇಶ | 42-10- ಜೂನ್ 1974 |
| 47. | ಭಾರತ ಸಾವಿತ್ರೀ (ಸಂಸ್ಕೃತದ ಪ್ರಥಮ ಪುಸ್ತಕ ಪಾಠ 29) | |